# ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ (ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಕಾಟಂಲಿಂಗಯ್ಯ ಪಿ



ಮಾರ್ಗದರ್ಶಕರು
ಡಾ. ಗಂಗಾಧರ ದೈವಜ್ಞ
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ. ಮೋರ್ವಾಚಾರ್ ಎಂ
ಸಹ ಪ್ರಾಧ್ಯಾಪಕರು




ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೯

# ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳು

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು
ಕಾಟಂಲಿಂಗಯ್ಯ ಪಿ

ಮಾರ್ಗದರ್ಶಕರು
ಡಾ. ಗಂಗಾಧರ ದೈವಜ್ಞ
ಪ್ರಾಧ್ಯಾಪಕರು

ಸಹ ಮಾರ್ಗದರ್ಶಕರು
ಡಾ. ಪೂರ್ವಾಚಾರ್ ಎಂ
ಸಹ ಪ್ರಾಧ್ಯಾಪಕರು




ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೯

## ಸಂಶೋಧಕರ ಪ್ರಮಾಣ ಪತ್ರ

**"ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳು"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಗಂಗಾಧರ ದೈವಜ್ಞ** ಅವರ ಮಾರ್ಗದರ್ಶನದಲ್ಲಿ ಹಾಗೂ **ಡಾ ಪೂರ್ವಾಚಾರ್ ಎಂ** ಅವರ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

Kh. P

ದಿನಾಂಕ: 02/12/2019
ಸ್ಥಳ : ವಿದ್ಯಾರಣ್ಯ

**ಕಾಟಂಲಿಂಗಯ್ಯ ಪಿ**
ಸಂಶೋಧನಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಸಹ ಮಾರ್ಗದರ್ಶಕರ ದೃಢೀಕರಣ ಪತ್ರ

**ಕಾಟಂಲಿಂಗಯ್ಯ ಪಿ** ಇವರು **"ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳು"** ಎಂಬ ಶೀರ್ಷಿಕೆ ಮಹಾಪ್ರಬಂಧವನ್ನು ನನ್ನ ಸಹ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧ ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 03.12.2019
ಸ್ಥಳ : ವಿದ್ಯಾರಣ್ಯ

**ಡಾ. ಪೂರ್ವಚಾರ್ ಎಂ**
ಸಹ ಮಾರ್ಗದರ್ಶಕರು
ಸಮಾಜಶಾಸ್ತ್ರ ಅಧ್ಯಯನ ವಿಭಾಗ
ಸಹ್ಯಾದ್ರಿ ಕಲಾ ಕಾಲೇಜು,
ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ

**Dr. M. PURVACHAR**
M.A., Ph.D., PGDE, PGDPSW, PGDHRM, M.A.(Eng), MSW, MBA (HR)
Head and Research Guide
Dept. of Sociology
Sahyadri Arts College, Kuvempu University,
Shimoga, Karnataka State - 577 203.

## ಮಾರ್ಗದರ್ಶಕರ ದೃಢೀಕರಣ ಪತ್ರ

**ಕಾಟಂಲಿಂಗಯ್ಯ ಪಿ** ಇವರು **"ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳು"** ಎಂಬ ಶೀರ್ಷಿಕೆ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಪಿಎಚ್ ಡಿ(ಸಮಾಜಶಾಸ್ತ್ರ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 03-12-2019
ಸ್ಥಳ : ವಿದ್ಯಾರಣ್ಯ

**ಡಾ. ಗಂಗಾಧರ ದೈವಜ್ಞ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಪರಿವಿಡಿ

## ಕೋಷ್ಟಕಗಳ ವಿವರ

# ಅಧ್ಯಾಯ: ಒಂದು

## ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

ಪಿಠೀಕೆ

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಮಹತ್ವ

೧.೪ ಅಧ್ಯಯನದ ವಿಧಾನ

೧.೫ ಅಧ್ಯಯನದ ಸ್ವರೂಪ

೧.೬ ಇಲ್ಲಿಯವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

# ಅಧ್ಯಾಯ : ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

**ಪೀಠಿಕೆ**

ಭೌಗೋಳಿಕ ಹಾಗೂ ಸಾಂಸ್ಕೃತಿಕವಾಗಿ ಬಹುತ್ವಗಳನ್ನೊಳಗೊಂಡ ಭಾರತವು ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದೆ. ಹಾಗಾಗಿಯೇ ಇಲ್ಲಿನ ಬಹು ಸಂಸ್ಕೃತಿಯು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದನ್ನು ಕಾಣಬಹುದು. ಅದರಂತೆಯೇ ಕನ್ನಡನಾಡಿನಲ್ಲಿಯೂ ತನ್ನದೇಯಾದ ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚರಣೆ, ನಂಬಿಕೆಗಳಿವೆ. ಪ್ರಪಂಚದ ಇತರೆ ದೇಶಗಳಂತೆ ಹೆಣ್ಣನ್ನು ದ್ವಿತೀಯ ಸ್ಥಾನದಲ್ಲಿಯೇ ಇರಿಸಿ ನೋಡುವ ವ್ಯವಸ್ಥೆ ಇಲ್ಲಿದೆ. ಪುರುಷಶಾಹಿಯ ಶೋಷಣೆಯ ಅಧೀನಳಾಗಿಯೇ ಬದುಕಬೇಕೆಂಬ ಧೋರಣಾ ಮನೋಭಾವನೆ ಹೆಚ್ಚಾಗಿ ಕಂಡುಬರುತ್ತದೆ. ಬಾಲ್ಯದಿಂದಲೂ ತನ್ನ ಜೀವಿತದ ಕೊನೆಯವರೆಗೂ ಹೆಣ್ಣು ಪರಾವಲಂಬಿಯಾಗಿಯೇ ಇರಬೇಕಾದ ಅಸಹಾಯಕ ಸ್ಥಿತಿಯನ್ನು ಈ ವ್ಯವಸ್ಥೆ ಹುಟ್ಟುಹಾಕಿದೆ. ಬಾಲ್ಯವಿವಾಹ, ಸತಿಸಹಗಮನ, ಬಹುಪತ್ನಿತ್ವ, ಪರದಾ ಪದ್ಧತಿ ಹಾಗೂ ದೇವದಾಸಿ ಪದ್ಧತಿಯಂತಹ ಆಚರಣೆಗಳು ಮಹಿಳೆಯ ಸುತ್ತಲೇ ಸುತ್ತುತ್ತವೆ. ಪ್ರಸ್ತುತ ದಿನಗಳಲ್ಲಿ ಈ ವ್ಯವಸ್ಥೆಯಲ್ಲಿಯೂ ಸಾಮಾಜಿಕ ಬದಲಾವಣೆ ಮತ್ತು ಪ್ರಜ್ಞಾವಂತಿಕೆ ಉಂಟಾಗಿವೆಯೆಂದು ಹೇಳಲಾಗುವುದಾದರೂ ಅದು ಮಹಿಳೆಯ ವಿಚಾರದಲ್ಲಿ ಅಷ್ಟೇನೂ ಉಪಯೋಗಕ್ಕೆ ಬಂದಿಲ್ಲವೆನಿಸುತ್ತಿದೆ. ಏಕೆಂದರೆ ಧಾರ್ಮಿಕ ಪದ್ಧತಿಯ ಹೆಸರಿನಲ್ಲಿ ದೇವದಾಸಿಯಂತಹ ಪದ್ಧತಿ ಇನ್ನೂ ಜೀವಂತವಾಗಿ ಸಮಾಜದಲ್ಲಿ ಅಸ್ತಿತ್ವದಲ್ಲಿದೆ. ಈ ದೇವದಾಸಿಪದ್ಧತಿಯು ಮೇಲ್ನೋಟಕ್ಕೆ ಧಾರ್ಮಿಕ ಆಚರಣೆಯಾಗಿ ಕಂಡರೂ ಅದರ ಒಳಸುಳಿಯಲ್ಲಿ ವೇಶ್ಯಾವಾಟಿಕೆಯಂತಹ ಅನಿಷ್ಠ ಪರಂಪರೆಯೊಂದು ಅಡಗಿರುವುದನ್ನು ಸೂಕ್ಷವಾಗಿ ಗಮನಿಸಬಹುದು.

ಪ್ರಾಣಿಜಗತ್ತಿನಲ್ಲಿ ಹಸಿವು, ನೀರಡಿಕೆಯಂತೆ ಲೈಂಗಿಕತೆ ಎಂಬುದು ಸಹಜ ದೈಹಿಕ ಕ್ರಿಯೆಯಾಗಿದೆ. ಮಾನವನು ನಾಗರಿಕನು ಎನಿಸಿಕೊಂಡ ತರುವಾಯ ಲೈಂಗಿಕ ಕ್ರಿಯೆಗೆ ಸಂಬಂಧಿಸಿದಂತೆ ಹಲವು ಕಟ್ಟುಪಾಡುಗಳು ಸಮಾಜದಲ್ಲಿ ಚಾಲ್ತಿಗೆ ಬಂದವು. ಸೃಷ್ಟಿಕ್ರಿಯೆಗೆ ಸಂಬಂಧಿಸಿದಂತೆ ಅಣ್ಣ ತಂಗಿಯರ ಮಧ್ಯ ಅಥವಾ ತಂದೆ ಮಗಳ ಮಧ್ಯದ ಲೈಂಗಿಕ ಕ್ರಿಯೆಯಿಂದ ಈ ಜಗತ್ತು ಸೃಷ್ಟಿಗೊಂಡಿತು ಎಂಬ

ಕಥೆಯನ್ನು ಕೇಳುತ್ತೇವೆ. ಇದು ಕೇವಲ ಭಾರತೀಯರಲ್ಲಿ ಮಾತ್ರ ಇರುವ ನಂಬಿಕೆಯಲ್ಲ. ಜಗತ್ತಿನ ಬಹುತೇಕ ಎಲ್ಲಾ ಪ್ರದೇಶದೊಳಗಿರುವ ಜನರ ನಂಬಿಕೆಯಾಗಿದೆ. ಆಡಂ ಮತ್ತು ಈವ್ ಅವರ ಕಥೆಯನ್ನೇ ಉದಾಹರಣೆಗೆ ನೋಡಬಹುದು. ಭಾರತೀಯರ ಎಲ್ಲ ತಳಸಮುದಾಯಗಳ ಸೃಷ್ಟಿ ಪುರಾಣಗಳು ಇದನ್ನೇ ಪ್ರತಿಪಾದಿಸುವುದು. ಆದರೆ ನಾಗರಿಕತೆ ಬೆಳೆದಂತೆಲ್ಲ ಈ ರೀತಿಯ ಸಂಬಂಧಗಳು ನಿಷೇಧಿಸಲ್ಪಟ್ಟವು. ಅದಕ್ಕೆ ಮದುವೆ ಎನ್ನುವ ಒಂದು ಸಾಮಾಜಿಕ ವ್ಯವಸ್ಥೆ ಸೃಷ್ಟಿಗೊಂಡಿತು. ಆ ಮೂಲಕ ಮುಕ್ತ ಲೈಂಗಿಕತೆ ಎಂಬುದು ಪಾಪಕರವಾದದ್ದು, ಅನೀತಿಕರವಾದದ್ದು ಎನ್ನುವ ವಾದ ಸೃಷ್ಟಿಗೊಂಡಿತು. ಆದರೆ ಮಾನವನ ಲೈಂಗಿಕ ತೃಪ್ತಿಯೆಂಬುದು ಕೇವಲ ಮದುವೆಯಂತಹ ಸಾಮಾಜಿಕ ವ್ಯವಸ್ಥೆಯೇ ಪೂರ್ಣಗೊಳಿಸುವುದು ಎಂಬ ವಾದ ಹುಸಿಯೆಂಬುದನ್ನು ವೇಶ್ಯಾವಾಟಿಕೆಯಂತಹ ವೃತ್ತಿಗಳು ತಿಳಿಸುತ್ತವೆ. ಮನುಷ್ಯನ ಲೈಂಗಿಕತೆಯ ಕುರಿತಾದ ಮಾನಸಿಕ ಆಕಾಂಕ್ಷೆಯನ್ನು ಯಾವ ನೀತಿಗಳಾಗಲಿ, ಧಾರ್ಮಿಕ ವ್ಯವಸ್ಥೆಗಳಾಗಲಿ ತಡೆಯಲು ಅಸಮರ್ಥವಾದವೆಂದೇ ಹೇಳಬಹುದು. ಹೆಣ್ಣಿನ ಅಥವಾ ಗಂಡಿನ ಲೈಂಗಿಕ ಅತೃಪ್ತಿಯಿಂದಲೇ ವೇಶ್ಯಾವಾಟಿಕೆಯೆಂಬ ವ್ಯವಸ್ಥೆ ಹುಟ್ಟಿಕೊಂಡಿರಬೇಕು. ವೇಶ್ಯಾವಾಟಿಕೆಗೆ ಹುಸಿ ಧಾರ್ಮಿಕ ನೀತಿಗಳೇ ಕಾರಣವಾಗಿರಬೇಕು.

ವೇಶ್ಯಾವಾಟಿಕೆಯೆಂಬುದು ತುಂಬಾ ಪ್ರಾಚೀನ ಪದ್ಧತಿಗಳಲ್ಲಿ ಒಂದು. ಭಾರತ, ಪಶ್ಚಿಮ ಏಷ್ಯಾ, ಬ್ಯಾಬಿಲೋನಿಯ, ಪೂರ್ವಪ್ರಾಂತ್ಯ, ಮಧ್ಯಅಮೇರಿಕಾ, ಪಶ್ಚಿಮಆಫ್ರಿಕಾ, ಸಿರಿಯಾ, ಮಲೇಷಿಯಾ, ಅರೇಬಿಯಾ, ಈಜಿಪ್ಟ್, ಗ್ರೀಸ್ ಮತ್ತು ರೋಮ್ ಮೊದಲಾದ ದೇಶಗಳಲ್ಲಿ ವೇಶ್ಯಾ ಪದ್ಧತಿ ಆಸ್ತಿತ್ವದಲ್ಲಿದ್ದನ್ನು ಗ್ರೀಸ್ ಮತ್ತು ರೋಮ್‌ನ ಪ್ರಮುಖ ಇತಿಹಾಸಕಾರರು, ಸಾಹಿತಿಗಳು, ಪ್ರವಾಸಿ ಬರಹಗಾರರು ಗುರುತಿಸಿದ್ದಾರೆ. ಅವರು ನೀಡಿರುವ ವಿವರಗಳನ್ನು ಪ್ರಾಕ್ತನ ಸಾಕ್ಷ್ಯಧಾರಗಳೊಂದಿಗೆ ತುಲನೆ ಮಾಡಿ ಅಧ್ಯಯನ ಮಾಡಿದರೆ ಪ್ರಾಯಶಃ ಈ ಪದ್ಧತಿ ಬಹು ಹಿಂದಿನಿಂದಲೂ ಆಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆರಂಭಿಕವಾಗಿ ಧರ್ಮ–ದೇವರುಗಳ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದ ಈ ಪದ್ಧತಿ ಕ್ರಮೇಣ ಸಾಮಾಜಿಕ ಸ್ವರೂಪವನ್ನು ತಾಳಿ ಇಂದಿಗೂ ಆಸ್ತಿತ್ವದಲ್ಲಿದೆ.

ಭಾರತದಂತಹ ರಾಷ್ಟ್ರಗಳಲ್ಲಿ ವೇಶ್ಯಾವಾಟಿಕೆಯೆಂಬುದು ಬಡತನ, ವೈಧವ್ಯ, ಧಾರ್ಮಿಕ ಕಟ್ಟಳೆಗಳಂತಹ ಕಾರಣಗಳಿಗಾಗಿ ಹುಟ್ಟಿದೆ. ಕ್ರಿ.ಶ.ಏಳನೆಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ ದೇವಾಲಯಗಳ ನಿರ್ಮಾಣದ ಕಾರ್ಯಗಳು ಹೆಚ್ಚಾಗತೊಡಗಿದವು. ಇದರಿಂದಾಗಿ ಈ ದೇವದಾಸಿ ಪದ್ಧತಿಯು ಭಾರತೀಯ ಸಂಸ್ಕೃತಿಯಲ್ಲಿ ಆಳವಾಗಿ ಬೇರುಬಿಡಲು ಕಾರಣವಾಯಿತು. ಸೂರ್ಯ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದೆ. ಈ ದೇವಾಲಯದಲ್ಲಿ ದೇವದಾಸಿಯರ ಸಂಖ್ಯೆ ಹೆಚ್ಚಾಗಿದ್ದಿತು ಎಂದು ಇತಿಹಾಸಕಾರರು ಉಲ್ಲೇಖಿಸಿರುವುದನ್ನು ಗಮನಿಸಬಹುದು. ಹತ್ತನೆಯ ಶತಮಾನದ ಅಂತ್ಯದ ವೇಳೆಗೆ ದೇವದಾಸಿಯರ ಸಂಖ್ಯೆ ಹೆಚ್ಚುತ್ತಾ ಹೋಯಿತು ಎಂದು ಹೇಳಲಾಗುತ್ತದೆ. ಭಾರತದಲ್ಲಿ ಮುಸ್ಲಿಮರ ಆಕ್ರಮಣದ ಕಾಲದಿಂದಲೇ ದೇವದಾಸಿ ಪದ್ಧತಿ ಉತ್ತರ ಭಾರತದಲ್ಲಿ ಕಡಿಮೆಯಾಗುತ್ತಾ ಬಂದಿತು. "ಸೋಮನಾಥ ದೇವಾಲಯಗಳಂಥ ಅನೇಕ ದೇವಾಲಯಗಳನ್ನು,

ವಿಗ್ರಹಗಳನ್ನು ನಾಶಗೊಳಿಸಿ ಹಿಂದೂಗಳನ್ನು ಇಸ್ಲಾಂಧರ್ಮಕ್ಕೆ ಮತಾಂತರಿಸಿ ದೇವಾಲಯಗಳ ಸ್ಥಳದಲ್ಲಿ ಮಸೀದಿಗಳನ್ನು ಕಟ್ಟಿಸಿದಾಗ ಸಂಪೂರ್ಣವಾಗಿ ಈ ಪದ್ಧತಿ ಕೊನೆಗೊಂಡಿತು". ಆದರೆ ದಕ್ಷಿಣ ಭಾರತದಲ್ಲಿ ಹಿಂದೂ ರಾಜರುಗಳ ಆಳ್ವಿಕೆಯೆ ಇತ್ತು. ಹಾಗಾಗಿ ಈ ಪದ್ಧತಿ ಇಲ್ಲಿ ಬೆಳೆದು ಇಪ್ಪತ್ತನೆಯ ಶತಮಾನದ ವೇಳೆಗೆ ವ್ಯಾಪಾರೀಕರಣಗೊಂಡಿತು. ಹೀಗಾಗಿ ಪವಿತ್ರ ಸ್ಥಾನದಲ್ಲಿದ್ದ ಧಾರ್ಮಿಕ ದೇವದಾಸಿ ಪದ್ಧತಿ ಅವನತಿಗೊಂಡು ವೇಶ್ಯಾವೃತ್ತಿಯಾಗಿ ಪರಿವರ್ತನೆಗೊಂಡಿದೆ ಎಂದು ಹೇಳಬಹುದು.

ದೇವದಾಸಿ ಎಂದರೆ ದೇವರಿಗೆ ದಾಸಿಯಾದವಳು ಎಂದು ಅರ್ಥವಾಗುತ್ತದೆ. "ದೇವರದಾಸಿ, ಸೇವಕಿ, ಪವಿತ್ರದಾಸಿ, ದೇವಾಲಯದ ಕನ್ಯೆ, ದೇವಾಲಯದ ನರ್ತಕಿ, ದೇವರ ಗುಡಿಸೆಟ್ಟಿ ಮತ್ತು ದೇವರ ನಾಯಕಸಾನಿ" ಎಂಬ ಅರ್ಥಗಳಲ್ಲಿ ಇದನ್ನು ಬಳಸಲಾಗುತ್ತದೆ. ಈ ಪದ್ಧತಿಯಲ್ಲಿ ಚಿಕ್ಕ ಹುಡುಗಿಯರನ್ನು ದೇವ-ದೇವತೆಗಳ ಅಥವಾ ಪೂಜೆಗೊಂಡ ಯಾವುದೊ ಒಂದು ವಸ್ತುವಿನ ಎದುರಿಗೆ ಸಾರ್ವಜನಿಕ ಸಮಾರಂಭದಲ್ಲಿ ಆ ಕನ್ಯೆಯು ಕಲಿತ ಸಂಗೀತ ಹಾಗೂ ನರ್ತನೆಯನ್ನು ಪ್ರದರ್ಶಿಸಿ ಆ ದೈವಕ್ಕೆ ಅವಳನ್ನು ವಿವಾಹ ಮಾಡಿ ಅರ್ಪಿಸಲಾಗುತ್ತಿತ್ತು. ಹೀಗೆ ಅರ್ಪಣೆಗೊಂಡ ದೇವದಾಸಿಯರ ಬಗೆಗಳೆಂದರೆ ಪಾತರದವರು, ಬಸವಿಯರು, ಜೋಗತಿಯರು. ಧಾರ್ಮಿಕ ಕಟ್ಟುಪಾಡುಗಳು, ಮೂಢನಂಬಿಕೆ, ದೈವಭಕ್ತಿ ಮತ್ತು ಪರಂಪರೆ ಹೀಗೆ ವಿವಿಧ ಹೆಸರುಗಳಲ್ಲಿ ಪುರುಷ ಪ್ರಧಾನ್ಯ ಮೌಲ್ಯಗಳು ತಮ್ಮ ಆಸೆಯನ್ನು ತೀರಿಸಿಕೊಳ್ಳಲು ಸಂಚು ಹೂಡಿದವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ಮೇಲೆ ಹೇಳಿದ ಎಲ್ಲಾ ನಂಬಿಕೆಗಳನ್ನು ಮೌಲ್ಯವಾಗಿಸಿ ಬಡತನ ಮತ್ತು ಹಸಿವಿನಿಂದ ಬಳಲುತ್ತಿದ್ದ ಕೆಳಜಾತಿಯ ಹೆಣ್ಣು ಮಕ್ಕಳ ಮೇಲೆ ಹೇರಿರುವುದು ಕಂಡುಬರುತ್ತದೆ. ಇವರನ್ನು ಪಾತರದವರು, ದೇವದಾಸಿಯರು, ಬಸವಿಯರು, ನಾಯಕಸಾನಿಯರು, ಸೂಳೆಯರು, ಜೋಗತಿಯರು, ವೇಶ್ಯೆಯರು ಎಂದು ಕರೆಯತೊಡಗಿದರು. ಇವು ಒಂದಕ್ಕೊಂದು ಸೂಕ್ಷ್ಮವಾದ ಭಿನ್ನತೆ ಮತ್ತು ಗುಣಲಕ್ಷಣಗಳನ್ನು ಹೊಂದಿವೆ. ಆದರೆ ಇವರೆಲ್ಲರು ಬಡವರು ಮತ್ತು ಕೆಳಜಾತಿಗೆ ಸೇರಿದ ಹೆಣ್ಣುಗಳಾಗಿದ್ದರು ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

“ಹೆಣ್ಣನ್ನು ನರಕಕ್ಕೆ ದಾರಿ ಎಂದವರು ಶಂಕರಾಚಾರ್ಯರು. ಯುರೋಪಿನ ಧರ್ಮಭೋದಕನಾದ ಟ್ಯಾರ್‌ಟ್ಯೂಯಿಲಿನ್ ಎಂಬ ವ್ಯಕ್ತಿಯು ಮಹಿಳೆ ಸೈತಾನಿನ ಬಾಗಿಲು, ದೈವೀ ನಿಯಮ ಅಥವಾ ಧರ್ಮವನ್ನು ಪರಿತ್ಯಜಿಸುವ ಮೊಟ್ಟಮೊದಲ ವ್ಯಕ್ತಿ ಎಂದು ತಿಳಿಸುತ್ತಾನೆ. ನಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂದು ಮನು ತಿಳಿಸಿರುವನು”[7] ಹೆಣ್ಣು ಕತ್ತಿಯ ಅಲುಗಿನಂತೆ, ಅವಳು ಭೋಗದ ವಸ್ತು ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ ಆದರೆ ವೇದಕಾಲಗಳಲ್ಲಿ ಹೆಣ್ಣು ಯಜ್ಞ ಯಾಗಾದಿಗಳಲ್ಲಿ ಪುರುಷರಂತೆ ಭಾಗವಹಿಸುತ್ತಿದ್ದಳು. ಮಾತೃ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿಗೆ ತುಂಬಾ ಗೌರವವನ್ನು ಕೊಡಲಾಗುತ್ತಿತ್ತು. ಮನುವಿನ ನಂತರದ ಘಟ್ಟದಿಂದ ಹೆಣ್ಣನ್ನು ಎರಡನೆಯ ದರ್ಜೆಯವಳನ್ನಾಗಿ ಗುರುತಿಸುವ ಪರಂಪರೆ ಪ್ರಾರಂಭವಾಯಿತು ಎಂದು ಹೇಳಬಹುದು.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮುಕ್ತಕಾಮದಲ್ಲಿ ತೊಡಗುವ ಪುರುಷರಿಗೆ ಯಾವ ಕಳಂಕವೂ ತಾಗುವುದಿಲ್ಲ. ಆದರೆ ಮಹಿಳೆ ಮುಕ್ತಕಾಮದಲ್ಲಿ ತೊಡಗಿದಲ್ಲಿ ಸಾಮಾಜಿಕವಾಗಿ ಬಹಿಷ್ಕಾರಕ್ಕೆ

ಒಳಗಾಗುವಳು. ಅವಳನ್ನು ಅಧರ್ಮೀಯಳೆಂದೂ, ಕಳಂಕದಿಂದ ಕೂಡಿದವಳೆಂದೂ ಸಮಾಜ ಭಾವಿಸುತ್ತದೆ. ಇಂತಹ ಪುರುಷಶಾಹಿ ನೀತಿ ನಿಯಮಗಳಿಂದ ಸಾಮಾಜಿಕವಾಗಿ ಮಹಿಳೆ ಹೆಚ್ಚು ಕುಬ್ಜಳಾಗುತ್ತಾಳೆ. ಮಹಿಳೆಯನ್ನು ತನ್ನ ಕಾಮತೃಷೆಗೆ ಬಳಸಿಕೊಳ್ಳುವ ಪುರುಷನು ನಿರಾಪರಾಧಿಯೆಂದು ಬಿಂಬಿತವಾದರೆ, ಅವನ ಬಯಕೆಗೆ ಒಳಗಾಗುವ ಮಹಿಳೆ ಅಪರಾಧಿಯೆಂದು ಪರಿಗಣಿತಳಾಗುತ್ತಾಳೆ.

ವೇಶ್ಯಾವಾಟಿಕೆಯು ಸಾಮಾಜಿಕವಾಗಿ ಅನಿಷ್ಟ ಹಾಗೂ ಕಳಂಕಿತ ವೃತ್ತಿಯೆಂದು ಪರಿಗಣಿತವಾಗಿದೆ. ೧೯೮೨ ರಲ್ಲಿ ದೇವದಾಸಿ ನಿಷೇಧ ಕಾಯ್ದೆಯನ್ನು ಸರ್ಕಾರ ಜಾರಿಗೊಳಿಸಿತು. ಪ್ರಾಯಶಃ ದೇವದಾಸಿ ಹೆಸರಿನಲ್ಲಿ ನಡೆಯುವ ಅನಾಚಾರಗಳನ್ನು ತಡೆಯುವ ಉದ್ದೇಶಕ್ಕಾಗಿ ಸರ್ಕಾರವು ದೇವದಾಸಿ ನಿಷೇಧ ಕಾಯ್ದೆ ಜಾರಿಗೆ ತರುವುದರ ಜೊತೆಗೆ ವೇಶ್ಯಾವೃತ್ತಿಯನ್ನು ನಿಯಂತ್ರಿಸುವ ದೃಷ್ಟಿಯಿಂದ ಅನೇಕ ಕಾಯ್ದೆಗಳನ್ನು ಜಾರಿಗೊಳಿಸಲಾಯಿತು. ಆದಾಗ್ಯೂ ಈ ಕಾಯ್ದೆಯನ್ನು ಜಾರಿಗೊಳಿಸುವ ಮಟ್ಟಕ್ಕೆ ಸೀಮಿತವಾದವೇ ಹೊರತು ನಿಜವಾದ ಅರ್ಥದಲ್ಲಿ ವೇಶ್ಯಾವಾಟಿಕೆ ನಿಯಂತ್ರಣಗೊಳ್ಳದೆ ವರ್ಷದಿಂದ ವರ್ಷಕ್ಕೆ ಅದರ ಪ್ರಮಾಣ ಹೆಚ್ಚುತ್ತಲೇ ಇರುವುದನ್ನು ಗಮನಿಸಬಹುದು. ಕರ್ನಾಟಕದಲ್ಲಿ ಪ್ರತಿದಿನ ಸುಮಾರು ಎರಡು ನೂರರಷ್ಟು ಯುವತಿಯರು ವೇಶ್ಯಾವಾಟಿಕೆ ದಂಧೆಗೆ ಪ್ರವೇಶಿಸುತ್ತಿರುವರೆಂದು ಹೇಳಬಹುದು. ಹಾಗಾಗಿ ವೇಶ್ಯಾವಾಟಿಕೆಯು ಸಮಾಜದೊಳಗೆ ನಿರಂತರವಾಗಿ ಉಳಿಯಲು ಅದನ್ನು ಪೋಷಿಸಿ ಆ ವ್ಯವಹಾರದಿಂದ ಲಾಭಗಳಿಸುವ ವ್ಯವಸ್ಥೆಯೂ ಕಾರಣವಾಗಿದೆ.

ಮೇಲಿನ ಎಲ್ಲಾ ಅಂಶಗಳ ಹಿನ್ನಲೆಯನ್ನು ಪರಿಗಣಿಸಿ ಸಾಮಾಜಿಕ ಅವ್ಯವಸ್ಥೆಯ ಕಪಿಮುಷ್ಟಿಯಲ್ಲಿ ಸಿಲುಕಿಕೊಂಡಿರುವ ವೇಶ್ಯಾವಾಟಿಕೆ ವೃತ್ತಿಯ ಮಹಿಳೆಯರ ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಜೊತೆಗೆ ಈ ವೃತ್ತಿಯ ಪರಂಪರೆ ಮತ್ತು ಪರಂಪರೆಯಾಗಿ ಮುಂದುವರೆದುಕೊಂಡು ಬಂದ ಈ ಅನಿಷ್ಟ ಪದ್ದತಿಯನ್ನು ಬಂಡವಾಳ ಮಾಡಿಕೊಂಡ ಮನಸ್ಸುಗಳು ಇವರನ್ನು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಹೇಗೆ ತುಳಿದಿದೆ ಎಂಬುದನ್ನು ತಿಳಿಯುವುದು ಹಾಗೂ ಈ ವೃತ್ತಿ ಪರಂಪರೆಯನ್ನು ಹೊಂದಿರುವವರ ಪ್ರಸ್ತುತ ಸ್ಥಿತಿಗತಿಗಳನ್ನು ಅರಿಯುವುದು ಇಲ್ಲಿನ ಪ್ರಧಾನ ಉದ್ದೇಶ. ಈ ಹಿನ್ನಲೆಯಲ್ಲಿ 'ವೇಶ್ಯಾವಾಟಿಕೆ ಸಾಮಾಜಿಕ ಸಂದರ್ಭಗಳು' ಎಂಬ ಶೀರ್ಷಿಕೆಯಡಿಯಲ್ಲಿ ವೇಶ್ಯಾವಾಟಿಕೆಯನ್ನೇ ವೃತ್ತಿಯಾಗಿಸಿಕೊಂಡವರ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ, ಆರೋಗ್ಯ ಇತ್ಯಾದಿಗಳನ್ನು ನೋಡುವ ಉದ್ದೇಶವನ್ನು ಈ ಅಧ್ಯಯನವು ಹೊಂದಿದೆ.

**೧.೧. ಅಧ್ಯಯನದ ಉದ್ದೇಶ**

- ಪ್ರಸ್ತುತ ಕರ್ನಾಟಕ ರಾಜ್ಯದೊಳಗಿನ ವೇಶ್ಯಾವಾಟಿಕೆಯ ಸ್ವರೂಪವನ್ನರಿಯುವುದು ಹಾಗೂ ಅದರ ಪರಿಣಾಮಗಳನ್ನು ತಿಳಿಸಲಾಗಿದೆ.
- ಮಹಿಳೆ ವೇಶ್ಯಾವಾಟಿಕೆಗೆ ತೊಡಗಲು ಇರುವ ಮೂಲ ಕಾರಣಗಳನ್ನು ತಿಳಿದುಕೊಳ್ಳಲಾಗಿದೆ.
- ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರ ಸಾಮಾಜಿಕ ಸಂಕಷ್ಟ, ಸನ್ನಿವೇಶಗಳನ್ನು ವಿಶ್ಲೇಷಿಸಲಾಗಿದೆ.

• ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಹಿನ್ನೆಲೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

• ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರ ಆರೋಗ್ಯದ ಕುರಿತು ಗಮನಿಸಲಾಗಿದೆ.

• ಪ್ರಸ್ತುತ ಸಂದರ್ಭ ಸಮುದಾಯಗಳಲ್ಲಿನ ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಬದಲಾವಣೆಗಳನ್ನು ಕೂಲಂಕಷವಾಗಿ ತಿಳಿಯುವ ಉದ್ದೇಶ ಈ ಅಧ್ಯಯನದ್ದಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ಸಂಶೋಧನೆಯು ಯಶಸ್ವಿಯಾಗಬೇಕಾದರೆ ಅದಕ್ಕೆ ವ್ಯಾಪ್ತಿ ಬಹಳ ಮುಖ್ಯವಾಗುತ್ತದೆ. ಸಾಮಾನ್ಯ ಅರ್ಥದಲ್ಲಿ ವ್ಯಾಪ್ತಿ ಎಂದರೆ ಎಲ್ಲೆ, ಮೇರೆ, ಗಡಿ ಎಂದಾಗುತ್ತದೆ. ನಿರ್ದಿಷ್ಟ ಹಾಗೂ ಉದ್ದೇಶಪೂರಿತವಾದ ಸಂಶೋಧನೆಯು ಗುರಿ ತಲುಪಬೇಕಾದರೆ ಅದಕ್ಕೆ ತನ್ನದೇ ಆದ ಚೌಕಟ್ಟಿನ ಕ್ರಮ ಮುಖ್ಯ. ಆಗ ಬದ್ಧತೆಯಿಂದ ಸ್ಪಷ್ಟವಾಗಿ, ಸಂಪೂರ್ಣವಾಗಿ ಮಾಹಿತಿ ಸಂಗ್ರಹಿಸಲು ಸಾಧ್ಯವಾಗುತ್ತದೆ. ಹೀಗಾಗಿ ಪ್ರಸ್ತುತ ಅಧ್ಯಯನ ವ್ಯಾಪ್ತಿಯು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ. ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಿಂದ ತಲಾ ನೂರು ಲೈಂಗಿಕ ಕಾರ್ಯಕರ್ತೆಯರಂತೆ ಒಟ್ಟು ಎರಡುನೂರು ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷಿಸಿ ಅಧ್ಯಯನಕ್ಕೆ ಒಳಪಡಿಸಿದೆ. ಅವುಗಳು ಕ್ರಮವಾಗಿ ಈ ಕೆಳಗಿನಂತಿವೆ.

ಬಳ್ಳಾರಿ ಜಿಲ್ಲೆಯ ಬಳ್ಳಾರಿ ನಗರದ ವ್ಯಾಪ್ತಿಯಲ್ಲಿ ೨೫ ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಹಾಗೆಯೇ ಹೊಸಪೇಟೆ ತಾಲೂಕಿನ ಹೊಸಪೇಟೆ ನಗರದಲ್ಲಿ ೨೦, ಹೊಸೂರು ಗ್ರಾಮದ ವ್ಯಾಪ್ತಿಯಲ್ಲಿ ೪, ಟಿ ಬಿ ಡ್ಯಾಂ ಪರಿಸರದಲ್ಲಿ ೮, ರಾಷ್ಟ್ರೀಯ ಹೆದ್ದಾರಿ ೫೦ರಲ್ಲಿ ಬರುವ ಚಿಲಕನಹಟ್ಟಿ ಪರಿಸರದಲ್ಲಿ ೩, ಮರಿಯಮ್ಮನಹಳ್ಳಿ ಪಟ್ಟಣ ಪರಿಸರದಲ್ಲಿ ೫ ಲೈಂಗಿಕ ಕಾರ್ಯಕರ್ತೆಯರು ಮತ್ತು ಕೂಡ್ಲಿಗಿ ಪಟ್ಟಣದ ವ್ಯಾಪ್ತಿಯಲ್ಲಿ ೩೫ ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷಿಸಲಾಗಿದೆ.

ಕೊಪ್ಪಳ ಜಿಲ್ಲೆಯ ಕೊಪ್ಪಳ ನಗರದ ವ್ಯಾಪ್ತಿಯಲ್ಲಿ ೨೦, ಹಾಗೂ ಹುಲಿಗಿ ಪರಿಸರದಲ್ಲಿ ೨೩ ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಹಾಗೆಯೇ ಗಂಗಾವತಿ ತಾಲೂಕಿನ ಗಂಗಾವತಿ ನಗರದಲ್ಲಿ ೨೫, ವಿರುಪಾಪುರ ಗಡ್ಡೆ ವ್ಯಾಪ್ತಿಯಲ್ಲಿ ೮, ಸಣಾಪುರ ಪರಿಸರದಲ್ಲಿ ೫, ವಡ್ಡರಹಟ್ಟಿ ಪರಿಸರದಲ್ಲಿ ೫, ಶ್ರೀರಾಮನಗರ (ದೇಸಾಯಿ ಕ್ಯಾಂಪ್) ಪರಿಸರದಲ್ಲಿ ೪ ಲೈಂಗಿಕ ಕಾರ್ಯಕರ್ತೆಯರು ಮತ್ತು ಕುಷ್ಟಗಿ ಪಟ್ಟಣದ ವ್ಯಾಪ್ತಿಯಲ್ಲಿ ೧೦ ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷಿಸಲಾಗಿದೆ.

## ೧.೩. ಅಧ್ಯಯನದ ಮಹತ್ವ

ವೇಶ್ಯಾವಾಟಿಕೆಗೆ ಪ್ರಾಚೀನ ಕಾಲದಲ್ಲಿ ಒಂದು ಗೌರವದ ಸ್ಥಾನವಿದ್ದುದಾಗಿ ತಿಳಿದುಬರುತ್ತದೆ. ಆದರೆ ಪ್ರಸ್ತುತ ಸಮಾಜದಲ್ಲಿ ವೇಶ್ಯಾವಾಟಿಕೆಯೆಂಬುದು ಸಾಮಾಜಿಕವಾಗಿ ಕಳಂಕಿತ ವೃತ್ತಿಯಾಗಿ

ಬಿಂಬಿಸಲ್ಪಡುತ್ತಿದೆ. ಪ್ರಾಚೀನ ಕಾಲದಲ್ಲಿ ಇರಬಹುದಾಗಿದ್ದ ಯಾವ ಗೌರವಗಳೂ ಇಂದು ಈ ವೃತ್ತಿಗಿಲ್ಲ. ಯಾವುದೇ ಒಬ್ಬ ಮಹಿಳೆಯು ಹುಟ್ಟಿನಿಂದಲೇ ತಾನು ಕಳಂಕಿತ ಜೀವನವನ್ನು ನಡೆಸಬೇಕೆಂದು ಆಪೇಕ್ಷಿಸಿರುವುದಿಲ್ಲ. ಆದರೆ ಅವಳು ವೇಶ್ಯಾವೃತ್ತಿಯಂತಹ ಸಾಮಾಜಿಕವಾಗಿ ಕಳಂಕಿತ ವೃತ್ತಿಯನ್ನು ಆಯ್ಕೆಮಾಡಿಕೊಳ್ಳಲು ಅವಳದೇ ಆದ ಅನಿವಾರ್ಯ ಸಂದರ್ಭಗಳು ಕಾರಣವಾಗಿರುತ್ತವೆ. ಪ್ರಸ್ತುತ ಈ ಅಧ್ಯಯನವು ವೇಶ್ಯಾವಾಟಿಕೆಯ ಸಾಮಾಜಿಕ ಸಂದರ್ಭಗಳೊಂದಿಗೆ ಲೈಂಗಿಕ ಕಾರ್ಯಕರ್ತೆಯರ ಜೀವನದ ರೀತಿನೀತಿ, ಮಹಿಳೆಯರು ವೇಶ್ಯಾವಾಟಿಕೆಗೆ ಇಳಿಯಲು ಇರಬಹುದಾದ ಕಾರಣಗಳನ್ನು ಅರಿಯಲು, ವಿಶೇಷವಾಗಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ವೇಶ್ಯಾವಾಟಿಕೆಯ ಸಮಸ್ಯೆಗಳನ್ನು ತಿಳಿಯಲು ಈ ಅಧ್ಯಯನವು ಸಹಕಾರಿಯಾಗಿದೆ. ಹಾಗೆಯೇ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿರುವ ವೇಶ್ಯಾವಾಟಿಕೆಯ ಕುರಿತು ಕನ್ನಡದಲ್ಲಿ ಇಲ್ಲಿಯವರೆಗೂ ಯಾವುದೇ ಅಧ್ಯಯನಗಳು ನಡೆಯದೇ ಇರುವುದರಿಂದ ಈ ಅಧ್ಯಯನವು ಮಹತ್ವದ್ದಾಗಿದೆ.

### ೧.೪ ಅಧ್ಯಯನದ ವಿಧಾನ

ಪ್ರಸ್ತುತ ಈ ಅಧ್ಯಯನವನ್ನು ಚಾರಿತ್ರಿಕ ವಿಧಾನ, ಸಂಖ್ಯಾಶಾಸ್ತ್ರೀಯ ವಿಧಾನ, ಪ್ರಶ್ನಾವಳಿ ವಿಧಾನ, ಸಂದರ್ಶನ ವಿಧಾನ, ಅವಲೋಕನ ವಿಧಾನ, ವ್ಯಕ್ತಿ ಅಧ್ಯಯನ ವಿಧಾನಗಳನ್ನು ಬಳಸಿ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ.

- **ಚಾರಿತ್ರಿಕ ವಿಧಾನ**

ವೇಶ್ಯಾವಾಟಿಕೆಯ ಪೂರ್ವಾಪರಗಳನ್ನು ತಿಳಿಯಲು ಚಾರಿತ್ರಿಕ ವಿಧಾನವನ್ನು ಬಳಸಲಾಗಿದೆ. ಪ್ರಾಚೀನ ಕಾಲದಲ್ಲಿ ಭಾರತ ಮಾತ್ರವಲ್ಲದೆ ಬೇರೆ ಬೇರೆ ದೇಶಗಳಲ್ಲಿ ವೇಶ್ಯಾವಾಟಿಕೆ ಸ್ವರೂಪ ಹೇಗಿದ್ದಿತು ಎಂಬುದನ್ನು ಅರಿಯಲು ಈ ವಿಧಾನವನ್ನು ಬಳಸಲಾಗಿದೆ.

- **ಸಂಖ್ಯಾಶಾಸ್ತ್ರೀಯ ವಿಧಾನ**

ಸಂಖ್ಯಾಶಾಸ್ತ್ರ ವಿಧಾನದ ಮೂಲಕ ವೇಶ್ಯಾವಾಟಿಕೆಯ ಸ್ವರೂಪ, ಅಗಾಧತೆ, ಜನಸಂಖ್ಯೆಗಳನ್ನು ಅರಿಯಲು ಹಾಗೂ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಲೈಂಗಿಕ ಕಾರ್ಯಕರ್ತೆಯರ ಕುರಿತು ಸಂಖ್ಯಾಶಾಸ್ತ್ರೀಯ ವಿಧಾನದ ಮೂಲಕ ಮಾಹಿತಿ ಕ್ರೋಢೀಕರಿಸಿ ಅಧ್ಯಯನಕ್ಕೆ ಬಳಕೆಮಾಡಿಕೊಳ್ಳಲಾಗಿದೆ.

- **ಪ್ರಶ್ನಾವಳಿ ವಿಧಾನ**

ವೇಶ್ಯಾವೃತ್ತಿಗೆ ಸಂಬಂಧಿಸಿದಂತೆ ಲೈಂಗಿಕ ಕಾರ್ಯಕರ್ತೆಯರಿಂದ ಮಾಹಿತಿ ಪಡೆಯಲು ಪ್ರಶ್ನಾವಳಿ ವಿಧಾನವನ್ನು ಬಳಸಿಕೊಳ್ಳಲಾಗಿದೆ.

- **ಸಂದರ್ಶನ ವಿಧಾನ**

ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ಆರೋಗ್ಯ ಸ್ಥಿತಿಗಳನ್ನು ಅರಿಯಲು ನೇರವಾಗಿ ವೇಶ್ಯಾವೃತ್ತಿಯಲ್ಲಿ ತೊಡಗಿದ ಲೈಂಗಿಕ ಕಾರ್ಯಕರ್ತೆಯರನ್ನು ಸಂದರ್ಶನ ಮಾಡಿ ಮಾಹಿತಿ ಕಲೆಹಾಕಿ ಅಧ್ಯಯನ ಮಾಡಲಾಗಿದೆ.

• **ಅವಲೋಕನ ವಿಧಾನ**

ಸಮಾಜಶಾಸ್ತ್ರದ ಅಧ್ಯಯನದಲ್ಲಿ ಪ್ರಯೋಗಕ್ಕೆ ಅವಕಾಶವಿಲ್ಲದೇ ಇರುವುದರಿಂದ ಅವಲೋಕನದಿಂದಲೇ ಅನೇಕ ಮಾಹಿತಿಯನ್ನು ಸಂಗ್ರಹಿಸಲು ಸಾಧ್ಯವಾಗುವುದು. ಸಮಾಜದ ಪ್ರಕ್ರಿಯೆಗಳು ಹಲವು ಭಾರಿ ಹತ್ತಾರು ವರ್ಷಗಳ ಅಂತರಕ್ಕೆ ಪಸರಿಸುತ್ತದೆ. ನಾವು ಹತ್ತಾರು ವರ್ಷಗಳವರಗೆ ಕಾದು ಕುಳಿತು ಸಾಮಾಜಿಕ ಘಟನೆಗಳನ್ನು ಅವಲೋಕಿಸಲು ಸಾಧ್ಯವಿಲ್ಲ. ಆದುದರಿಂದ ವಿವಿಧ ಸಂದರ್ಭಗಳನ್ನು ಒಳಗೊಂಡ ಸಮಾಜಗಳನ್ನು ಹೋಲಿಸಿ ಆ ಸಂದರ್ಭಗಳ ವ್ಯತ್ಯಾಸಕ್ಕೆ ಕಾರಣಗಳನ್ನು ನಿರ್ಣಯಿಸಲು ಅವಲೋಕನ ವಿಧಾನ ಪೂರಕವಾಗಿ ಕೆಲಸ ಮಾಡುವುದು. ಹೀಗಾಗಿ ವೇಶ್ಯಾವೃತ್ತಿಯಲ್ಲಿ ತೊಡಗಿದ ವರ್ಗಗಳು, ವಿವಿಧ ಮೂಲಗಳಿಂದ ಬಂದು ವೇಶ್ಯಾವೃತ್ತಿಯಲ್ಲಿ ತೊಡಗಿದವರ ಬದುಕಿನ ಸ್ಥಿತಿಗಳನ್ನು ಅರಿಯಲು ಅವಲೋಕನ ವಿಧಾನದಿಂದ ಮಾಹಿತಿಯನ್ನು ಪಡೆಯಲಾಗಿದೆ.

• **ವ್ಯಕ್ತಿ ಅಧ್ಯಯನ ವಿಧಾನ**

ವೇಶ್ಯಾವಾಟಿಕೆಯು ಸರ್ವವ್ಯಾಪಿಯಾದುದು. ಆದರೆ ವೃತ್ತಿಯಲ್ಲಿ ಪಾಲ್ಗೊಳ್ಳುವವರು ಬಹುತೇಕ ತಳಸಮುದಾಯದ ಮಹಿಳೆಯರು ಹಾಗೂ ಬಡತನದಿಂದ ಬಳಲುವ ಮಹಿಳೆಯರ ಪ್ರಮಾಣವೇ ಹೆಚ್ಚು. ಇಂದು ವೇಶ್ಯಾವಾಟಿಕೆ ನಿರ್ಮೂಲನೆಗಾಗಿ ಅನುಸರಿಸಿದ ಮಾರ್ಗಗಳು ಯಾವುವು? ಇಲ್ಲಿ ಹೆಚ್ಚಾಗಿ ಈ ಪದ್ಧತಿ ಕಂಡು ಬರುವುದಕ್ಕೆ ಇರುವ ಸಮುದಾಯದ ಒಳಗಿನ ಮತ್ತು ಹೊರಗಿನ ಕಾರಣಗಳನ್ನು ಆಯಾ ಜಾತಿ ಅಥವಾ ವರ್ಗದ ಲೈಂಗಿಕ ಕಾರ್ಯಕರ್ತೆಯರನ್ನು ಅಧ್ಯಯನಕ್ಕೆ ಒಳಪಡಿಸಿ ಅವರ ಇಡೀ ಬದುಕಿನ ಅನುಭವಗಳನ್ನು ತಿಳಿಯಲು ವ್ಯಕ್ತಿ ಅಧ್ಯಯನ ವಿಧಾನ ಬಳಸಿಕೊಳ್ಳಲಾಗಿದೆ.

### ೧.೬ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಒಟ್ಟು ಹತ್ತು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

**ಅಧ್ಯಾಯ ಒಂದರಲ್ಲಿ** ಅಧ್ಯಯನದ ವಿಷಯಕ್ಕೆ ಹೇಗೆ ಪ್ರವೇಶಿಸಬೇಕು. ಈ ತರಹದ ಅಧ್ಯಯನಗಳ ಸ್ವರೂಪ ಎಂಥದ್ದು ಎಂಬುದನ್ನು ಹೇಳುವುದರ ಜೊತೆಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ, ಅಧ್ಯಯನದ ವಿಧಾನ ಮಾಡಲಾಗಿದ್ದು, ಕೊನೆಯಲ್ಲಿ ಈ ವಿಷಯ ಕುರಿತು ಇದುವರೆಗೂ ನಡೆದ ಅಧ್ಯಯನಗಳ ಸಂಕ್ಷಿಪ್ತ ಮಾಹಿತಿಯನ್ನು ನೀಡಲಾಗಿದೆ.

**ಎರಡನೆಯ ಅಧ್ಯಾಯ: ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ ಹಾಗೂ ಭೌಗೋಳಿಕತೆ:** ಈ ಅಧ್ಯಾಯದಲ್ಲಿ.ಇದರಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆಯನ್ನು ತಿಳಿಸುವುದರೊಂದಿಗೆ ಆ ಜಿಲ್ಲೆಗಳ ಭೌಗೋಳಿಕ ವಿಸ್ತೀರ್ಣ, ತಾಲೂಕುಗಳ ವಿಸ್ತೀರ್ಣ, ಜನಸಂಖ್ಯೆ, ದೇವದಾಸಿಯರ ಜನಸಂಖ್ಯೆ ಪ್ರಮಾಣ ಇತ್ಯಾದಿ ವಿವರಗಳಿವೆ

**ಮೂರನೆಯ ಅಧ್ಯಾಯ: ವೇಶ್ಯಾವಾಟಿಕೆಯ ಪರಿಕಲ್ಪನೆ ಹಾಗೂ ಪ್ರಾಚೀನತೆ:** ಈ ಅಧ್ಯಾಯದಲ್ಲಿ ವೇಶ್ಯಾವಾಟಿಕೆ ಪರಿಕಲ್ಪನೆ ಹೇಗೆ ಮೂಡಿಬಂದಿದೆ, ಅದರ ಪ್ರಾಚೀನತೆ ಕ್ರಿಸ್ತಪೂರ್ವಕ್ಕೂ ಹಿಂದಿರುವುದನ್ನು ತಿಳಿಸುವುದರೊಂದಿಗೆ ಸಿಂಧೂನದಿ ಬಯಲಿನ ನಾಗರೀಕತೆಯೊಂದಿಗೆ ಈಜಿಪ್ತ್, ಮೆಸಪೊಟೋಮಿಯಾ, ರೋಮ್ ಇತ್ಯಾದಿ ನಾಗರೀಕತೆಗಳಲ್ಲಿ ಅದು ಬೆಳೆದು ಬಂದ ಬಗೆ, ಭಾರತದಲ್ಲಿ ವೇಶ್ಯಾಪದ್ಧತಿಯ ಸ್ವರೂಪ, ಸಾಹಿತ್ಯ ಕೃತಿಗಳಲ್ಲಿ ದೊರೆಯುವ ವೇಶ್ಯಾವಾಟಿಕೆಯ ಉಲ್ಲೇಖಗಳು, ಶಾಸನಗಳಲ್ಲಿ ವೇಶ್ಯೆಯರ ಉಲ್ಲೇಖ ಇತ್ಯಾದಿ ವಿವರಗಳನ್ನೊಳಗೊಂಡಿದೆ.

**ನಾಲ್ಕನೆಯ ಅಧ್ಯಾಯ: ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು:** ಈ ಅಧ್ಯಾಯದಲ್ಲಿ ಸಾಮಾಜಿಕ ಸ್ಥಿತಿಗತಿಯಲ್ಲಿ ಲೈಂಗಿಕ ಕಾರ್ಯಕರ್ತೆಯರ ಕೌಟಂಬಿಕ ಹಿನ್ನೆಲೆ, ಧಾರ್ಮಿಕ ಕಾರಣಗಳು, ಲೈಂಗಿಕ ಕಾರ್ಯಕರ್ತೆಯರು ವಾಸಿಸುವ ನೆಲೆಗಳು, ಪೂರ್ಣವಾಗಿ ಲೈಂಗಿಕ ವೃತ್ತಿಯನ್ನೇ ಅವಲಂಬಿಸಿದ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು, ಅವಶ್ಯಕತೆಗನುಗುಣವಾಗಿ ವೇಶ್ಯಾವಾಟಿಕೆಯಲ್ಲಿ ತೊಡಗುವ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ, ಲೈಂಗಿಕ ಕಾರ್ಯಕರ್ತೆಯರು ವೃತ್ತಿಯಲ್ಲಿ ತೊಡಗುವ ಸಾಮಾಜಿಕ ಪರಿಸರ, ವೇಶ್ಯಾವಾಟಿಕೆ ಅಡ್ಡೆಗಳು, ಹೋಟೆಲ್ ಲಾಡ್ಜ್ ಇತ್ಯಾದಿಗಳ ವಿವರ ನೀಡಲಾಗಿದೆ. ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಸ್ಥಿತಿಗತಿಯಲ್ಲಿ ಕರ್ನಾಟಕದ ಒಟ್ಟು ಸಾಕ್ಷರತೆಯ ಪ್ರಮಾಣ, ಇದರಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ, ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಸಾಕ್ಷರತೆಯ ಪ್ರಮಾಣ, ಪರಿಶಿಷ್ಟ ಜಾತಿ ಪಂಗಡಗಳ ಸಾಕ್ಷರತೆಯ ಪ್ರಮಾಣ ಮತ್ತು ಅಂತರ, ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣ, ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಮಟ್ಟ, ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಪ್ರಮಾಣ ಹಾಗೂ ಶೈಕ್ಷಣಿಕ ಸ್ಥಿತಿ, ಶಾಲೆಗೆ ಹೋಗಲು ಅರ್ಹವಾದ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರ, ಶಾಲೆಗೆ ಹೋಗುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಶೈಕ್ಷಣಿಕ ವಿವರ, ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರಗಳನ್ನು ತಿಳಿಸಲಾಗಿದೆ.

ಲೈಂಗಿಕ ಕಾರ್ಯಕರ್ತೆಯರ ಆರ್ಥಿಕ ಸ್ಥಿತಿಗತಿಯಲ್ಲಿ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮುಖ್ಯ ಕೆಲಸಗಾರರ ವಿವರ, ಮುಖ್ಯ ಕೆಲಸಗಾರರು, ಅಂಚಿನ ಕೆಲಸಗಾರರು, ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಕೃಷಿಕ ಹಾಗೂ ಇತರೆ ಕೆಲಸಗಾರರ ವಿವರ, ಕೃಷಿಕರು, ಕೃಷಿಕೂಲಿಗಳು, ಗೃಹ ಕೈಗಾರಿಕೆಯಲ್ಲಿ ತೊಡಗಿದವರು ಹಾಗೂ ಇತರೆ ಕೆಲಸಗಾರರ ವಿವರಗಳನ್ನು ಅಧ್ಯಯನ ಮಾಡಲಾಗಿದೆ. ಹಾಗೆಯೇ ಲೈಂಗಿಕ ಕಾರ್ಯಕರ್ತೆಯರ ಭೂಹಿಡುವಳಿ ಸ್ವರೂಪ, ಭೂ ಹಿಡುವಳಿ ಹೊಂದಿದ ಬಳ್ಳಾರಿ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರ ವಿವರ, ಭೂ ಹಿಡುವಳಿ ಹೊಂದಿದ ಕೊಪ್ಪಳ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರ ವಿವರ, ಕರ್ನಾಟಕದ ಲೈಂಗಿಕ ಕಾರ್ಯಕರ್ತೆಯರ ವಸತಿ ವಿವರ, ಲೈಂಗಿಕ ಕಾರ್ಯಕರ್ತೆಯರ ಶೌಚಾಲಯಗಳ ಸ್ವರೂಪ,

ಲೈಂಗಿಕ ಕಾರ್ಯಕರ್ತೆಯರ ದುಡಿಮೆಯ ಸ್ವರೂಪ, ಕೆಳದರ್ಜೆ, ಮಧ್ಯಮ ದರ್ಜೆ, ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರ ವಿವರ, ಲೈಂಗಿಕ ವೃತ್ತಿಯೊಂದಿಗೆ ಇತರ ವೃತ್ತಿಗಳನ್ನು ನಿರ್ವಹಿಸುವವರ ವಿವರ, ಅವರು ನಿರ್ವಹಿಸುವ ಇತರೆ ವೃತ್ತಿಗಳು ಇತ್ಯಾದಿ ವಿವರಗಳನ್ನು ನೀಡಲಾಗಿದೆ.

**ಅಧ್ಯಾಯ ಐದು: ವೇಶ್ಯಾವಾಟಿಕೆ ಮತ್ತು ರಾಜಕಾರಣ** ಈ ಅಧ್ಯಾಯದಲ್ಲಿ ವೇಶ್ಯಾವಾಟಿಕೆ ವೃತ್ತಿಯ ಮಹಿಳೆಯರನ್ನು ಸಂರಕ್ಷಿಸಬೇಕಾಗಿರುವ ನಮ್ಮ ವ್ಯವಸ್ಥೆಯು ಹೇಗೆ ವಿಫಲವಾಗಿದೆ ಎಂಬುದನ್ನು ತಿಳಿಸುವುದರ ಜೊತೆಗೆ ಈ ವೃತ್ತಿಯವರನ್ನು ರಾಜಕಾರಣಿಗಳು ಯಾವ ರೀತಿಯಲ್ಲಿ ಬಳಸಿಕೊಂಡದ್ದಾರೆ. ಎಂಬುದರ ವಿವರಗಳ ಬಗ್ಗೆ ಚರ್ಚಿಸಲಾಗಿದೆ.

**ಅಧ್ಯಾಯ ಆರು: ವೇಶ್ಯಾವಾಟಿಕೆ ಮತ್ತು ಆರೋಗ್ಯ:** ಈ ಅಧ್ಯಾಯದಲ್ಲಿ ಇದರಲ್ಲಿ ಮಾರಕ ಕಾಯಿಲೆಗಳನ್ನು ತಂದೊಡ್ಡುವಂತಹ ಈ ವೃತ್ತಿಯ ಮಹಿಳೆಯರ ಆರೋಗ್ಯ ಪರಿಸ್ಥಿತಿಗಳು ಹೇಗಿವೆ ಎಂಬುದನ್ನು ತಿಳಿಸಲಾಗಿದೆ. ಇವರ ಆರೋಗ್ಯ ಸುಧಾರಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡಿರುವ ಕಾರ್ಯಗಳೇನು? ಮತ್ತು ಲೈಂಗಿಕ ವೃತ್ತಿಯ ಮಹಿಳೆಯರು ಸ್ವತಃ ಹೇಗೆ ಆ ಮಾರಕ ಕಾಯಿಲೆಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಜಾಗ್ರತೆ ವಹಿಸಿದ್ದಾರೆ ಎಂಬುದರ ವಿವರಗಳ ಬಗ್ಗೆ ನೀಡಲಾಗಿದೆ.

**ಅಧ್ಯಾಯ ಏಳು: ಲೈಂಗಿಕ ಕಾರ್ಯಕರ್ತರು ಹಾಗೂ ಸರ್ಕಾರ, ಸರ್ಕಾರೇತರ ಸಂಸ್ಥೆಗಳು:** ಈ ಅಧ್ಯಾಯದಲ್ಲಿ ಎಂಬುದಾಗಿದೆ. ಇದರಲ್ಲಿ ಭಾರತದ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾಪರ ಅಭಿವೃದ್ಧಿ ಯೋಜನೆಗಳು ಯಾವುವು ಇವೆ. ಅವುಗಳಲ್ಲಿ ಮಹಿಳೆಯರಿಗಾಗಿ ಅನುದಾನ ಎಷ್ಟು ಕಾಯ್ದಿರಿಸಲಾಗಿದೆ, ಲೈಂಗಿಕ ಕಾರ್ಯಕರ್ತೆಯರಿಂದ ಏಡ್ಸ್ ಹಾಗೂ ಇತರ ಲೈಂಗಿಕ ಖಾಯಿಲೆ ಹರಡದಂತೆ ತಡೆಗಟ್ಟಲು ಸುರಕ್ಷಿತಾ ಕ್ರಮಗಳಾದ ಕಾಂಡೋಮ್ ಬಳಕೆ ಹಾಗೂ ಲೈಂಗಿಕ ಕಾರ್ಯಕರ್ತೆಯರಿಗೆ ಉಚಿತವಾಗಿ ಕಾಂಡೋಮ್ ಹಂಚಿಕೆ ಕಾರ್ಯಕ್ರಮದ ರೂಪುರೇಷೆಗಳು, ಎಚ್ ಐ ವಿ, ಏಯ್ಡ್ಸ್ ಹರಡಲು ಇರುವ ಮುಖ್ಯ ಕಾರಣಗಳು, ಆ ಕಾರ್ಯಕ್ರಮವನ್ನು ನಿಭಾಯಿಸುವ ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳು, ಕಾರ್ಯಕ್ರಮ ಅನುಷ್ಠಾನಗೊಳಿಸಲು ನೆರವು ನೀಡಿದ ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಸಂಸ್ಥೆಗಳ ವಿವರ, ಮಹಿಳೆ ಮತ್ತು ಮಕ್ಕಳ ಅಕ್ರಮ ಸಾಗಾಣಿಕೆ ತಡಗಟ್ಟುವ ಯೋಜನೆ ಕುರಿತಾದ ವಿವರ, ಸಮಾಜದಲ್ಲಿ ಅಶಕ್ತವಾದ ಮಹಿಳೆಯರ ಅಭಿವೃದ್ಧಿಗಾಗಿ ಮಹಿಳಾ ತರಬೇತಿ ಮತ್ತು ಮಹಿಳಾ ಉದ್ಯೋಗ ಕಾರ್ಯಕ್ರಮ ಕುರಿತಾದ ವಿವರ, ಉಜ್ವಲ್ ಯೋಜನೆ, ವುಮೆನ್ ಹೆಲ್ಪ್‌ಲೈನ್ ಯೋಜನೆ, ಒನ್ ಸ್ಟಾಪ್ ಸೆಂಟರ್ ಯೋಜನೆ, ಮನಸ್ವಿನಿ ಯೋಜನೆ, ಸ್ವಾಧಾರ ಯೋಜನೆ, ಸಾಂತ್ವನ ಯೋಜನೆ, ಸಾಮಾಜಿಕ ಪಿಡುಗುಗಳ ನಿವಾರಣಾ ವಿಶೇಷ ಘಟಕ, ಕೌಟಂಬಿಕ ಹಿಂಸೆಯಿಂದ ಮಹಿಳೆಯರನ್ನು ರಕ್ಷಿಸುವ ಕಾಯ್ದೆ, ಲೈಂಗಿಕ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರ ಸ್ಥಿತಿಗತಿಗಳ ಅಧ್ಯಯನ ಸಮಿತಿಯ ವಿವರ ಇತ್ಯಾದಿ ವಿಷಯಗಳನ್ನು ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

**ಅಧ್ಯಾಯ ಎಂಟು: ಲೈಂಗಿಕ ಕಾರ್ಯಕರ್ತೆ ಮತ್ತು ಸಮಾಜ:** ಈ ಅಧ್ಯಾಯದಲ್ಲಿ ಲೈಂಗಿಕ ಕಾರ್ಯಕರ್ತೆಯರು ಆ ವೃತ್ತಿಯನ್ನು ಆಯ್ದುಕೊಳ್ಳಲು ಇರುವ ಕಾರಣಗಳು, ಸಮಾಜ ಹಾಗೂ ಪೋಲಿಸ್ ಮತ್ತು ಇತರ ಸರ್ಕಾರಿ ಸಂಸ್ಥೆಗಳು ಲೈಂಗಿಕ ಕಾರ್ಯಕರ್ತೆಯರನ್ನು ನಡೆಸಿಕೊಳ್ಳುವ ಕ್ರಮ, ಲೈಂಗಿಕ ವೃತ್ತಿಯ ಹಿಂದಿರುವ ಜಾಲ ಇತ್ಯಾದಿಗಳನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಒಂಭತ್ತು: ಲೈಂಗಿಕ ಕಾರ್ಯಕರ್ತೆರ ಬದುಕು-ಬವಣೆ:** ಈ ಅಧ್ಯಾಯದಲ್ಲಿ ಲೈಂಗಿಕ ಕಾರ್ಯಕರ್ತೆಯ ನಿಜ ಜೀವನದಲ್ಲಾದ ಘಟನೆಗಳು, ವ್ಯಕ್ತಿ ಅಧ್ಯಯನದ ವಿವರಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

**ಕೊನೆಯ ಹತ್ತನೆಯ ಅಧ್ಯಾಯ: ಸಮಾರೋಪ:** ಈ ಅಧ್ಯಾದಲ್ಲಿ ಅಧ್ಯಯನ ಫಲಿತಗಳು ಹಾಗೂ ಸಲಹೆ ಸೂಚನೆಗಳನ್ನು ನೀಡಲಾಗಿದೆ. ಪರಾಮರ್ಶನ ಗ್ರಂಥಗಳು ಅನುಬಂಧದಲ್ಲಿ ಮಾಹಿತಿದಾರರ ವಿವರ, ಪ್ರಶ್ನಾವಳಿ, ಪತ್ರಿಕಾ ವರದಿಗಳನ್ನು ನೀಡಲಾಗಿದೆ. ಲೈಂಗಿಕ ಕಾರ್ಯಕರ್ತೆಯರಿಗೆ ಸಂಬಂಧಿಸಿದಂತೆ ಮಾಹಿತಿ ನೀಡಬಹುದಾಗಿದ್ದರೂ ಅವರ ವೈಯಕ್ತಿಕ ಬದುಕನ್ನು ಸಾರ್ವತ್ರಿಕವಾಗಿ ಅನಾವರಣ ಮಾಡುವುದು ಸೂಕ್ತವಲ್ಲವೆಂಬ ಕಾರಣಕ್ಕೆ ಕೇವಲ ಹೆಸರುಗಳನ್ನು ಮಾತ್ರ ನೀಡಲಾಗಿದೆ.

**೧.೮. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ವೇಶ್ಯಾವಾಟಿಕೆ ಪದ್ಧತಿಯು ಪ್ರಾಚೀನ ಕಾಲದಿಂದಲೂ ಇದೆ ಎನ್ನುವುದಕ್ಕೆ ಅನೇಕ ನಿದರ್ಶನಗಳಿವೆ, ಇದು ಕೇವಲ ಭಾರತವೊಂದಕ್ಕೆ ಸೀಮಿತವಾಗದೆ ಪ್ರಪಂಚದಾದ್ಯಂತ ಪ್ರಚಲಿತವಿದೆ. ಶಾಸನಗಳಲ್ಲಿ ವೇಶ್ಯೆಯರ ಕುರಿತು ಉಲ್ಲೇಖಗಳಿವೆ. ವೇಶ್ಯಾವಾಟಿಕೆಗೆ ಸಂಬಂಧಿಸಿದಂತೆ ಈವರೆಗಿನ ಅಧ್ಯಯನದ ವಿವರಗಳನ್ನು ಇಲ್ಲಿ ನೀಡಲಾಗಿದೆ. ಪ್ರಾಚೀನ ಕಾಲದಲ್ಲಿ ನಡೆಯುತ್ತಿದ್ದ ವೇಶ್ಯಾವಾಟಿಕೆಯ ಕುರಿತು ಹಲವು ವಿದ್ವಾಂಸರು ತಮ್ಮ ಕೃತಿಗಳಲ್ಲಿ ದಾಖಲಿಸಿರುವರು ಹಾಗೂ ಅವರ ಬದುಕನ್ನು ಆಯಾ ಕಾಲ, ಪ್ರದೇಶಿಕ ಹಿನ್ನಲೆ, ಸಮುದಾಯ, ಸಾಮಾಜಿಕ, ಆರ್ಥಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡಿರುವುದನ್ನು ಈ ಕೆಳಕಂಡ ಕೃತಿಗಳ ಅಧ್ಯಯನ ಮಾಡುವುದರ ಮೂಲಕ ಗುರುತಿಸಬಹುದು.

**ಸರ್ ವಿಲಿಯಂ ಹಂಟರ್‌ನ ಮಾರ್ಗದರ್ಶನದಲ್ಲಿ ಪ್ರಕಟಗೊಂಡ 'ಇಂಪೀರಿಯಲ್ ಗೆಜಿಟಿಯರ್‌ನ' (೧೮೬೯) ೧೧೨ ಸಂಪುಟಗಳಲ್ಲಿ ನಾಲ್ಕನೇ ಸಂಪುಟ** ಈ ಕೃತಿಯಲ್ಲಿ ಹಿಂದೂ ಧರ್ಮದ ಕುರಿತು ಮಾಹಿತಿ ಒದಗಿಸುವುದು. ಈ ಧರ್ಮದ ಕುರಿತು ಮಾಹಿತಿ ನೀಡುವಾಗ ಇಲ್ಲಿ ಪ್ರಚಲಿತವಿದ್ದ ದೇವದಾಸಿ ಪದ್ಧತಿಯ ಕುರಿತು ಮಾಹಿತಿ ನೀಡಿರುವರು.

**ಜೋಗನ್ ಶಂಕರ್‌ರವರ 'ದೇವದಾಸಿ ಸಂಪ್ರದಾಯ'** (೧೯೯೩) ಈ ಕೃತಿಯು ಭಾರತದಲ್ಲಿ ಪ್ರಚಲಿತವಿದ್ದ ಧಾರ್ಮಿಕಾಚರಣೆಗಳ ವಿವರಗಳ ಹಲವು ಮಗ್ಗಲುಗಳನ್ನು ಪರಿಚಯಿಸಿರುವರು. 'ಆಲಹಳ್ಳಿಯಲ್ಲಿ ದೊರೆತ ಕ್ರಿ. ಶ ೧೧೧೩ ರ ಶಾಸನದಲ್ಲಿ ದೇವದಾಸಿ ಪದದ ಉಲ್ಲೇಖವಿರುವುದಾಗಿ ಉಲ್ಲೇಖಿಸಿರುವರು. ಪ್ರಾಯಶಃ ದೇವದಾಸಿ ಪದವನ್ನು ಉಲ್ಲೇಖಿಸಿದ ಮೊದಲ ಶಾಸನ ಇದೆಂದು ಲೇಖಕರು ತಿಳಿಸಿರುವರು.

ಪ್ರಾಚೀನ ಕಾಲದಲ್ಲಿ ದೇವದಾಸಿಯರಿಗಿದ್ದ ಪಾವಿತ್ರತೆಯ ಸ್ಥಾನ ಆಧುನಿಕತೆಗೆ ಬರುವಷ್ಟರಲ್ಲಿ ಹೇಗೆ ಸಾಮಾಜಿಕವಾಗಿ ವಿರೂಪಗೊಂಡಿತು ಎಂಬುದನ್ನು ಈ ಕೃತಿಯಲ್ಲಿ ವಿವರಿಸಿರುವರು.

**ಎಚ್. ಎಂ. ಮರುಳಸಿದ್ದಯ್ಯ (ಸಂ)ರವರ 'ಭಾರತ ಸಮಾಜ ಕಾರ್ಯ ವಿಶ್ವಕೋಶ (ಸಂಪುಟ-೧)** (೧೯೯೪)ದಲ್ಲಿ ದೇವದಾಸಿಯರ ಕುರಿತು ವಿವರಣೆ ನೀಡಲಾಗಿದೆ. ದೇವದಾಸಿ ಪದ್ಧತಿಯ ಪ್ರಾಚೀನತೆ, ಅದು ಭಾರತೀಯ ಸಮಾಜದಲ್ಲಿ ಬೆಳೆದು ಬಂದ ಬಗೆಗಳ ಕುರಿತು ಈ ಕೃತಿಯಲ್ಲಿ ತಿಳಿಸಲಾಗಿದೆ. ಮುಖ್ಯವಾಗಿ ಕ್ರಿ.ಶ.ಸುಮಾರು ಏಳನೇ ಶತಮಾನದ ವೇಳೆಗೆ ದಕ್ಷಿಣ ಭಾರತದ ರಾಜರು ದೇವಾಲಯಗಳ ನಿರ್ಮಾಣದಲ್ಲಿ ಹೆಚ್ಚಿನ ಆಸಕ್ತಿ ತೋರಿಸಿ ದೇವಾಲಯಗಳನ್ನು ನಿರ್ಮಾಣ ಮಾಡಿದರು. ಹಾಗೆಯೇ ದೇವರ ಸೇವೆಗಾಗಿ ದೇವದಾಸಿಯರನ್ನು ಹೆಚ್ಚಿನ ಪ್ರಮಾಣದಲ್ಲಿ ನೇಮಿಸಿಕೊಳ್ಳುತ್ತಿದ್ದರು ಎಂದು ವಿವರಿಸಿರುವರು. ಮುಖ್ಯವಾಗಿ ಕೋನಾರ್ಕದ ಸೂರ್ಯದೇವಾಲಯದ ಭಿತ್ತಿಯ ಮೇಲೆ ಇರುವ ಶಿಲ್ಪಗಳಲ್ಲಿ ಮೈಥುನ ಶಿಲ್ಪಗಳು ಕಾಣಸಿಗುವುದನ್ನು ಉಲ್ಲೇಖಿಸಿರುವರು.

**ಚಿದಾನಂದಮೂರ್ತಿ ಎಂ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** (೨೦೦೨) ಕೃತಿಯಲ್ಲಿ ಕರ್ನಾಟಕದ ದೇವದಾಸಿ ಹಾಗೂ ವೇಶ್ಯೆಯರ ಕುರಿತಾಗಿ ವಿವರಗಳು ಶಾಸನಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಗೊಂಡಿರುವುದರ ಕುರಿತು ತಿಳಿದುಬರುವುದು. ಚನ್ನಗಿರಿ ಬಳಿ ಇರುವ ಸೂಳೆಕೆರೆ, ಲಕ್ಷ್ಮೇಶ್ವರದ ದೇವಾಲಯದ ಹಿಂಭಾಗದಲ್ಲಿರುವ ಬಾವಿಗಳನ್ನು ಆ ಕಾಲದಲ್ಲಿ ವೇಶ್ಯಾವೃತ್ತಿ ಮಾಡುವವರು ಜನರ ಉಪಯೋಗಕ್ಕೆಂದು ನಿರ್ಮಿಸಿದ್ದ ವಿವರಗಳು ಈ ಕೃತಿಯಲ್ಲಿ ಉಲ್ಲೇಖಿಸಿರುವರು. ಹಾಗೆಯೇ ಕರ್ನಾಟಕದ ದೇವಾಲಯಗಳು, ಜೈನಮಂದಿರಗಳನ್ನು ವೇಶ್ಯಾವೃತ್ತಿಯಲ್ಲಿರುವವರು ಜನರಿಗೆ ಒಳಿತಾಗಲಿ ಎಂದು ನಿರ್ಮಿಸಿದ ವಿವರಗಳು ಈ ಕೃತಿಯ ಮೂಲಕ ತಿಳಿದುಬರುವುದು.

**ಚನ್ನಕ್ಕ ಎಲಿಗಾರ ಅವರ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'** (೧೯೯೦) ಈ ಕೃತಿಯಲ್ಲಿ ಶಾಸನ ಉಲ್ಲೇಖಿತ ಸ್ತ್ರೀಯರ ಕುರಿತ ವಿವರಗಳು ದೊರೆಯುತ್ತವೆ. ಇದರಲ್ಲಿ ದೇವದಾಸಿಯರು, ವೇಶ್ಯೆಯರ ಕುರಿತಾದ ಉಲ್ಲೇಖಗಳೂ ದೊರೆಯುವವು.

**ಚನ್ನಕ್ಕ ಪಾವಟೆ ಅವರ 'ಕರ್ನಾಟಕ ಶಾಸನೋಕ್ತ ಮಹಿಳೆ- ಸಮೀಕ್ಷೆ, ಸಂಸ್ಕೃತಿ'** (೨೦೦೮) ಎನ್ನುವ ಕೃತಿಯಲ್ಲಿ ದೇವದಾಸಿ, ವೇಶ್ಯೆಯರ ಕುರಿತಾದ ಶಾಸನೋಕ್ತ ಉಲ್ಲೇಖಗಳನ್ನು ತಿಳಿಸಿರುವರು. ಈ ಕೃತಿಯಲ್ಲಿ ಕರ್ನಾಟಕದ ಸಂಸ್ಕೃತಿಯಲ್ಲಿ ಮಹಿಳೆಯರು ಹೇಗೆ ಪ್ರಮುಖವಾಗಿದ್ದರು ಎಂಬುದನ್ನು ವಿಶ್ಲೇಷಿದ್ದಾರೆ.

**ತಿಪ್ಪೇರುದ್ರಸ್ವಾಮಿ ಎಚ್ ಅವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ'** (೧೯೭೨) ಈ ಕೃತಿಯಲ್ಲಿ ದೇವದಾಸಿ ಪದ್ಧತಿ ಹಾಗೂ ವೇಶ್ಯಾವಾಟಿಕೆ ಪದ್ಧತಿಯ ಸ್ವರೂಪಗಳ ಕುರಿತಾದ ಮಾಹಿತಿಗಳು ದೊರೆಯುತ್ತವೆ.

**ಪುರುಷೋತ್ತಮ ಬಿಳಿಮಲೆ ಅವರ 'ಹುಲಿಗೆಮ್ಮ'** (೧೯೯೯) ಎಂಬ ಕೃತಿ ಹುಲಿಗಿಯ ಭೌಗೋಳಿಕ ಪರಿಸರ, ಚರಿತ್ರೆ ಹಾಗೂ ಸಂಪ್ರದಾಯಗಳ ಕುರಿತಾಗಿ ತಿಳಿಸುವ ಕೃತಿಯಾಗಿದೆ.

**ಚೆನ್ನಣ್ಣ ವಾಲೀಕಾರ ಅವರ 'ಮಹಾರಾಷ್ಟ್ರ ರಾಜ್ಯದ ತುಂಬ ಹರಿಯುತ್ತಿರುವ ವೇಶ್ಯಾ ಸೋದರಿಯರ ಕಣ್ಣೀರು ಕಡಲಿನ ಕೋಗಿಲೆ ಗಾನ' (೧೯೯೯)** ಎಂಬ ಕೃತಿಯು ಪ್ರವಾಸ ಕಥನವಾಗಿದೆ. ಮಹಾರಾಷ್ಟ್ರ ರಾಜ್ಯಕ್ಕೆ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಪ್ರವಾಸ ಕೈಗೊಂಡಾಗ ಕಂಡ ಅನುಭವಗಳನ್ನು ಪ್ರವಾಸ ಕಥನವಾಗಿಸಿರುವರು. ಇದರಲ್ಲಿ ಮಹಾರಾಷ್ಟ್ರದಲ್ಲಿ ವೇಶ್ಯೆಯರ ಜೀವನ ವ್ಯವಸ್ಥೆ ಯಾವ ರೀತಿಯಾಗಿ ಇದೆ, ಯಾವ ಯಾವ ಕಾರಣಗಳಿಂದ ಈ ದಂದೆಗೆ ತೊಡಗಿರುವರು ಇತ್ಯಾದಿ ವಿವರಗಳನ್ನು ಪ್ರವಾಸ ಕೈಗೊಂಡ ಒಂದು ತಿಂಗಳ ಅವಧಿಯಲ್ಲಿ ಅಧ್ಯಯನ ಕೈಗೊಂಡು ಅದರ ನೈಜ ವಿವರಗಳನ್ನು ಈ ಕೃತಿಯಲ್ಲಿ ದಾಖಲಿಸಿರುವರು.

**ಶೈಲಜ ಹೀರೆಮಠ ಅವರ 'ಸ್ತ್ರೀಕಥನ: ಪಾತರದವರು' (೧೯೯೯)** ಎಂಬ ಕೃತಿಯಲ್ಲಿ ಕರ್ನಾಟಕದಲ್ಲಿ ಪಾತರದವರೆಂದು ಕರೆಯುವ ಸಮುದಾಯದ ಹಿನ್ನೆಲೆಯನ್ನು ತಿಳಿಸುವುದರೊಂದಿಗೆ ಅವರ ಕಲಾ ಜೀವನ, ಕೌಟಂಬಿಕ ಸ್ವರೂಪ, ಸಮಾಜದಲ್ಲಿ ಅವರನ್ನು ಇತರರು ಗುರುತಿಸುವ ರೀತಿ, ಬದುಕಿನ ಅಸಹಾಯಕತೆಗಳ ಕುರಿತ ವಿವರಣೆಗಳು ಇವೆ.

**ಚೆನ್ನಣ್ಣ ವಾಲೀಕಾರ ಅವರ 'ಕರ್ನಾಟಕ ದೇವಾದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, (೨೦೦೦)** ಎಂಬ ಬೃಹತ್ ಕೃತಿಯು ಶೈಕ್ಷಣಿಕ ಯೋಜನೆಯಾಗಿದ್ದು ಹೈದರಾಬಾದ ಕರ್ನಾಟಕ ಭಾಗದ ದೇವದಾಸಿಯರನ್ನು ಹಾಗೂ ಅವರ ಪದ್ಧತಿಯನ್ನು ವಿವಿಧ ಆಯಾಮಗಳಲ್ಲಿ ಅನಾವರಣ ಮಾಡಿದ ಕೃತಿಯಾಗಿದೆ. ಈ ಕೃತಿಯಲ್ಲಿ ಕೇವಲ ದೇವದಾಸಿಯರನ್ನು ಹಾಗೂ ಅವರ ಪದ್ಧತಿಗಳನ್ನು ಮಾತ್ರ ನೋಡದೆ ಅವರ ಜೀವನಶೈಲಿ, ವೇಶ್ಯಾವಾಟಿಕೆ ವೃತ್ತಿ ಇತ್ಯಾದಿಗಳ ಕುರಿತು ತಿಳಿಸುತ್ತದೆ.

**ವಸಂತಕುಮಾರ್ ಪುತ್ತಿ ಅವರ 'ಬಸ್ರೂರಿನ ದೇವದಾಸಿ ಪದ್ಧತಿ' (೨೦೦೨)** ಎಂಬ ಪಿಎಚ್ ಡಿ ಪ್ರಬಂಧದಲ್ಲಿ ಬಸರೂರಿನ ದೇವದಾಸಿ ಪದ್ಧತಿಯ ವಿವರಗಳು ದೊರೆಯುತ್ತವೆ. ದಕ್ಷಿಣ ಕನ್ನಡದಲ್ಲಿ ವೇಶ್ಯಾವಾಟಿಕೆಗಾಗಿ ಬಸರೂರು ಇಂದಿಗೂ ತುಂಬಾ ಪ್ರಸಿದ್ಧಿಯನ್ನು ಪಡೆದ ಊರು. ಶಿವರಾಮ ಕಾರಂತರು ಗಾಂಧಿ ಚಳುವಳಿಯ ಪ್ರಭಾವಕ್ಕೆ ಒಳಗಾಗಿ ಬಸರೂರಿನಲ್ಲಿ ದೇವದಾಸಿ ಹೆಸರಿನಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿದ್ದ ಯುವತಿಯರ ಮನವೊಲಿಸಿ ಅವರಿಗೆ ಮದುವೆ ಮಾಡುವರು. ಸ್ವಾತಂತ್ರ್ಯ ಪೂರ್ವದಿಂದಲೂ ವೇಶ್ಯಾವಾಟಿಕೆಗೆ ಹೆಸರಾದ ಈ ಊರಿನಲ್ಲಿ ಇಂದಿಗೂ ವೇಶ್ಯಾವಾಟಿಕೆಯ ಜಾಲವು ಹೇಗೆ ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ಜೀವಂತವಾಗಿ ಉಳಿದುಕೊಂಡು ಬಂದಿದೆ ಎಂಬುದರ ಕುರಿತು ಈ ಪ್ರಬಂಧವು ತಿಳಿಸುತ್ತದೆ.

**ವಾಣಿಶ್ರೀ ಟಿ ಕೆ ಅವರ 'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು'** (೨೦೦೩)ಎಂಬ ಅಪ್ರಕಟಿತ ಪಿಎಚ್ ಡಿ ಪ್ರಬಂಧದಲ್ಲಿ ದೇವಾಲಯಗಳಲ್ಲಿ ಮಹಿಳೆಯರು ಅಂಗಭೋಗ ಮತ್ತು ರಂಗಭೋಗಗಳಿಗೆ ನೇಮಕಗೊಳ್ಳುತ್ತಿದ್ದುದು ಹಾಗೂ ಅವರನ್ನು ಅಲ್ಲಿಯ ಪುರೋಹಿತಶಾಹಿ ವರ್ಗ ಹೇಗೆ ದುರುಪಯೋಗಪಡಿಸಿಕೊಳ್ಳುತ್ತಿತ್ತು ಎಂಬ ವಿವರಣೆಗಳು ದೊರೆಯುತ್ತವೆ.

**ನಾರಾಯಣ ಎಂ ಅವರ 'ಸಾಮಾಜಿಕ ಸಮಸ್ಯೆಗಳು' (೨೦೦೩)** ಕೃತಿಯಲ್ಲಿ ವೇಶ್ಯಾವೃತ್ತಿಯಲ್ಲಿ ತೊಡಗಿರುವ ಮಹಿಳೆಯರು ಹಲವು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಿರುವರು ಎಂದು ಉಲ್ಲೇಖಿಸಿದ್ದಾರೆ. ವೇಶ್ಯಾವಾಟಿಕೆಯು ಅನಾದಿ ಕಾಲದಿಂದಲೂ ಪ್ರಚಲಿತವಿರುವ ಸಾಮಾಜಿಕ ಪಿಡುಗಾಗಿದೆ. ಇದನ್ನು ಹಿಂದೆ ಪುರಸ್ಕಾರ ಮಾಡಲಾಗುತ್ತಿತ್ತು. ಒಬ್ಬ ಹೆಂಗಸು ಹಣಕ್ಕಾಗಲಿ ಇಲ್ಲವೆ ವಸ್ತುವಿಗಾಗಿ ತಾರತಮ್ಯವಿಲ್ಲದೆ ತನ್ನ ದೇಹವನ್ನು ಬಾಡಿಗೆಯಾಗಿ ಸಂಭೋಗಕ್ಕೆ ನೀಡಿದರೆ ಆಕೆ ವೇಶ್ಯೆಯೆನಿಸಿಕೊಳ್ಳುತ್ತಾಳೆ. ಅವಳ ಜೀವನೋಪಾಯಕ್ಕೆ ಅದನ್ನೇ ವೃತ್ತಿಯನ್ನಾಗಿಸಿಕೊಂಡರೆ ಅದೇ ವೇಶ್ಯಾವೃತ್ತಿ. ವೇಶ್ಯೆಯರಲ್ಲಿ ಪಾರಂಪರಾಗತ, ಧಾರ್ಮಿಕ, ಸಾಂಪ್ರದಾಯಿಕ, ಸಾಮಾನ್ಯ, ಗಣ್ಯ, ಒಪ್ಪಂದದ ವೇಶ್ಯೆಯರೆಂಬ ಹಲವು ವಿಧಗಳಿವೆ. ವೇಶ್ಯಾವೃತ್ತಿಗೆ ಕಾರಣಗಳಾಗಿ ಅನುವಂಶೀಯ, ಆರ್ಥಿಕ, ಸಾಮಾಜಿಕ, ಶಾರೀರಿಕ, ಮಾನಸಿಕ ಮತ್ತು ಧಾರ್ಮಿಕ ಅಂಶಗಳನ್ನು ಪರಿಗಣಿಸಲಾಗಿದೆ. ವೇಶ್ಯಾವೃತ್ತಿಯಿಂದ ಮಾರಕ ಗುಹ್ಯ ರೋಗಗಳಾದ ಪರಂಗಿರೋಗ ಮತ್ತು ಮೇಹರೋಗಗಳು ಹರಡುತ್ತವೆಂದು ತಿಳಿಸುತ್ತಾರೆ. ವೇಶ್ಯಾವೃತ್ತಿಯ ನಿವಾರಣೆಗಾಗಿ ಅನೈತಿಕ ವ್ಯವಹಾರ ನಿಗ್ರಹಣಾ ಕಾಯ್ದೆಯನ್ನು ದೇಶದಾದ್ಯಂತ ಜಾರಿಗೆ ತರಲಾಗಿದೆ. ಮಹಿಳೆಯರು ಸ್ವಸಾಮರ್ಥ್ಯದಿಂದ ಜೀವನ ಸಾಗಿಸಬೇಕು ಎಂಬ ದೃಷ್ಟಿಯಿಂದ ನಿರ್ಲಕ್ಷಿತ ಮಹಿಳೆಯರಿಗಾಗಿ ಪುನರ್ವಸತಿ ಕೇಂದ್ರಗಳನ್ನು ಪ್ರಾರಂಭಿಸಿ ಆ ಮೂಲಕ ವೃತ್ತಿಪರ ಕೌಶಲ್ಯ ತರಬೇತಿ ಕೊಡಲಾಗುತ್ತಿದೆ. ವೇಶ್ಯೆಯರ ಬಗ್ಗೆ ಜನರ ಸಂಕುಚಿತ ಮನೋಧರ್ಮವೂ ಬದಲಾದರೆ ವೇಶ್ಯಾವೃತ್ತಿ ಕಣ್ಮರೆಯಾಗುವುದು ಎಂಬ ಆಶಾಭಾವನೆಯನ್ನು ಲೇಖಕರು ವ್ಯಕ್ತಪಡಿಸಿರುವರು.

**ಉಷಾ ಎಂ ಅವರ 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' (೨೦೦೪)** ಎಂಬ ಕೃತಿಯಲ್ಲಿ ಪುರುಷ ಪ್ರಧಾನ ಸಮಾಜದ ಪ್ರಭಾವದಿಂದಾಗಿಯೇ ಈ ವ್ಯವಸ್ಥೆಯಲ್ಲಿ ವೇಶ್ಯಾಪದ್ಧತಿ ಜೀವಂತವಾಗಿ ಉಳಿದಿದೆ ಎಂದು ಪ್ರಸ್ತಾಪಿಸಿರುವರು. ಎಲ್ಲಿಯವರೆಗೆ ಕುಟುಂಬ ಹಾಗೂ ಮದುವೆಗಳಂತಹ ಸಾಮಾಜಿಕ ಸಂಸ್ಥೆಗಳು ಲಿಂಗ ತಾರತಮ್ಯಕ್ಕೆ ಒಳಗಾಗುತ್ತವೆಯೋ ಅಲ್ಲಿಯವರಗೆ ವೇಶ್ಯಾಸಮಸ್ಯೆಯಂತಹವು ಜೀವಂತವಾಗಿರುತ್ತವೆ ಎಂದು ತಿಳಿಸುತ್ತಾರೆ. ವೇಶ್ಯಾವೃತ್ತಿಯನ್ನು ತಡೆಗಟ್ಟಲು ಮೊಟ್ಟಮೊದಲ ಬಾರಿಗೆ ೧೯೨೩ ರಲ್ಲಿಯೇ ಬಾಂಬೆ ಪ್ರಿವೆನ್ಷನ್ ಆಫ್ ಪ್ರಾಸ್ಟಿಟ್ಯೂಷನ್ ಆಕ್ಟ್‌ನ್ನು ಜಾರಿಗೊಳಿಸಿತು. ಮುಂದೆ ೧೯೩೦ ರಲ್ಲಿ ಮದ್ರಾಸ್ ಫ್ರೆಸಿಡೆನ್ಸಿ ೧೯೩೩ರಲ್ಲಿ ಕಲ್ಕತ್ತಾ ಪ್ರೆಸಿಡೆನ್ಸಿಗಳಲ್ಲಿಯೂ ಈ ಕಾಯ್ದೆ ಜಾರಿಗೆ ಬಂದಿತು. ಮೈಸೂರು ಸಂಸ್ಥಾನದಲ್ಲಿ ವೇಶ್ಯಾವೃತ್ತಿಗೆ ಪೂರಕವಾಗಿದ್ದ ಧಾರ್ಮಿಕ ಪದ್ಧತಿಗಳಾದ ದೇವದಾಸಿ ಹಾಗೂ ಗೆಜ್ಜೆ ಪೂಜೆ ಪದ್ಧತಿಗಳನ್ನು ೧೯೦೯–೧೦ರಲ್ಲಿಯೇ ನಿಷೇಧಿಸಲಾಯಿತು. ಧರ್ಮದ ಹೆಸರಿನಲ್ಲಿ ವೇಶ್ಯಾವೃತ್ತಿಗೆ ಬಲಿಯಾಗುವ ಮಹಿಳೆಯರನ್ನು ರಕ್ಷಿಸುವ ಸಲುವಾಗಿ ದಿ ಬಾಂಬೆ ದೇವದಾಸಿ ಪ್ರೊಟೆಕ್ಷನ್ ಆಕ್ಟ್ (೧೯೩೪) ಮತ್ತು ಯು.ಪಿ ನಾಯಕ ಗರ್ಲ್ಸ್ ಪ್ರೊಟೆಕ್ಷನ್ ಆಕ್ಟ್ ನಂತಹ ಕಾನೂನುಗಳು ಜಾರಿಗೊಂಡವು. ಸ್ವಾತಂತ್ರ್ಯ ನಂತರ ೧೯೫೪ ರಲ್ಲಿ ಆಲ್ ಇಂಡಿಯಾ ಕಾನ್ಫರೆನ್ಸ್ ಆಫ್ ಮಾರಲ್ ಅಂಡ್ ಸೋಶಿಯಲ್ ಹೈಜಿನ್ ಸಂಸ್ಥೆಯು ಶ್ರೀಮಂತ ಧನವಂತಿ

ರಾಮರಾವ್ ಅಧ್ಯಕ್ಷತೆಯಲ್ಲಿ ಸಲಹಾ ಸಮಿತಿಯೊಂದನ್ನು ರಚಿಸಿತು. ಅದರೊಂದಿಗೆ ಅಡ್ವೈಸರಿ ಕಮಿಟಿ ಆನ್ ಆಫ್ಟರ್ ಕೇರ್ ಪ್ರೋಗ್ರಾಂ ಎಂಬ ಸಮೀತಿ ಸೆಂಟ್ರಲ್ ಸೋಷಿಯಲ್ ವೆಲ್ ಫೇರ್ ಬೋರ್ಡನಿಂದ ನೇಮಕಗೊಂಡಿತ್ತು. ಆ ಕಮಿಟಿಗಳ ಶಿಪಾರಸ್ಸನ್ನು ೧೯೫೬ ರಲ್ಲಿ ಸಪ್ರಷನ್ ಆಫ್ ಇಮ್ಮಾರಲ್ ಟ್ರ್ಯಾಫಿಕ್ ಆಕ್ಟ್ ರೂಪಗೊಂಡಿತ್ತು ವಿವರಗಳನ್ನು ಈ ಕೃತಿ ನೀಡುತ್ತದೆ.

**ಅ ನ ಕೃಷ್ಣರಾಯ ಅವರ 'ಸಾಹಿತ್ಯ ಮತ್ತು ಕಾಮ ಪ್ರಚೋದನೆ' (ಪು.ಮು ೨೦೦೪)** ಎಂಬ ಕೃತಿಯು ವೇಶ್ಯಾ ವೃತ್ತಿಯ ಸಮಸ್ಯೆಗಳನ್ನು ಕುರಿತಂತೆ ಚರ್ಚಿಸುತ್ತಾ ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವೇಶ್ಯಾವೃತ್ತಿಯ ಕುರಿತು ವಿವರಿಸುವುದರೊಂದಿಗೆ ಆ ಕಾಲದ ಸಾಹಿತಿಗಳು ವೇಶ್ಯಾವ್ಯವಸ್ಥೆಯ ಕುರಿತು ತಳೆದ ನಿಲುವುಗಳ ಕುರಿತು ಚರ್ಚಿಸಿದ್ದಾರೆ.

**ಚಿನ್ನಸ್ವಾಮಿ ಸೋಸಲೆ ಅವರ 'ಸಾಮ್ರಾಜ್ಯ ಮತ್ತು ಸಂಸ್ಥಾನ' (೨೦೦೪)** ಕೃತಿಯು ವಿಜಯನಗರ ಕಾಲದಲ್ಲಿ ವೇಶ್ಯಾವೃತ್ತಿಗೆ ಇರುವಂತಹ ಸ್ಥಾನಮಾನದ ಕುರಿತು ತಿಳಿಸುತ್ತಾ ಅದು ರಾಜಪೋಷಿತವಾದ ವೃತ್ತಿಯಾಗಿತ್ತು ಎಂದು ತಿಳಿಸುವುದು. ವಿಜಯನಗರದಲ್ಲಿ ವೇಶ್ಯಾ ಪದ್ಧತಿಯು ಆಳವಾಗಿ ಬೇರೂರಲು ನಾನಾ ಕಾರಣಗಳಿರುವುದನ್ನು ತಿಳಿಸುತ್ತ ಯುದ್ಧದ ಸಂದರ್ಭದಲ್ಲಿ ಸೈನಿಕರ ದೈಹಿಕ ಆಕಾಂಕ್ಷೆಗಳನ್ನು ತಣಿಸಲು ರಾಜರೇ ವೇಶ್ಯೆಯರನ್ನು ಸೈನ್ಯದೊಂದಿಗೆ ಕಳಿಸುತ್ತಿದ್ದರು ಎಂಬುದನ್ನು ತಿಳಿಸುವುದರೊಂದಿಗೆ ಬದುಕಲು ಬೇರೆ ಮಾರ್ಗವಿಲ್ಲದೆ ವೇಶ್ಯಾವೃತ್ತಿ ಕೈಗೊಂಡ ಮಹಿಳೆಯರು ಆ ಕಾಲದಲ್ಲಿದ್ದರು ಎಂಬುದನ್ನು ಹಲವು ಆಧಾರಗಳೊಂದಿಗೆ ಲೇಖಕರು ಉಲ್ಲೇಖಿಸಿರುವರು. ವಿದೇಶಿ ಪ್ರವಾಸಿಗನಾದ ಬಾರ್ಬೋಸಾನು "ಕೆಲವು ಶ್ರೀಮಂತ ವೇಶ್ಯೆಯರು ಬಡತನದ ಬೇಗೆಯಲ್ಲಿರುವ ಪೋಷಕರಿಗೆ ಅವರ ಹೆಣ್ಣುಮಕ್ಕಳನ್ನು ವೇಶ್ಯಾವೃತ್ತಿಗೆ ಕಳುಹಿಸಲು ಪ್ರಚೋಧಿಸುವರು ಎಂದು ಉಲ್ಲೇಖಿಸಿರುವುದನ್ನು ಲೇಖಕರು ಸಾಂದರ್ಭಿಕವಾಗಿ ತಿಳಿಸುವರು. ಆ ಕಾಲದಲ್ಲಿ ರಾಜ್ಯ ಬೊಕ್ಕಸಕ್ಕೆ ವೇಶ್ಯಾವೃತ್ತಿಯಿಂದ ಹೆಚ್ಚಿನ ತೆರಿಗೆಯು ಸಲ್ಲುತ್ತಿತ್ತು ಎಂದು ತಿಳಿಸಿದ್ದಾರೆ.

**ಲೀಲಾ ಸಂಪಿಗೆ ಅವರ 'ಜನಪದ ಮತ್ತು ಆಧುನಿಕ ಬುಡಕಟ್ಟು ಸಮುದಾಯಗಳಲ್ಲಿ ವೇಶ್ಯಾವಾಟಿಕೆ ಪರಂಪರೆ ಮತ್ತು ಸಮಸ್ಯೆ' (೨೦೦೫)** ಎಂಬ ಪಿಎಚ್‌ಡಿ ಪ್ರಬಂಧದಲ್ಲಿ ಕರ್ನಾಟಕದಲ್ಲಿ ವೇಶ್ಯಾವೃತ್ತಿಯ ಸ್ವರೂಪ ಹೇಗೆ ಬೃಹದಾಕಾರವಾಗಿದೆ, ಆ ವೃತ್ತಿಗೆ ಇಳಿಯುವ ಮಹಿಳೆಯರು ಯಾವ ಕಾರಣಗಳಿಗಾಗಿ ಲೈಂಗಿಕ ವೃತ್ತಿಯಲ್ಲಿ ತೊಡಗುವರು ಎಂಬುದನ್ನು ಹಲವು ದೃಷ್ಟಾಂತಗಳ ಮೂಲಕ ವಿವರಿಸಿರುವರು. ಕರ್ನಾಟಕ ಏಡ್ಸ್ ನಿಯಂತ್ರಣ ಸಂಸ್ಥೆಯಲ್ಲಿ ಉದ್ಯೋಗಿಯಾಗಿರುವ ಇವರು ವೇಶ್ಯಾವೃತ್ತಿಯಲ್ಲಿ ತೊಡಗಿದ ನೂರಾರು ಮಹಿಳೆಯರನ್ನು ಹತ್ತಿರದಿಂದ ಕಂಡವರು. ತಮ್ಮ ವೃತ್ತಿ ಅನುಭವದ ಹಿನ್ನೆಲೆಯಲ್ಲಿ ವೇಶ್ಯಾ ವೃತ್ತಿಯ ವಿವಿಧ ಮಗ್ಗಲುಗಳನ್ನು ತಿಳಿಸಿರುವರು.

**ಉಮೇಶ್ ಬಸಪ್ಪ ಕಾತರಕಿ ಅವರ 'ಬಿಸರಳ್ಳಿಯ ದೇವದಾಸಿ ಪದ್ಧತಿ: ಒಂದು ಅಧ್ಯಯನ'(೨೦೦೬)** ಎಂಬ ಪಿಎಚ್‌ಡಿ ಪ್ರಬಂಧದಲ್ಲಿ ಬಿಸರಳ್ಳಿಯಲ್ಲಿ ದೇವದಾಸಿ ಪದ್ಧತಿಯ ಹಿನ್ನೆಲೆಯಲ್ಲಿ ಪಾತರದವರು, ಬಸವಿಯರು, ಜೋಗತಿಯರು, ವೇಶ್ಯೆಯರ ಕುರಿತಾದ ತೌಲನಿಕ ವಿವರಣೆ ದೊರೆಯುತ್ತದೆ. ಹಾಗೆಯೇ ಹಿರೇಸಿಂಧೋಗಿಯ ಮರುಳಸಿದ್ದೇಶ್ವರ ಮಠದ ಪರಂಪರೆಯ ಪೂಜಾರಿಗಳು ಹಾಗೂ ಆ ಕುಟುಂಬಗಳಿಗೆ

ಸೇರಿದ ಮಹಿಳೆಯರ ಬವಣೆಗಳ ಕುರಿತಾದ ವಿವರಗಳೂ ದೊರೆಯುತ್ತವೆ.

**ಕುಸುಮಾ ಶಾನಭಾಗ ಅವರ 'ಕಾಯದ ಕಾರ್ಪಣ್ಯ'(೨೦೦೭)** ಕೃತಿಯಲ್ಲಿ ವೇಶ್ಯಾವಾಟಿಕೆಯ ಅರ್ಥ, ಸ್ವರೂಪ, ಮತ್ತು ವೃತ್ತಿನಿರತರ ಹಿನ್ನಲೆ ಅವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವ್ಯವಸ್ಥೆಯ ಹಿನ್ನೆಲೆಗಳ ಕುರಿತಾಗಿ ವಿಶ್ಲೇಷಿಸಿರುವರು. ಮುಖ್ಯವಾಗಿ ನಗರ ಪ್ರದೇಶದ ನಿಗದಿತ ಸ್ಥಳಗಳಲ್ಲಿ ನಡೆಯುವ ವೇಶ್ಯಾವಾಟಿಕೆಯ ಕುರಿತಾಗಿ ಈ ಕೃತಿ ಬೆಳಕನ್ನು ಚಲ್ಲುತ್ತದೆ.

**ಶ್ರೀಪತಿ ಹಳಗುಂದ ಕೆ ಅವರ 'ಕನ್ನಡ ಕಾದಂಬರಿಗಳಲ್ಲಿ ವೇಶ್ಯಾಜೀವನ'೨೩ (೨೦೦೮)** ಎಂಬ ಕೃತಿಯು ಸಂಶೋಧನಾ ಕೃತಿಯಾಗಿದೆ. ಈ ಕೃತಿಯಲ್ಲಿ ಕನ್ನಡ ಕಾದಂಬರಿಗಳಲ್ಲಿ ವೇಶ್ಯೆ ಜೀವನ ಹೇಗೆ ಮೂಡಿಬಂದಿದೆ ಎಂಬುದರ ಚಿತ್ರಣವನ್ನು ವಿವಿಧ ಕನ್ನಡ ಕಾದಂಬರಿಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

**ಕೊತ್ಲಮ್ಮ ಅವರ 'ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ದೇವದಾಸಿಯರು'(೨೦೦೮)** ಪಿಎಚ್‌ಡಿ ಪ್ರಬಂಧದಲ್ಲಿ ಕೂಡ್ಲಿಗಿಯ ಪರಿಸರದ ಬೇಡ ಸಮುದಾಯದ ದೇವದಾಸಿಯರ ಹಿನ್ನೆಲೆ, ದೇವದಾಸಿಯರು ಜೀವನೋಪಾಯಕ್ಕಾಗಿ ವೇಶ್ಯಾವಾಟಿಕೆಯಲ್ಲಿ ನಿರತವಾಗಿರುವುದು, ಅವರ ಸಾಮಾಜಿಕ ಜೀವನ ಇತ್ಯಾದಿ ವಿವರಗಳನ್ನು ಕೊಟ್ಟಿರುವರು.

**ನಳಿನಿ ಜಮೀಲಾ ಅವರ 'ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ' (೨೦೦೯)** ವನ್ನು ಸ್ವತಃ ಲೇಖಕಿಯೇ ಬರೆದಿದ್ದು ಅದನ್ನು ಕೆ. ನಾರಾಯಣ ಸ್ವಾಮಿ ಅವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಇದರಲ್ಲಿ ವೇಶ್ಯೆಯಾಗಿ ಬದಲಾವಣೆಗೊಂಡ ಜಮೀಲಾಳ ಪ್ರಾರಂಭದ ದಿನದಿಂದ ಹಿಡಿದು ವೇಶ್ಯೆಯಾಗಿ ಪರಿವರ್ತನೆಯಾದ ಬಗೆಯ ಮನೋಜ್ಞ ನಿರೂಪಣೆ ಕಂಡುಬರುವುದು. ಈ ಆತ್ಮಕಥನದಲ್ಲಿ ಲೈಂಗಿಕ ಕಾರ್ಯಕರ್ತೆಯರು ಅನುಭವಿಸುತ್ತಿರುವ ಸಮಸ್ಯೆಗಳು ಹಾಗೂ ಪರಿಣಾಮಗಳು, ಮದ್ಯವರ್ತಿಗಳು ಮತ್ತು ಪೋಲೀಸರು ಹಾಗೂ ಲೈಂಗಿಕ ಕಾರ್ಯಕರ್ತರ ಮದ್ಯ ನಡೆಯುವ ಸಂಘರ್ಷಗಳ ಬಗ್ಗೆ ವಿಸ್ತೃತವಾದ ವಿವರಣೆ ದೊರೆಯುವುದು.

**ಗೀತಾ ಕೃಷ್ಣಮೂರ್ತಿ ಅವರ 'ಮಹಿಳಾ ಹಕ್ಕುಗಳು' (೨೦೦೯)** ಕೃತಿಯು ಮಹಿಳೆಯನ್ನು ಅಪಹರಸಿಯೋ, ಒತ್ತಾಯಪೂರ್ವಕವಾಗಿಯೋ ವೇಶ್ಯಾವಾಟಿಕೆ ದಂದೆಗೆ ತಳ್ಳುವ ಕುರಿತು ತಿಳಿಸುವುದು. ೧೯೪೮ರಿಂದೀಚೆಗೆ ಅನೈತಿಕ ವ್ಯವಹಾರಗಳ ಪರಿಕಲ್ಪನೆಯು ವಿಸ್ತಾರಗೊಳಿಸಿರುವ ಕುರಿತು ವಿವರಿಸುವುದು. ಅಂತರಾಷ್ಟ್ರೀಯ ಮಟ್ಟದಲ್ಲಿ ಮಹಿಳಾ ಅಪಹರಣವೆಂಬುದು ಒಂದು ದಂದೆಯಾಗಿ ಬೆಳೆವಣಿಗೆಗೊಂಡಿದೆ. ಅಭಿವೃದ್ಧಿ ಹೊಂದಿರದ ತೃತೀಯ ರಾಷ್ಟ್ರಗಳಲ್ಲಿ ಉದ್ಯೋಗದ ಕೊರತೆಯಿಂದ ಯುವಜನತೆ ದುಡಿಮೆಯಿಲ್ಲದೆ ಬಳಲುವ ಸ್ಥಿತಿ ಉಂಟಾಗುವುದರಿಂದ ಬಹುತೇಕ ಯುವಕರು ವಿವಾಹಿತರಾಗದೇ ಉಳಿಯಬೇಕಾದ ಅನಿವಾರ್ಯ ಸ್ಥಿತಿಗೆ ತಳ್ಳಲ್ಪಡುವರು. ಈ ರೀತಿ ನಿರುದ್ಯೋಗಿಗಳಾದ ಯುವಕರು ತಮ್ಮ ದೈಹಿಕ ಆಸೆಯನ್ನು ತೀರಿಸಿಕೊಳ್ಳಲು ವೇಶ್ಯೆಯರ ಮೊರೆಹೋಗುವರು ಹಾಗೂ ಹಣ ದೊರೆಯುವ ಅನೈತಿಕ ಚಟುವಟಿಕೆಗಳಲ್ಲಿ ತೊಡಗುವ ಸ್ಥಿತಿ ಏರ್ಪಡುವುದು ಎಂದು ತಿಳಿಸಿರುವರು

**ಅನುಸೂಯ ಎಂ ಕದಂ ಅವರ 'ಮಹಿಳಾ ಶೋಷಣೆಯ ನೆಲೆಗಳು' (೨೦೧೧)** ಕೃತಿಯು ಭಾರತೀಯ ಸಮಾಜದಲ್ಲಿ ಮಹಿಳೆಯು ಯಾವೆಲ್ಲಾ ರೀತಿಯಲ್ಲಿ ಶೋಷಣೆಗೊಳಗಾಗುತ್ತಾಳೆ, ಮಹಿಳಾ ಶೋಷಣೆಗೆ ಇರುವ ಕಾರಣಗಳನ್ನು ವಿವರಿಸುತ್ತಾ ಕೆಲವೊಮ್ಮೆ ಮಹಿಳೆಯರನ್ನು ಮಹಿಳೆಯರೇ ಹೇಗೆಲ್ಲಾ ಶೋಷಣೆ ಮಾಡಬಲ್ಲರು ಎಂಬುದನ್ನು ಈ ಕೃತಿಯಲ್ಲಿ ಕಾಣಬಹುದು

**ಭಾರತೀಯ ಜೀವಿ ಅವರ 'ದೇವದಾಸಿ ಪ್ರಸಂಗ ದೀಪ್ತಿ' (೨೦೧೧)** ಕೃತಿಯಲ್ಲಿ ದೇವದಾಸಿ ಆಚರಣೆಗಳ ಬಗ್ಗೆ ವಿವರಗಳು, ದೇವದಾಸಿ ಪದ್ದತಿ ನಿರ್ಮೂಲನಾ ಕ್ರಮಗಳ ಕುರಿತ ವಿವರಗಳಿವೆ.

**ತಾಪಿ ಧರ್ಮಾರಾವ್ ಅವರ ದೇವಾಲಯಗಳು ಮತ್ತು ಲೈಂಗಿಕ ಶಿಲ್ಪ' (೨೦೧೨)** ಕೃತಿಯನ್ನು ಎಸ್ ಆರ್ ಶಾಸ್ತ್ರಿ ಅವರು ಕನ್ನಡಕ್ಕೆ ಅನುವಾದಿಸಿರುವರು. ಪ್ರಸ್ತುತ ಪುಸ್ತಕದಲ್ಲಿ ದೇವಾಲಯದಲ್ಲಿ ಲೈಂಗಿಕ ಶಿಲ್ಪಗಳ ಮಹತ್ವದ ಕುರಿತ ವಿವಿಧ ನಾಗರೀಕತೆ, ವಿವಿಧ ರಾಷ್ಟ್ರಗಳಲ್ಲಿರುವ ಪುರಾತನ ದೇವಾಲಯಗಳ ಉಲ್ಲೇಖ ಈ ಕೃತಿಯಲ್ಲಿ ಕೊಡಲಾಗಿದೆ.

**ಶಿವರಾಮಯ್ಯ ಅವರ 'ವೇಶ್ಯೆಯರು ಮತ್ತು ಲೈಂಗಿಕ ಅಲ್ಪ ಸಂಖ್ಯಾತರು ನಡೆದು ಬಂದದಾರಿ' (೨೦೧೨)** ಎಂಬ ಕೃತಿಯು ಮನುಷ್ಯನ ನಾಗರೀಕತೆಯೊಂದಿಗೆ ವೇಶ್ಯಾವಾಟಿಕೆ ಎಂಬುದೂ ಬೆಳೆದು ಬಂದಿದೆ. ಇದು ಎಲ್ಲ ದೇಶ, ಕಾಲಗಳಲ್ಲಿಯೂ ಇದ್ದ ಒಂದು ಪುರಾತನ ಪದ್ದತಿ, ವಿವಾಹಿತ ಅಥವಾ ಅವಿವಾಹಿತ ಪುರುಷರು ಇಟ್ಟುಕೊಂಡ ಹೆಣ್ಣುಗಳೇ ವೇಶ್ಯೆಯರು ಎಂದು ಕರೆಯಲಾಗುವುದು. ಸಾಮಾನ್ಯವಾಗಿ ಮೇಲುವರ್ಗದ ಪುರುಷರು ಕೆಳವರ್ಗದ ಹೆಣ್ಣುಗಳನ್ನು ದೈಹಿಕ ಆಸೆಗಾಗಿ ಇಟ್ಟುಕೊಳ್ಳುತ್ತಿದ್ದರು. ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ವೇಶ್ಯಾವಾಟಿಕೆಯು ಅಷ್ಟಾದಶ ವರ್ಣನೆಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ. ಭೋಗವಸ್ತುಗಳಲ್ಲಿ ವೇಶ್ಯೆ ಬಹಳ ಮೇಲಿನವಳು ಎಂದು ಭಾವಿಸಲಾಗಿತ್ತು. ಪುರುಷರ ಸೇವೆಯನ್ನು ಮಾಡುತ್ತಿದ್ದವರು ಕೇವಲ ಸೂಳೆಯರು ಹಾಗೆಯೇ ದೇವರ ಸೇವೆಗೆ ನಿಯಮಿತರಾಗಿದ್ದ ಹೆಣ್ಣುಗಳನ್ನು 'ದೇವಸೂಳೆಯರು' ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಪ್ರಾಚೀನ ಕಾಲದಲ್ಲಿ ದೇವಸ್ಥಾನ ಒಂದು ಸಾಮಾಜಿಕ ಸಂಸ್ಥೆಯಾಗಿದ್ದು, ಪೂಜಾರಿಯಂತೆ ಸೂಳೆಯರಿಗೂ ಅದರಲ್ಲಿ ಪ್ರಮುಖ ಸ್ಥಾನವಿತ್ತು. ಆನಂತರದ ಕಾಲದಲ್ಲಿ ದೇವದಾಸಿಯರು ಎಂದು ಕರೆಯಲಾಯಿತು. ಇವರು ನೃತ್ಯಕಲೆಗಳಲ್ಲಿ ಪರಿಣತಿಯನ್ನು ಪಡೆದಿರುತ್ತಿದ್ದರು. ಪುರೋಹಿತರಾದಿಯಾಗಿ ಉಳಿದ ಪುರುಷರಿಂದ ಲೈಂಗಿಕವಾಗಿ ತೃಪ್ತಿಯನ್ನು ಪಡೆಯುತ್ತಿದ್ದಲ್ಲದೆ ಕೆಲವೊಮ್ಮೆ ಶೋಷಣೆಗೂ ಒಳಗಾಗುತ್ತಿದ್ದರು. ಸಾಮಾನ್ಯವಾಗಿ ವೇಶ್ಯಾವೃತ್ತಿಯನ್ನು ಅವಲಂಬಿಸಿದ್ದ ಸಾಮಾನ್ಯ ಸ್ತ್ರೀಯರನ್ನು ಕನ್ನಡ ಶಾಸನ ಮತ್ತು ಕಾವ್ಯಗಳು ಗೌರವದಿಂದಲೇ ಕಂಡಿವೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

ವಿಜಯನಗರವು ದಕ್ಷಿಣ ಭಾರತದ ವ್ಯಾಪಾರ ವಹಿವಾಟಿನ ಕೇಂದ್ರ ಬಿಂದುವಾಗಿದ್ದಿತು. ಆದ್ದರಿಂದ ಸೂಳೆಗೇರಿಗಳು ಸಹಜವಾಗಿದ್ದವು. ನೇಮಿಚಂದ್ರನ ಲೀಲಾವತಿ ಕಾವ್ಯದಲ್ಲಿ ಬೆಳದಿಂಗಳ ವಿಹಾರ, ಸೂಳೆಗೇರಿ, ಹೂವಿನ ಸಂತೆಗಳ ಸವಿಸ್ತಾರವಾದ ವರ್ಣನೆ ಬರುತ್ತದೆ. ಜನ್ನನ ಅನಂತನಾಥ ಪುರಾಣ, ಹರಿಹರನ ಗಿರಿಜಾ ಕಲ್ಯಾಣ ಮುಂತಾದ ಕೃತಿಗಳಲ್ಲಿಯೂ ವೇಶ್ಯಾವಾಟಿಕೆಯ ಚಿತ್ರಣ ಸಾಗಿಬಂದಿದೆ.

ಜನ್ನ ಅನಂತನಾಥ ತೀರ್ಥಂಕರನನ್ನೂ ಹರಿಹರ ನಾರದನನ್ನೂ ಸೂಳೆಗೇರಿಗಳಲ್ಲಿ ಸುತ್ತಿ ಬರುವಂತೆ ಮಾಡಿರುವರು ಎಂದು ಲೇಖಕರು ಉದಾಹರಣೆಸಹಿತ ಉಲ್ಲೇಖಿಸಿರುವರು.

**ಕೇಶವಶರ್ಮ ಕೆ ಅವರ 'ಸ್ತ್ರೀವಾದಿ ಪರಿಕಲ್ಪನೆಗಳು'** (೨೦೧೩) ಕೃತಿಯಲ್ಲಿ ಚಾರಿತ್ರಿಕ ಹಿನ್ನೆಲೆಯಲ್ಲಿ ವೇಶ್ಯಾಪದ್ಧತಿಯ ಸ್ವರೂಪ, ವೇಶ್ಯಾಪದ್ಧತಿಗೆ ಇಲ್ಲಿಯ ರಾಜಕೀಯ ವ್ಯವಸ್ಥೆ ಹೇಗೆ ಪೂರಕವಾಗಿ ಕಾರ್ಯವೆಸಗಿದೆ ಎಂಬುದನ್ನು ಸ್ತ್ರೀವಾದಿ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ.

**ವೆಂಕಟಜಿ ಭಸ್ಮೆ ಅವರ 'ವಾತ್ಸಾಯನ ಕಾಮಸೂತ್ರ' (೨೦೧೩)** ಎಂಬ ಕೃತಿಯಲ್ಲಿ ಒಟ್ಟು ೭ ಅಧ್ಯಾಯಗಳಿವೆ. ಅದರಲ್ಲಿ ೬ನೇ ಅಧ್ಯಾಯವು ವೈಸಿಕ ಅಧೀಕರಣ ಎಂಬ ಶೀರ್ಷಿಕೆಯಾಗಿದೆ. ಈ ಅಧ್ಯಾಯದಲ್ಲಿ ವಾತ್ಸಾಯನನು ಮಹಿಳೆಯರು ಯಾವ ಕಾರಣಗಳಿಗಾಗಿ ವೇಶ್ಯೆಯರಾಗುವರು ಎಂಬುದರ ವಿವರಣೆ ಕೊಡಲಾಗಿದೆ. ಅಂಗಗಳ ಆಧಾರ ಹಾಗೂ ಗುಣಸ್ವಭಾವಗಳ ಮೇಲೆ ಮಹಿಳೆಯರನ್ನು ಚಿತ್ತಿನಿ, ಪದ್ಮಿನಿ, ಶಂಕಿನಿ ಇತ್ಯಾದಿ ವಿಭಾಗೀಕರಣ ಮಾಡಿದ ವಿವರಗಳು ದೊರೆಯುವವು.

**ಸಿದ್ರಾಮ ಕಾರಣಿಕ ಅವರ 'ದೇವದಾಸಿ ಮತ್ತು ಬೆತ್ತಲೆ ಸೇವೆ' (೨೦೧೩)** ಎಂಬ ಚಿಕ್ಕ ಕೃತಿಯಲ್ಲಿ ಎಲ್ಲಮ್ಮ ಹಾಗೂ ಹುಲಿಗೆಮ್ಮ ಸಂಪ್ರದಾಯಗಳ ಹಿನ್ನೆಲೆಯಲ್ಲಿ ದೇವದಾಸಿ ಪದ್ಧತಿ ಹೇಗೆ ಜೀವಂತವಾಗಿದೆ, ಬೆತ್ತಲೆ ಸೇವೆ ನಡೆದುಬಂದ ದಾರಿ, ಬೆತ್ತಲೆ ಸೇವೆಯ ರೂಪಾಂತರಗಳಾದ ಬೇವಿನ ಉಡುಗೆ ಇತ್ಯಾದಿಗಳ ಕುರಿತು ತಿಳಿಯುತ್ತೇವೆ

**ಅಲ್ಲಗಿರಿರಾಜ್‌ಅವರ 'ಮುತ್ತು ಒಡೆವ ಬನ್ನಿ' (೨೦೧೫)** ಸಂಪಾದಿತ ಕೃತಿಯನ್ನು ಕನಕಗಿರಿಯ ದೇವದಾಸಿ ಸಂಪನ್ಮೂಲ ಸಮೂಹ ಕೇಂದ್ರ ಪ್ರಕಟಿಸಿದೆ. ವಿವಿಧ ಲೇಖಕರಿಂದ ಸಂಪಾದಿಸಿದ ಲೇಖನಗಳು ಈ ಕೃತಿಯಲ್ಲಿದ್ದು ದೇವದಾಸಿ ಪದ್ಧತಿ ಹಾಗೂ ಅದರ ಕರಾಳ ಮುಖಗಳನ್ನು ಈ ಕೃತಿ ಪರಿಚಯಿಸುತ್ತದೆ.

**ತಿಪ್ಪೇಸ್ವಾಮಿ ಎಚ್ ಅವರ 'ಕನ್ನಡ ಶಾಸನಗಳಲ್ಲಿ ವೇಶ್ಯೆಯರು' (೨೦೧೬)** ಕೃತಿಯಲ್ಲಿ ವೇಶ್ಯಾವಾಟಿಕೆಯ ಪರಿಕಲ್ಪನೆ ಹಾಗೂ ಪ್ರಾಚೀನತೆ, ವಿವಿಧ ಆಕರಗಳ ಹಿನ್ನೆಲೆಯಲ್ಲಿ ವೇಶ್ಯೆಯರು, ಕನ್ನಡ ಶಾಸನಗಳು ಮತ್ತು ವೇಶ್ಯೆಯರು, ವೇಶ್ಯಾ ಪ್ರಕಾರಗಳು ಮತ್ತು ಅವುಗಳ ಸ್ಥಾನಮಾನಗಳು, ಸಮಾಜಕ್ಕೆ ವೇಶ್ಯೆಯರ ಕೊಡುಗೆಗಳು, ವೇಶ್ಯಾಪದ್ಧತಿಯ ಪ್ರಸಕ್ತ ಸ್ವರೂಪಗಳ ಕುರಿತಾದ ವಿವರಗಳನ್ನು ಶಾಸನಗಳ ಹಿನ್ನೆಲೆಯಲ್ಲಿ ನೋಡಲಾಗಿದೆ.

**ರಾಧ ಟಿ ಅವರ 'ಬಳ್ಳಾರಿ ಜಿಲ್ಲೆಯ ದೇವದಾಸಿಯರು'(೨೦೧೯)** ಪಿಎಚ್‌ಡಿ ಪ್ರಬಂಧವು ಬಳ್ಳಾರಿ ಜಿಲ್ಲೆಯಲ್ಲಿರುವ ದೇವದಾಸಿಯರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದ್ದು ಏಳು ಅಧ್ಯಾಯಗಳಾಗಿ ವಿಭಾಗಿಸಿಕೊಂಡಿರುವರು. ಪ್ರವೇಶ, ದೇವದಾಸಿಯರ ಜನಸಂಖ್ಯೆ, ದೇವದಾಸಿ ಪದ್ಧತಿಯ ಪ್ರಕಾರ ಹಾಗೂ ಸ್ವರೂಪ, ದೇವದಾಸಿ ಪದ್ಧತಿಯನ್ನು ಅನುಸರಿಸುವ ಸಮುದಾಯಗಳು, ದೇವದಾಸಿಯರ

ಸಾಮಾಜಿಕ ಬದುಕು, ಧಾರ್ಮಿಕ ಕೇಂದ್ರಗಳು, ದೇವದಾಸಿಯರ ಹಾಗೂ ಅವರ ಮಕ್ಕಳ ಶೈಕ್ಷಣಿಕ ಸ್ಥಿತಿ, ಆರ್ಥಿಕ ಸ್ಥಿತಿ, ರಾಜಕೀಯ ಜೀವನ ಇತ್ಯಾದಿ ವಿವರಗಳನ್ನು ತಿಳಿಸಲಾಗಿದೆ. ಹಾಗೆಯೇ ದೇವದಾಸಿ ಮಹಿಳೆರಿಗಾಗಿ ಇರುವ ಪುನರ್ವಸತಿ ಯೋಜನೆ ಇತ್ಯಾದಿ ಯೋಜನೆಗಳ ಕುರಿತಾಗಿಯೂ ತಿಳಿಸಲಾಗಿದೆ. ಹಾಗೆಯೇ ಕೊನೆಯಲ್ಲಿ ಸಮಾರೋಪವಿದ್ದು ದೇವದಸಿ ಪದ್ಧತಿಯನ್ನು ಅನುಸರಿಸುವ ಮಹಿಳೆಯರ ಸಮಸ್ಯೆ, ಸವಾಲುಗಳ ಕುರಿತು ತಿಳಿಸುವುದರೊಂದಿಗೆ ಕೆಲವು ಸಲಹೆ ಸೂಚನೆಗಳನ್ನು ನೀಡಿರುವರು.

**ಭಾರ್ಸೆ ಶೀಲಾ ಅವರ ‘Indian Laws on Prostitution and Sexual Offences’** (೧೯೯೬)ಕೃತಿಯು ಭಾರತೀಯ ನ್ಯಾಯ ವ್ಯವಸ್ಥೆಯು ವೇಶ್ಯಾವೃತ್ತಿ ಹಾಗೂ ಲೈಂಗಿಕ ಅಪರಾಧಕ್ಕಾಗಿ ಯಾವ ಯಾವ ಸೆಕ್ಷನ್ ಅಡಿಯಲ್ಲಿ ಶಿಕ್ಷೆ ವಿಧಿಸಲಾಗುವುದು ಎಂಬುದನ್ನು ಸವಿವರವಾಗಿ ವಿವರಿಸಿದೆ.

**ಬಿಯೋತ್ರಾ ಬಿ ಆರ್ ಅವರ ‘The Immoral Traffic (Prevention) Act, 1956 (With State Rules)’** (೧೯೮೬)ಕೃತಿಯು ಅನೈತಿಕ ಚಟುವಟಿಕೆ ನಿಯಂತ್ರಣ ಕಾಯ್ದೆ: ೧೯೫೬ರ ಕುರಿತ ಮಾಹಿತಿಯನ್ನೊದಗಿಸುವುದು.

**ಕೊರೊಲ್‌ಸ್ಮಾರ್ಟ್ ಅವರ ‘Women,Crime&Criminology-AFeministCritique’** (೧೯೮೬)ಕೃತಿಯು ಮಹಿಳಾ ಅಪರಾಧಗಳ ಸ್ವರೂಪ ಯಾವ ರೀತಿ ಇರುವುದು, ಮಹಿಳಾ ಅಪರಾಧಕ್ಕಿರುವ ಕಾರಣಗಳು ಇತ್ಯಾದಿಗಳ ಕುರಿತು ಅಪರಾಧಶಾಸ್ತ್ರ ಏನು ಹೇಳುವುದು ಎಂಬುದನ್ನು ಮಹಿಳಾವಾದದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿರುವ ಕೃತಿಯಾಗಿದೆ. **ಇವರದೇ ಮತ್ತೊಂದು ಕೃತಿ ‘Law, Crime and Sexuality: Essays in Feminism’** (೧೯೯೫)ಕೃತಿಯು ಮಹಿಳಾ ಲೈಂಗಿಕತೆ ಹಾಗೂ ಅಪರಾಧಗಳ ಸ್ವರೂಪ ಯಾವ ರೀತಿ ಇರುವುದು, ಮಹಿಳಾ ಲೈಂಗಿಕ ವೃತ್ತಿಗೆ ಸಂಬಂಧಿಸಿದಂತೆ ಇರುವ ಕಾನೂನು ವ್ಯವಸ್ಥೆ ಯಾವ ರೀತಿಯಾಗಿದೆ ಎಂಬುದನ್ನೊಳಗೊಂಡ ಲೇಖನಗಳ ಸಂಗ್ರಹ ಕೃತಿಯಾಗಿದೆ. ಈ ಕೃತಿಯ ಲೇಖನಗಳು ಮಹಿಳಾ ಅಧ್ಯಯನದ ಹಿನ್ನೆಲೆಯಲ್ಲಿ ರಚನೆಗೊಂಡಿರುವ ಲೇಖನಗಳಿಂದ ಕೂಡಿದೆ.

**ಘೋಷ್ ಎಸ್ ಕೆ ಅವರ ‘The World of Prostitutes’**(೧೯೯೬)ಕೃತಿಯು ವೇಶ್ಯಾವಾಟಿಕೆಯೆಂಬುದು ಪ್ರಪಂಚದಲ್ಲಿ ವ್ಯಾಪಿಸಿಕೊಂಡಿರುವ ರೀತಿ, ಅದರ ಹಿನ್ನೆಲೆ, ಬೇರೆ ಬೇರೆ ದೇಶಗಳಲ್ಲಿ ವೇಶ್ಯಾವಾಟಿಕೆ ಯಾವ ರೀತಿಯಲ್ಲಿದೆ. ಅದನ್ನು ಒಂದು ವೃತ್ತಿಯಾಗಿ ಪರಿಗಣಿಸಿ ಕಾನೂನಾತ್ಮಕ ಚೌಕಟ್ಟಿನ ಬೆಂಬಲ ದೊರಕಿದೆಯೆ ಅಥವಾ ಅಪರಾಧವೆಂದು ಪರಿಗಣಿಸಿದೆಯೆ, ಕಾನೂನು ಬೆಂಬಲ ನೀಡಿರುವ ರಾಷ್ಟ್ರಗಳು ಯಾವುವು, ಅಪರಾಧವೆಂದು ಪರಿಗಣಿಸಿರುವ ರಾಷ್ಟ್ರಗಳು ಯಾವುವು, ವೇಶ್ಯಾವಾಟಿಕೆಯ ಪ್ರಾಚೀನತೆ ಇತ್ಯಾದಿ ವಿಸ್ತೃತವಾದ ಮಾಹಿತಿಗಳನ್ನು ನೀಡುವ ಕೃತಿ ಇದಾಗಿದೆ.

**ರಾಮಲಾಲ್ ಗುಪ್ತಾ ಅವರ 'The Medico Legal Aspects of Sexual Offences'** (೧೯೭೫)ಕೃತಿಯು ಲೈಂಗಿಕ ವೃತ್ತಿಯ ಅಪರಾಧಕ್ಕೆ ವೈದ್ಯಕೀಯವಾಗಿ ಕಾನೂನಾತ್ಮಕ ನೆಲೆಗಳು ಏನಿವೆ. ಲೈಂಗಿಕ ವೃತ್ತಿನಿರತರ ಬಡತನ, ಶೋಷಣೆಯ ಸ್ವರೂಪಗಳು ಹೇಗಿವೆ, ಅವರ ವೃತ್ತಿಬದುಕಿಗೆ ಹಾನಿಯಾಗದಂತೆ ಕಾನೂನಾತ್ಮಕವಾಗಿ ವೈದ್ಯಕೀಯ ನೆರವನ್ನು ಹೇಗೆ ಪಡೆಯಬಹುದು ಎಂಬ ಅಂಶಗಳನ್ನು ತಿಳಿಸುತ್ತದೆ.

**ಜೊರಾದಾರ್ ಬಿ ಅವರ 'Prostitution in Nineteenth and Early Twentieth Century'** (೧೯೮೫)ಕೃತಿಯು ೧೯ ಹಾಗೂ ೨೦ನೇ ಶತಮಾನದಲ್ಲಿ ವೇಶ್ಯಾವಾಟಿಕೆ ಭಾರತದಲ್ಲಿ ಯಾವ ಸ್ವರೂಪದಲ್ಲಿದೆ, ಅದಕ್ಕೆ ಇರುವ ಧಾರ್ಮಿಕ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕಾರಣಗಳೇನು ಎಂಬುದನ್ನು ತಿಳಿಸುತ್ತದೆ.

**ಮುಖರ್ಜಿ ಕೆ ಕೆ ಅವರ 'Girl, Child Prostitution in India (Policies and Programmes)'** (೧೯೯೭)ಕೃತಿಯು ಭಾರತದಲ್ಲಿ ಅಪ್ರಾಪ್ತ ವಯಸ್ಸಿನ ಮಹಿಳೆಯರ ವೇಶ್ಯಾವಾಟಿಕೆ ಸ್ವರೂಪ ಹೇಗಿದೆ. ವೇಶ್ಯಾವಾಟಿಕೆ ದಂಧೆಯಲ್ಲಿ ಚಿಕ್ಕ ಹೆಣ್ಣುಮಕ್ಕಳನ್ನು ಬಳಕೆ ಮಾಡಿಕೊಳ್ಳುವ ಕಾಳದಂಧೆ ಹೇಗೆ ನಡೆಯುವುದು, ಆ ದಂಧೆಯ ಹಿಂದೆ ಯಾರ ಬೆಂಬಲ ಇದೆ, ಅಪ್ರಾಪ್ತ ವಯಸ್ಕರ ವೇಶ್ಯಾವೃತ್ತಿಯನ್ನು ನಿಯಂತ್ರಿಸಲು ಸರ್ಕಾರ ಯಾವ ರೀತಿಯ ನಿಯಮಗಳನ್ನು ರೂಪಿಸಿಕೊಂಡಿದೆ, ಅದರ ನಿಯಂತ್ರಣಕ್ಕಾಗಿ ಇರುವ ಕಾರ್ಯಕ್ರಮಗಳು ಯಾವುವು, ಅಪ್ರಾಪ್ತ ವಯಸ್ಸಿನ ಮಹಿಳಾ ವೇಶ್ಯಾವಾಟಿಕೆಯನ್ನು ನಿಯಂತ್ರಿಸಲು ಇರುವ ಸರ್ಕಾರದ ಕಾರ್ಯಕ್ರಮಗಳು ಎಷ್ಟರಮಟ್ಟಿಗೆ ಫಲಾನುಭವಿಗಳಿಗೆ ತಲುಪಿವೆ, ಅವುಗಳ ಸಾಫಲ್ಯ, ವೈಫಲ್ಯಗಳೇನು ಎಂಬುದರ ಕುರಿತು ರಾಷ್ಟ್ರೀಯ ಮಹಿಳಾ ಆಯೋಗಕ್ಕೆ ಒಪ್ಪಿಸಿದ ಯೋಜನಾ ವರದಿ ಇದಾಗಿದೆ.

**ನೀರಾ ದೇಸಾಯಿ ಮತ್ತು ಮೈತ್ರೇಯಿ ಕೃಷ್ಣರಾಜು ಅವರ 'Women and Society in India'**(೧೯೯೦) ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನ, ಮಹಿಳಾ ಪಾಲ್ಗೊಳ್ಳುವಿಕೆ, ಮಹಿಳಾ ಶೋಷಣೆ ಇತ್ಯಾದಿ ಮಹಿಳಾ ಕೇಂದ್ರಿತ ವಿಷಯಗಳನ್ನಿರಿಸಿಕೊಂಡು ಕೃತಿಯಲ್ಲಿ ಚರ್ಚಿಸಲಾಗಿದೆ.

**ಪುಣೇಕರ್ ಎಸ್ ಡಿ ಮತ್ತು ಕಮಲಾರಾವ್ ಅವರ 'A Study of Prostitutes in Bombay'**(೧೯೬೭)ಮುಂಬೈ ನಗರದ ಕಾಮಟೀಪುರ ಹಾಗೂ ಇತರ ಕೊಳಚೆ ಪ್ರದೇಶಗಳಲ್ಲಿ ನಡೆಯುವ ಲೈಂಗಿಕ ವೃತ್ತಿಯ ಸ್ವರೂಪ ಹಾಗೂ ಆ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರ ಸಾಮಾಜಿಕ ಹಿನ್ನೆಲೆಯನ್ನು ತಿಳಿಸಲಾಗಿದೆ.

**ರೋನಾಲ್ಡ್ ಹೈಮನ್ಸ್ ಅವರ 'Empire and Sexuality- The British Experience'** (೧೯೯೧) ಸಾಮ್ರಾಜ್ಯಶಾಹಿ ವ್ಯವಸ್ಥೆಯಲ್ಲಿ ಸೇವೆಯ ಹೆಸರಿನಲ್ಲಿ ಮಹಿಳೆಯರನ್ನು ಲೈಂಗಿಕವಾಗಿ ಹೇಗೆ ಶೋಷಣೆ ಮಾಡಲಾಗುವುದು ಎಂಬುದನ್ನು ಬ್ರಿಟಿಷ್ ಸಾಮ್ರಾಜ್ಯವನ್ನು ನಿದರ್ಶನವಾಗಿರಿಸಿಕೊಂಡು ವಿಶ್ಲೇಷಿಸಿದ ಕೃತಿ ಇದಾಗಿರುವುದು.

**ರೋಮಾ ದೇಬಬ್ರತ ಅವರ 'Lost Childhood, A field study of child prostitution in Delhi'** (೧೯೯೭) ಅಪ್ರಾಪ್ತ ವಯಸ್ಸಿನ ಬಾಲಕಿಯರು ಆಟವಾಡುವ ವಯಸ್ಸಿನಲ್ಲಿಯೇ ಲೈಂಗಿಕ ದುರ್ಬಳಕೆಗೆ ಹೇಗೆ ಒಳಗಾಗುತ್ತಾರೆ, ಬಾಲ ವೇಶ್ಯಾವಾಟಿಕೆಯ ಸ್ವರೂಪ, ಬಾಲವೇಶ್ಯೆಯರ ಸ್ಥಿತಿಗತಿಗಳನ್ನು ದೆಹಲಿಯನ್ನು ಕೇಂದ್ರವಾಗಿರಿಸಿಕೊಂಡು ಸಮೀಕ್ಷೆ ನಡೆಸಿ ರಾಷ್ಟ್ರೀಯ ಮಹಿಳಾ ಆಯೋಗಕ್ಕೆ ಸಲ್ಲಿಸಿದ ವರದಿ ಇದಾಗಿದೆ.

**ಸಿಂಹ ಎಸ್ ಎನ್ ಹಾಗೂ ಬಸು ಬೆನ್ ಕೆ ಅವರ 'The History of Marriage and Prostitution (Vedas to Vatsyayana)'** (೧೯೯೨) ಕೃತಿಯು ಪ್ರಾಚೀನ ಕಾಲದ ಭಾರತೀಯ ಸಮಾಜದ ವೈವಾಹಿಕ ಪದ್ಧತಿ, ಅದರ ಕಟ್ಟಳೆಗಳು ಯಾವ ರೀತಿಯಲ್ಲಿ ಇದ್ದಿತು ಎಂಬುದನ್ನು ನೋಡುವುದರೊಂದಿಗೆ ಈ ಸಮಾಜದಲ್ಲಿ ವೇದ ಕಾಲದಿಂದ ವಾತ್ಸಾಯನನ ಕಾಲದವರೆಗೂ ಭಾರತೀಯ ಸಮಾಜದಲ್ಲಿ ಲೈಂಗಿಕ ವೃತ್ತಿ ಹೇಗಿದ್ದಿತು ಎಂಬುದನ್ನು ಸಂಶೋಧನಾ ಸಮೀಕ್ಷೆಯ ಮೂಲಕ ಕಂಡುಕೊಂಡು ದಾಖಲಿಸಿರುವುದಾಗಿ ಕೃತಿಕಾರರು ಹೇಳಿರುವರು.

**ಸುಂದರರಾಜ್ ಎಂ ಅವರ 'Prostitution in Madras- A Study in Historical Perspective'** (೧೯೯೩) ಮದ್ರಾಸ್ ಪರಿಸರದಲ್ಲಿ ನಡೆಯುತ್ತಿದ್ದ ವೇಶ್ಯಾವಾಟಿಕೆಯ ಸ್ವರೂಪವನ್ನು ಚಾರಿತ್ರಿಕ ಹಿನ್ನೆಯೊಂದಿಗೆ ನೋಡಲಾದ ಕೃತಿಯಾಗಿದೆ.

**ಅಗ್ನಿ ಪತ್ರಿಕೆಯಲ್ಲಿ ಕೇಶವರೆಡ್ಡಿ ಹಂದ್ರಾಳ ಅವರು 'ಬುಡ್ಡಿ ಬೆಳಕಿನ ಬೆವರು ಸಾಲು' (ಸಂಪುಟ: ೧೬, ಸಂಚಿಕೆ–೫೦, ದಿನಾಂಕ:೨೫/೯/೨೦೧೫)** ಎಂಬ ತಲೆಬರಹದ ಅಡಿ ಲೇಖನವೊಂದು ಪ್ರಕಟವಾಗಿದೆ. ಇದರಲ್ಲಿ ವೇಶ್ಯಾ ಸಮಸ್ಯೆಯ ಕುರಿತು ಲೇಖಕರು ಚರ್ಚಿಸುತ್ತಾ ವೇಶ್ಯಾವಾಟಿಕೆಯಂಬುದು ತುಂಬಾ ಪುರಾತನ ಕಾಲದಿಂದಲೂ ಸಾಮಾಜಿಕ ಸಮಸ್ಯೆಯೆಂದು ಪರಿಗಣಿಸುತ್ತಾ ಬರಲಾಗಿದೆ. ಆದರೆ ಈ ವ್ಯವಸ್ಥೆಯು ಅದನ್ನು ನಿರಂತರವಾಗಿ ಇಲ್ಲಿಯವರೆಗೂ ಪೋಷಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ವೇಶ್ಯಾವಾಟಿಕೆ ಗ್ರಾಮೀಣ ಬದುಕಿನಲ್ಲಿ ಅಪರೂಪವಾಗಿ ಕಂಡರೂ ನಗರ ಜೀವನದಲ್ಲಿ ಅತ್ಯಂತ ಸಕ್ರಿಯವಾಗಿದೆ. ನಗರಗಳು ಬೆಳೆದಂತೆ, ಜನಸಂಖ್ಯೆ ಹೆಚ್ಚಾದಂತೆ ವೇಶ್ಯಾವಾಟಿಕೆ ಅನಿವಾರ್ಯ ಕೂಡ ಆಗತೊಡಗಿತು. ಮಹಿಳೆಯರು ವೇಶ್ಯಾವಾಟಿಕೆಗೆ ಯಾವ ಯಾವ ಕಾರಣಗಳಿಗಾಗಿ ಬರುತ್ತಾರೆ ಹಾಗೂ ವೇಶ್ಯಾವಾಟಿಕೆಯನ್ನು ಕಾನೂನು ಬದ್ಧಗೊಳಿಸಿದಾಗ ಆಗುವ ಪರಿಣಾಮಗಳ ಕುರಿತು ಲೇಖನದಲ್ಲಿ ಚರ್ಚಿಸಲಾಗಿದೆ. ವೇಶ್ಯಾವೃತ್ತಿಯಲ್ಲಿರುವವರನ್ನು ಮಾನವೀಯ ದೃಷ್ಟಿಯಿಂದ ನೋಡಬೇಕಾದ ಅಗತ್ಯದ ಕುರಿತು ಲೇಖನ ತಿಳಿಸುವುದು.

**ಸಂಜಯ ಅವರು ಅಗ್ನಿ ಪತ್ರಿಕೆಯಲ್ಲಿ "ಹುಟ್ಟನಿಂದ ಯಾರೂ ವೇಶ್ಯೆಯರಲ್ಲ" (ಸಂಪುಟ: ೧೬, ಸಂಚಿಕೆ–೫೦, ದಿನಾಂಕ:೨೫/೯/೨೦೧೫ ರಂದು ಪುಟ ಸಂಖ್ಯೆ:೦೪)** ಎಂಬ ಲೇಖನವೊಂದನ್ನು ಬರೆದಿರುವರು. ಪ್ರಸ್ತುತ ಈ ಲೇಖನದಲ್ಲಿ ವೇಶ್ಯಾವೃತ್ತಿ ಎಂದರೇನು, ಯಾವ ಯಾವ ಕಾರಣಗಳಿಂದಾಗಿ ವೇಶ್ಯಾವೃತ್ತಿಗೆ ತೊಡಗುವರು ಹಾಗೂ ಪುರುಷ ಪ್ರಧಾನ ಸಮಾಜದಿಂದಾಗಿ ಈ ವೃತ್ತಿಗೆ ಆದ ಪರಿಣಾಮಗಳ

ಕುರಿತು ಚರ್ಚಿಸಲಾಗಿದೆ. ವೇಶ್ಯಾವಾಟಿಕೆಯನ್ನು ಕಾನೂನುಬದ್ಧಗೊಳಿಸಿದ ದೇಶಗಳಲ್ಲಿ ಅತ್ಯಾಚಾರ ಪ್ರಮಾಣ ಕಡಿಮೆಯಾಗಿರುವ ಕುರಿತು ವಿವರಗಳನ್ನು ನೀಡಲಾಗಿದೆ. ಹೀಗಾಗಿ ವೇಶ್ಯಾವಾಟಿಕೆಯನ್ನು ವೃತ್ತಿ ಎಂದು ಪರಿಗಣಿಸಿ ಕಾನೂನು ಬದ್ಧಗೊಳಿಸಬೇಕು ಎಂದು ಲೇಖಕರು ತಿಳಿಸುವರು.

**ಜಯಪ್ರಕಾಶ ಬಂಜಗೆರೆ ಅವರು ಅಗ್ನಿ ಪತ್ರಿಕೆಯಲ್ಲಿ "ವೇಶ್ಯಾವೃತ್ತಿ ಮತ್ತು ನಾಗರಿಕ ಸಮಾಜದ ಮನಸ್ಸಾಕ್ಷಿ" (ಸಂಪುಟ: ೧೬ ಸಂಚಿಕೆ-೫೦, ದಿನಾಂಕ:೨೫/೯/೨೦೧೫ ರಂದು ಪುಟ ಸಂಖ್ಯೆ:೦೪)** ಎಂಬ ಲೇಖನವೊಂದನ್ನು ಬರೆದಿರುವರು. ಪ್ರಸ್ತುತ ಈ ಲೇಖನದಲ್ಲಿ ಹೆಣ್ಣನ್ನು ಮಾತ್ರ ವೇಶ್ಯೆ ಎಂದು ಕರೆದ ಸಮಾಜವು ಗಂಡಿಗೆ ಮಾತ್ರ ಇದರಿಂದ ವಿನಾಯಿತಿ ನೀಡಿದೆ. ಸಮಾಜದ ಈ ನೀತಿಯು ತಾರತಮ್ಯಪೂರಿತವಾದದು. ವೇಶ್ಯಾವಾಟಿಕೆಯಲ್ಲಿ ತೊಡಗಿರುವವರಿಗೆ ಕನಿಷ್ಠ ಸೌಲಭ್ಯಗಳನ್ನು ಒದಗಿಸಬೇಕಾದದ್ದು ಮಾನವೀಯತೆ. ಅದು ನಾಗರಿಕ ಸಮಾಜದ ಕರ್ತವ್ಯವೂ ಹೌದು. ಯಾವುದೇ ಮಹಿಳೆಯೂ ತಾನು ವೇಶ್ಯೆಯಾಗಿ ಸುಖ ಪಡಬೇಕೆಂದು ಹುಟ್ಟಿನಿಂದಲೇ ಕನಸು ಕಟ್ಟಿರುವುದಿಲ್ಲ. ಅವಳ ಬದುಕಿನ ಅನಿವಾರ್ಯತೆಗಳು ಅವಳನ್ನು ವೇಶ್ಯೆಯಾಗುವಂತೆ ಮಾಡಿರುತ್ತವೆ. ವೇಶ್ಯಾವೃತ್ತಿಯಲ್ಲಿ ತೊಡಗಿದ ಹೆಣ್ಣುಮಕ್ಕಳಿಗೆ ಕಾನೂನಿನ ರಕ್ಷಣೆ ಬೇಕಾಗಿದೆ. ವೇಶ್ಯಾವೃತ್ತಿಯನ್ನು ಸಾಮಾಜಿಕ ಸಮಸ್ಯೆ ಎಂದು ಪರಿಗಣಿಸಿದ ಈ ವ್ಯವಸ್ಥೆಯು ವೇಶ್ಯಾವಾಟಿಕೆ ನಿರ್ಮೂಲವಾಗಬೇಕೆಂದರೆ ಮೊದಲಿಗೆ ವೇಶ್ಯೆಯರ ಮಕ್ಕಳು ಮತ್ತು ಬಡವರ ಮಕ್ಕಳು ಭವಿಷ್ಯದಲ್ಲಿ ವೇಶ್ಯೆಯರಾಗದಂತೆ ಎಚ್ಚರವಹಿಸಬೇಕಾಗಿದೆ. ಪ್ರಸ್ತುತ ವೇಶ್ಯಾವೃತ್ತಿಯಲ್ಲಿ ನಿರತರಾದವರಿಗೆ ಸಾಮಾಜಿಕ ಸಕ್ಷೇಮ ಯೋಜನೆಗಳು ಜಾರಿಯಾಗಬೇಕು. ವೇಶ್ಯಾವೃತ್ತಿಗೂ ವೃತ್ತಿ ಮಾನ್ಯತೆ ಒದಗಿಸಿಬೇಕು. ಅದರಲ್ಲಿ ನಡೆಯುವ ನೂರಾರು ಬಗೆಯ ಶೋಷಣೆಗಳನ್ನು ನಿಲ್ಲುವಂತೆ ಸರ್ಕಾರ ಕಾಯ್ದೆ ರೂಪಿಸಬೇಕಿದೆ ಎಂದು ಲೇಖಕರು ತಿಳಿಸಿರುವರು.

**ರಾಜಪ್ಪ ದಳವಾಯಿ ಅವರು ಅಗ್ನಿ ಪತ್ರಿಕೆಯಲ್ಲಿ "ವೇಶ್ಯಾವೃತ್ತಿ" (ಸಂಪುಟ: ೧೬ ಸಂಚಿಕೆ-೫೦, ದಿನಾಂಕ:೨೫/೯/೨೦೧೫ ರಂದು ಪುಟ ಸಂಖ್ಯೆ:೦೭)** ಎಂಬ ಲೇಖನವೊಂದನ್ನು ಬರೆದಿರುವರು. ಪ್ರಸ್ತುತ ಈ ಲೇಖನದಲ್ಲಿ ವೇಶ್ಯಾವಾಟಿಕೆಯಲ್ಲಿರುವ ಮಹಿಳೆಯು ಗಿರಾಕಿಯನ್ನು ಆಕರ್ಷಿಸಲು ಹೂಡುವ ತಂತ್ರಗಾರಿಕೆ ಯಾವ ರೀತಿಯಲ್ಲಿರುತ್ತದೆ, ಬೀದಿಬದಿಯ ವೇಶ್ಯೆಯರ ಜೀವನ ಯಾವ ರೀತಿಯಲ್ಲಿರುವುದು, ವೇಶ್ಯಾವಾಟಿಕೆಗೆ ಮಹಿಳೆಯರು ತೊಡಗಲು ಇರುವ ಕಾರಣಗಳ ಕುರಿತು ತಿಳಿಸುತ್ತಾ ವೇಶ್ಯಾವೃತ್ತಿಯನ್ನು ಈ ಸಮಾಜವು ಗೌರವಯುತವಾಗಿ ಕಾಣುತ್ತಿಲ್ಲ. ಅವರು ಸಹ ಮನುಷ್ಯರು, ಅವರನ್ನೂ ಮಾನವೀಯ ನೋಟದಿಂದ ನೋಡಬೇಕಾಗಿದೆ. ವೇಶ್ಯಾವೃತ್ತಿಯು ಕಾನೂನು ವ್ಯಾಪ್ತಿಗೆ ಒಳಪಡಬೇಕಾಗಿದೆ. ಎಂದು ಈ ಲೇಖನದಲ್ಲಿ ತಿಳಿಸಿದ್ದಾರೆ.

**ಅನುಸೂಯ ಕಾಂಬಳೆ ಅವರು ಅಗ್ನಿ ಪತ್ರಿಕೆಯಲ್ಲಿ 'ದೇಹವು ಒಂದು ಮುಕ್ತ ಮಾರುಕಟ್ಟೆಯ ಸರಕಲ್ಲ' (ಸಂಪುಟ: ೧೬ ಸಂಚಿಕೆ-೫೦, ದಿನಾಂಕ:೨೫/೯/೨೦೧೫ ರಂದು ಪುಟ ಸಂಖ್ಯೆ:೦೮)** ಎಂಬ ಲೇಖನವೊಂದನ್ನು ಬರೆದಿರುವರು. ಪ್ರಸ್ತುತ ಈ ಲೇಖನದಲ್ಲಿ ದೇವದಾಸಿ ಮಗಳು ಕಾಲೇಜಿನಲ್ಲಿ ಓದುವಾಗ ಎದುರಿಸಿದ ಸಮಸ್ಯೆಗಳು, ಕಾನೂನು ಮಾನ್ಯತೆ ನೀಡುವುದರ ಮೂಲಕ ವೇಶ್ಯಾವೃತ್ತಿಯನ್ನು

ಖಾಯಂ ಆಗಿಸುವ ಬೇಜವಾಬ್ದಾರಿಯನ್ನು ತೋರುವುದು ಉಚಿತವಲ್ಲ. ವೇಶ್ಯಾವೃತ್ತಿಗೆ ಇಳಿಯುವವರು ಹೆಚ್ಚಾಗಿ ಅಸಹಾಯಕ ಹೆಣ್ಣುಮಕ್ಕಳೇ ಆಗಿರುತ್ತಾರೆ. ಪೊಲೀಸರಿಂದ ತಪ್ಪಿಸಿಕೊಂಡರೂ ಮಧ್ಯವರ್ತಿಗಳಿಂದ ತಪ್ಪಿಸಿಕೊಳ್ಳುತ್ತಾರೆಂಬ ಯಾವ ನಂಬಿಕೆಯೂ ಇಲ್ಲ. ಪ್ರವಾಸಿ ಲೈಂಗಿಕ ಉದ್ಯಮವನ್ನು ಮಾನ್ಯ ಮಾಡಿದ ಥೈಲ್ಯಾಂಡ್ ಹಾಗೂ ಗೋವ ತನ್ನ ಜವಾಬ್ದಾರಿಯಿಂದ ತಪ್ಪಿಸಿಕೊಂಡಂತಾಗಿದೆ. ನಮ್ಮ ದೇಶದ ಪರಿಸ್ಥಿತಿ ಲೈಂಗಿಕ ವೃತ್ತಿಗೆ ಮಾನ್ಯತೆ ನೀಡಿದ ದೇಶಗಳಿಗಿಂತ ತೀರಾ ಭಿನ್ನವಾಗಿದೆ ಅದು ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿದೆ ಎಂಬ ಸಮರ್ಥನೆಯೇ ಅದರ ಅನನ್ಯತೆಯಲ್ಲ ಅದರ ಮೂಲಗಳನ್ನು ಗುರುತಿಸಿ ಆ ಅನಿಷ್ಠ ಪಿಡುಗನ್ನು ನಾಶಪಡಿಸಬೇಕಿದೆ ಎಂಬುದನ್ನು ಈ ಲೇಖನ ವಿಷದಪಡಿಸುತ್ತದೆ.

**ಜಿ.ಎನ್.ನಾಗರಾಜ ಅವರು ಅಗ್ನಿ ಪತ್ರಿಕೆಯಲ್ಲಿ 'ವೇಶ್ಯಾವೃತ್ತಿಯ ಉಗಮ ಮತ್ತು ನಿರ್ಮೂಲನೆಯ ನಡುವೆ' (ಸಂಪುಟ: ೧೬ ಸಂಚಿಕೆ–೩೦, ದಿನಾಂಕ:೨೫/೯/೨೦೧೫ ರಂದು ಪುಟ ಸಂಖ್ಯೆ:೦೯)** ಎಂಬ ಲೇಖನವೊಂದನ್ನು ಬರೆದಿರುವರು. ಪ್ರಸ್ತುತ ಲೇಖನದಲ್ಲಿ ಬುಡಕಟ್ಟು ಜನರಲ್ಲಿ ವೇಶ್ಯಾವಾಟಿಕೆ ಪರಿಕಲ್ಪನೆ ಇಲ್ಲ ನಗರೀಕರಣ ಮತ್ತು ಜಾಗತೀಕರಣದೊಂದಿಗೆ ವೇಶ್ಯಾವೃತ್ತಿ ಹಲವು ಪಟ್ಟು ಹೆಚ್ಚಾಗುತ್ತಿದ್ದು ಬಹಳ ವೇಗವಾಗಿ ಬೆಳೆಯುತ್ತಿದೆ. ವೇಶ್ಯಾವೃತ್ತಿ ಮಹಿಳಾ ಅಧೀನತೆಯ ಮತ್ತು ಅಸಮಾನತೆಯ ದ್ಯೋತಕ. ಅತ್ಯಂತ ಅಮಾನವೀಯ ಪದ್ಧತಿ. ಇದನ್ನು ನಾಶ ಮಾಡುವುದೇ ಮಾನವೀಯ ಅಂತಃಕರಣವುಳ್ಳವರೆಲ್ಲರ ಗುರಿಯಾಗಬೇಕು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ, ಆದರೆ ಅದು ಸಾದ್ಯವಾಗಬೇಕಾದರೆ ಬಡತನ, ಶ್ರೀಮಂತಿಕೆಗಳ ಕಂದರ ನಾಶವಾಗಬೇಕು. ಮಹಿಳೆಯರಿಗೆ ಉದ್ಯೋಗ ಮತ್ತು ಜೀವನ ಮಾಡಲು ಸಾಧ್ಯವಾಗುವಷ್ಟು ವೇತನ ದೊರೆಯಬೇಕು. ವೇಶ್ಯಾವೃತ್ತಿಯನ್ನು ಕಾನೂನು ಬದ್ಧಗೊಳಿಸುವುದು ಎಂಬುದಕ್ಕೂ ಹಲವು ಆಯಾಮಗಳಿವೆ. ಜಗತ್ತಿನ ಹಲವು ದೇಶಗಳಲ್ಲಿ ವೇಶ್ಯಾವೃತ್ತಿ ಕಾನೂನು ಬದ್ಧವಾಗಿದೆ. ಆದರೆ ವೇಶ್ಯಾಗೃಹಗಳು ಮತ್ತು ಗಿರಾಕಿಗಳನ್ನು ಒದಗಿಸುವುದು ಕಾನೂನು ಬದ್ಧವಾಗಿಲ್ಲ. ಅದು ಪ್ರತಿ ವೇಶ್ಯೆಗೂ ವೃತ್ತಿಯನ್ನನುಸರಿಸುವ ಅವಕಾಶ ಕೊಡುತ್ತದೆ ಎಂಬುದನ್ನು ಲೇಖನದಲ್ಲಿ ವಿಸ್ತೃತವಾಗಿ ಚರ್ಚಿಸಿದ್ದಾರೆ.

# ಅಧ್ಯಾಯ: ಎರಡು

# ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ ಹಾಗೂ ಭೌಗೋಳಿಕತೆ

೨.೧ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಭೌಗೋಳಿಕ ಪರಿಸರ

೨.೨ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಜನಸಂಖ್ಯೆ

೨.೩ ದೇವದಾಸಿಯರ ಜನಸಂಖ್ಯೆ

# ಅಧ್ಯಾಯ : ಎರಡು

## ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ ಹಾಗೂ ಭೌಗೋಳಿಕತೆ

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಪೂರ್ವದಲ್ಲಿ ಕಲ್ಯಾಣ ಚಾಲುಕ್ಯರು, ತಲಕಾಡಿನ ಗಂಗರು, ಕಂಪಿಲರಾಯ ಕುಮಾರರಾಮನ ಸಿಂಘೇಯ ರಾಜಮನೆತನಗಳ ಆಡಳಿತಕ್ಕೆ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳು ಒಳಗಾಗಿದ್ದವು. ಅಶೋಕನ ಶಿಲಾಶಾಸನಗಳು ಬಳ್ಳಾರಿಯ ಸಿರಗುಪ್ಪ ತಾಲೂಕಿನ ನಿಟ್ಟೂರು ಗ್ರಾಮದ ಹೊರವಲಯದಲ್ಲಿ ಹಾಗೂ ಕೊಪ್ಪಳದ ಹೊರವಲಯದಲ್ಲಿರುವ ಕಣಶಿಲೆಯ ಗುಡ್ಡದ ಪಾಲ್ಕಿ ಗುಂಡು ಬಳಿ ಇವೆ. ಅದಕ್ಕೂ ಪೂರ್ವದಲ್ಲಿ ಮಾನವನು ನೆಲೆ ನಿಂತಿರುವ ಕುರಿತು ಮಾಹಿತಿ ನೀಡುವ ಪ್ರಾಗೈತಿಹಾಸಿಕ ಕಾಲದ ಮಾನವನ ನೆಲೆಗಳು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ತೆಕ್ಕಲಕೋಟೆ, ದರೋಜಿ ಕರಡಿಧಾಮ ವಲಯ, ಹಂಪಿ, ತಿಮ್ಮಾಲಾಪುರ, ರಾಮಸಾಗರ, ವೆಂಕಟಾಪುರ, ಬುಕ್ಕಸಾಗರ, ಗುಡೆಕೋಟೆ ಸುತ್ತಮುತ್ತಿನ ಬೆಟ್ಟಗಳಲ್ಲಿ ಹಳೆಶಿಲಾಯುಗ ಮತ್ತು ನೂತನ ಶಿಲಾಯುಗದ ಕುರುಹುಗಳು, ಕೆಮ್ಮಣ್ಣು ಮತ್ತು ಸುಣ್ಣದ ರೇಖಾಚಿತ್ರಗಳು ಹಾಗೂ ಬಂಡೆಗಳಲ್ಲಿ ಕೊರೆದ ಚಿತ್ರಗಳು ಕಂಡುಬರುತ್ತವೆ. ಹಾಗೆಯೇ ಕೊಪ್ಪಳದ ಹಿರೇಬೆಣಕಲ್ಲು, ಚಿಕ್ಕಬೆಣಕಲ್ಲು, ರಾಂಪುರ, ಆನೆಗೊಂದಿ, ಕೊಪ್ಪಳ ಮುಂತಾದ ಕಡೆ ದೊರೆತಿವೆ.

ಕಲ್ಯಾಣಿ ಚಾಲುಕ್ಯರು ಕ್ರಿ.ಶ ೯೭೩ರಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿ ಬಳ್ಳಾರಿ ಹಾಗೂ ಕೊಪ್ಪಳ ಪ್ರಾಂತ್ಯವನ್ನು ತಮ್ಮ ವಶಕ್ಕೆ ತೆಗೆದುಕೊಂಡ ವಿಚಾರವನ್ನು ತಿಳಿಸುವ ಶಿಲಾ ಶಾಸನಗಳು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುತ್ತದೆ. ಈ ಶಾಸನಗಳನ್ನು ಆಧರಿಸಿ ಹೇಳಬಹುದಾದರೆ ಕ್ರಿ.ಶ. ೧೦೧೪ ರ ಗೋಣಿಹಾಳಿನ (ಗೋನಾಳ್) ಶಾಸನವು ಶ್ರೀಮಂತನಾದ ಇರಿವ ನೊಳಂಬವಾಡಿ ರಾಜನು ಕಂಪಲಿಯನ್ನು ಕೇಂದ್ರವಾಗಿರಿಸಿಕೊಂಡು ಕೊಪ್ಪಳ ಹಾಗೂ ಬಳ್ಳಾರಿ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದನು. ಮುಂದೆ ಕಲ್ಯಾಣಿ ಚಾಲುಕ್ಯರ ದೊರೆ ಜಗದೇಕಮಲ್ಲ ಜಯಸಿಂಹದೇವನ ಸಾಮಂತನಾದ ನೊಳಂಬ ಪಲ್ಲವ ಪೆರ್ಮಾಡಿ ಎಂಬುವವನು ಈ ಪ್ರದೇಶಗಳನ್ನು ಆಳಿದ ಕುರಿತು ಕ್ರಿ.ಶ ೧೦೧೮ರ ಶಾಸನದ ಮೂಲಕ ತಿಳಿಯುತ್ತದೆ.

ಕ್ರಿ.ಶ ೧೦೪೫ರ ಸುಮಾರಿಗೆ ಚಾಲುಕ್ಯರ ಒಂದನೇ ಸೋಮೇಶ್ವರನು ಹಡಗಲಿಯನ್ನು ತನ್ನ ನೆಲೆಯಾಗಿಸಿಕೊಂಡಿದ್ದನು. ಅವನು ಚೋಳರ ರಾಜಧಾನಿಯಾದ ನೊಳಂಬವಾಡಿ ಮೇಲೆ ದಾಳಿ ನಡೆಸಿದನು ಹಾಗೂ ಕಂಪಲಿ ಹಾಗೂ ಮುಂಡರಗಿಯನ್ನು ತನ್ನ ವಶಕ್ಕೆ ತೆಗೆದುಕೊಂಡನೆಂದು ತಿಳಿದುಬರುತ್ತದೆ.

"ಕ್ರಿ. ಶ. ೧೦೫೪ರ ಸುಮಾರಿಗೆ ಕಲ್ಯಾಣ ಚಾಲುಕ್ಯರ ಅರಸ ಒಂದನೇ ಸೋಮೇಶ್ವರ ಬಳ್ಳಾರಿ ಹಾಗೂ ಕೊಪ್ಪಳ ಪ್ರದೇಶವನ್ನು ಆಳಿದನೆಂದು ತಿಳಿದುಬರುತ್ತದೆ (ಎಪಿಗ್ರಾಫಿಕಾ ಕರ್ನಾಟಕ ೧೨) ಇವರ ತರವಾಯ ಕೆಲವು ಕಾಲ ಕುಮ್ಮಟದುರ್ಗವನ್ನು ರಾಜಧಾನಿಯಾಗಿಸಿಕೊಂಡು ಹೊಯ್ಸಳ ಅರಸರು ರಾಜ್ಯಭಾರ ಮಾಡಿದುದಾಗಿ ತಿಳಿದು ಬರುತ್ತದೆ"[೧]

ಕ್ರಿ.ಶ ೧೨೮೦ ರಿಂದ ೧೩೦೦ ರವರೆಗೆ ಕುಮ್ಮಟವನ್ನು ರಾಜಧಾನಿಯಾಗಿಸಿಕೊಂಡು ಮುಮ್ಮಡಿ ಸಿಂಘೇಯನು ಆನೆಗೊಂದಿ, ಕಂಪಲಿ ಮತ್ತು ಅದರ ಸುತ್ತ ಮುತ್ತಲಿನ ಪ್ರದೇಶಗಳನ್ನು ಆಳಿದನು. ಮುಮ್ಮಡಿ ಸಿಂಘೇಯನ ಮಗ ಕಂಪಿಲ ಹಾಗೂ ಅವನ ಮಗ ಕುಮಾರರಾಮರು ಈ ಪ್ರದೇಶಗಳನ್ನು ಆಳಿದ ಕುರಿತು ಶಾಸನಾಧಾರಗಳು ದೊರೆಯುತ್ತವೆ. ಕಂಪಿಲ ಮತ್ತು ಕುಮಾರರಾಮರು ನಾಯಕ ಸಮುದಾಯದವರಾಗಿದ್ದು, ಉತ್ತರ ಪ್ರದೇಶದಿಂದ ದಕ್ಷಿಣ ರಾಜ್ಯಗಳ ಮೇಲೆ ನಿರಂತರವಾಗಿ ದಂಡೆತ್ತಿ ಬರುತ್ತಿದ್ದ ಇಸ್ಲಾಂ ಅರಸರನ್ನು ಎದುರಿಸಿ ಹಿಮ್ಮೆಟ್ಟಿಸಿದ ಕೀರ್ತಿ ಕಂಪಿಲ ಹಾಗೂ ಕುಮಾರರಾಮರಿಗೆ ಸಲ್ಲುತ್ತದೆ. ಆದರೆ ಕೊನೆಗೆ ದೆಹಲಿ ಸುಲ್ತಾನರಿಂದಾಗಿ ಪರಾಭವಗೊಂಡು ಅವರ ಸೈನ್ಯದ ಕೈಯಲ್ಲಿ ಈ ತಂದೆ ಮಕ್ಕಳು ಅವಸಾನಗೊಳ್ಳುತ್ತಾರೆ.

ಈ ಪ್ರದೇಶದಲ್ಲಿ ಕಂಪಿಲನ ಆಡಳಿತದ ತರುವಾಯ ವಿಜಯನಗರದ ಸ್ಥಾಪನೆಯಾಗುತ್ತದೆ ಕಂಪಿಲನ ಹತ್ತಿರದ ಸಂಬಂಧಿಗಳಾದ ಹರಿಹರ ಮತ್ತು ಬುಕ್ಕ ಸಹೋದರರು ವಿದ್ಯಾರಣ್ಯರ ಮಾರ್ಗದರ್ಶನದಲ್ಲಿ ವಿಜಯನಗರವನ್ನು ಸ್ಥಾಪಿಸುತ್ತಾರೆ. ವಿಜಯನಗರ ಸ್ಥಾಪನೆಯ ತರುವಾಯ ದಕ್ಷಿಣ ಪ್ರಾಂತ್ಯದ ಎಲ್ಲಾ ಪ್ರದೇಶಗಳಿಗೆ ಒಂದು ರೀತಿಯ ರಕ್ಷಣೆ ದೊರೆಯುತ್ತದೆ. ವಿಜಯನಗರದ ಅರಸರು ತಮ್ಮ ಸುತ್ತಮುತ್ತಲಿದ್ದ ಚಿಕ್ಕಪುಟ್ಟ ಸಂಸ್ಥಾನಗಳು ಮತ್ತು ಪಾಳಯಪಟ್ಟುಗಳನ್ನು ತಮ್ಮ ರಾಜ್ಯದಲ್ಲಿ ವಿಲೀನಗೊಳಿಸಿಕೊಂಡು ಅವುಗಳಿಗೆ ರಕ್ಷಣೆ ಕೊಡುವುದರೊಂದಿಗೆ ತಮ್ಮ ಸಾಮ್ರಾಜ್ಯ ವ್ಯಾಪಕವಾಗಿ ವಿಸ್ತರಿಸುತ್ತಾ ಸಾಗುತ್ತಾರೆ. ತುಳು, ಸಾಳುವ, ಅರವೀಡು, ಸಂಗಮ ವಂಶಗಳು ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯನ್ನು ಮಾಡುತ್ತವೆ. ವಿಜಯನಗರದ ಕೊನೆಯ ಪ್ರಬಲ ಅರಸನಾದ ಅಳಿಯರಾಮರಾಯನು ರಕ್ಕಸ ತಂಗಡಗಿ ಯುದ್ಧದಲ್ಲಿ ಬಿಜಾಪುರ ಸುಲ್ತಾನರಿಂದ ಸೋತ ತರುವಾಯ ವಿಜಯನಗರ ಸಾಮ್ರಾಜ್ಯವು ಅವನತಿಯ ಹಾದಿ ಹಿಡಿಯುತ್ತದೆ. ಅಳಿಯ ರಾಮರಾಯನ ಅವನತಿಯ ತರುವಾಯ ಪಟ್ಟಕ್ಕೆ ಬಂದ ವಿಜಯನಗರ ಅರಸ ವೆಂಕಟಪತಿದೇವನು ಬಳ್ಳಾರಿ ಪ್ರಾಂತ್ಯವನ್ನು ತ್ಯಜಿಸಿ ಪೆನುಗೊಂಡೆ (೧೫೮೬-೧೬೧೪)ಗೆ ಸೇರಿದ ತರುವಾಯ ಬಳ್ಳಾರಿ ಪ್ರಾಂತ್ಯವನ್ನು ಹರಪನಹಳ್ಳಿಯ ಪಾಳೆಗಾರರು ತಮ್ಮ ವಶಕ್ಕೆ ತೆಗೆದುಕೊಂಡರು. ವಿಜಯನಗರ ಪತನದ ನಂತರ

ಜರಿಮಲೆ, ಉಚ್ಚಂಗಿದುರ್ಗ, ಹರಪನಹಳ್ಳಿ, ತಿಮ್ಮಲಾಪುರ, ಆನೆಗೊಂದಿ, ಕನಕಗಿರಿ ಮುಂತಾದ ಪಾಳಯಪಟ್ಟುಗಳು ಸ್ವತಂತ್ರವಾದವು ಮತ್ತು ಈ ಪಾಳಯಪಟ್ಟುಗಳ ಅಧಿಕಾರವನ್ನು ಬಹುತೇಕ ನಾಯಕ ಸಮುದಾಯದವರೇ ವಹಿಸಿಕೊಂಡರು. ನಾಯಕ ಸಮುದಾಯದ ಹರಪನಹಳ್ಳಿ ಪಾಳೆಯಗಾರರಿಂದ ಕ್ರಿ.ಶ ೧೬೭೭–೭೮ರ ಸುಮಾರಿಗೆ ಮರಾಠರ ಅರಸು ಶಿವಾಜಿಯು ಬಳ್ಳಾರಿ ಪ್ರಾಂತ್ಯವನ್ನು ವಶಪಡಿಸಿಕೊಂಡನು. ತರುವಾಯ ಔರಂಗಜೇಬನು (೧೬೮೦) ಬಳ್ಳಾರಿ ಪ್ರಾಂತ್ಯವನ್ನು ಮರಾಠರ ಹಿಡಿತದಿಂದ ತಪ್ಪಿಸಿ ತನ್ನ ಹಿಡಿತದಲ್ಲಿರಿಸಿಕೊಂಡನು .

೧೭೦೭ರಲ್ಲಿ ಹೈದರಾಬಾದಿನ ನಿಜಾಮನು ಬಳ್ಳಾರಿ ಪ್ರಾಂತ್ಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಪ್ರಯತ್ನಪಟ್ಟನಾದರೂ ಅದು ಸಾಧ್ಯವಾಗದೆ ಅವನಿಗೆ ತುಂಗಾಭದ್ರಾ ನದಿಯಾಚೆಗಿನ ಕೊಪ್ಪಳ ಪ್ರದೇಶದ ಮೇಲೆ ಮಾತ್ರ ಹಕ್ಕು ಸ್ಥಾಪನೆ ಮಾಡಲು  ಸಾಧ್ಯವಾಯಿತು.

“೧೭೬೧ರ ಸುಮಾರಿಗೆ ಹೈದರಾಲಿಯು ಹರಪನಹಳ್ಳಿ ಹಾಗೂ ರಾಯದುರ್ಗ ಸಂಸ್ಥಾನಗಳಿಗೆ ದಂಡೆತ್ತಿ ಬಂದು ಅಲ್ಲಿಯ ಸ್ಥಳೀಯ ಪಾಳೆಯಗಾರರಿಂದ ಕಪ್ಪ– ಕಾಣಿಕೆ ಪಡೆದುಕೊಳ್ಳುತ್ತಾನೆ”[೨]

೧೭೬೨ರ ಸುಮಾರಿಗೆ ಈ ಪ್ರದೇಶ ಸಂಪೂರ್ಣವಾಗಿ ಹೈದರನ ವಶವಾಗಿ ಅವನ ಆಳ್ವಿಕೆ ಪ್ರಾರಂಭಗೊಂಡಿತು. ಬಳ್ಳಾರಿ ನಗರದಲ್ಲಿರುವ ಕೋಟೆಯನ್ನು ಹೈದರನೇ ನಿರ್ಮಿಸಿದ ಕುರಿತು ದಾಖಲೆಗಳು ದೊರೆಯುತ್ತವೆ. ಹೈದರನ ತರುವಾಯ ಅವನ ಮಗ ಟಿಪ್ಪುಸುಲ್ತಾನನು ತನ್ನ ಕೊನೆಗಾಲದವರೆಗೂ ಬಳ್ಳಾರಿ ಪ್ರಾಂತ್ಯದ ಮೇಲೆ ಹಿಡಿತವನ್ನು ಹೊಂದಿದ್ದನು.

೧೭೯೯ರಲ್ಲಿ ನಡೆದ ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪು ಸೋಲುತ್ತಾನೆ. ಅವನ ತರುವಾಯ ಮೈಸೂರು ಪ್ರದೇಶ ಹಾಗೂ ಬಳ್ಳಾರಿ, ಉತ್ತರಕನ್ನಡ, ದಕ್ಷಿಣಕನ್ನಡ ಜಿಲ್ಲೆಗಳು ಇಂಗ್ಲೀಷ್‌ರಿಗೆ ವಶವಾಗುತ್ತವೆ.

ಆಗಿನ ಗವರ್ನರ್ ಆಗಿದ್ದ “ಲಾರ್ಡ್ ಆರ್ಥರ್ ವೆಲ್ಲೆಸ್ಲಿಯ ಸಹಾಯಕ ಸೈನ್ಯ ಪದ್ದತಿಗೆ ಸಮ್ಮತಿಸಿ ಕ್ರಿ.ಶ. ೧೮೦೦ರಲ್ಲಿ ಹೈದರಾಬಾದಿನ ನಿಜಾಮನು ಬ್ರಿಟೀಷರ ಮಾಂಡಲೀಕನಾಗುತ್ತಾನೆ. ಹೀಗಾಗಿ ನಿಜಾಮರ ವಶದಲ್ಲಿದ್ದ ಕನ್ನಡ ಜಿಲ್ಲೆಗಳು ಬ್ರಿಟೀಷರ ಆಧೀನಕ್ಕೆ ಸುಲಭವಾಗಿ ಒಳಪಡುವಂತಾಯಿತು.”[೩] ಕೊಪ್ಪಳ ಪ್ರದೇಶವನ್ನು ಬಹುಮನಿ ಸುಲ್ತಾನರು ಕೆಲವು ಕಾಲ ಆಳಿದ ಬಗ್ಗೆ ತಿಳಿದುಬರುವುದು.

“ಕ್ರಿ.ಶ. ೧೮೦೦ ಡಿಸೆಂಬರನಲ್ಲಿ ನಿಜಾಮನು ತನ್ನ ಆಡಳಿತಕ್ಕೆ ಒಳಪಟ್ಟಿದ್ದ ಬಳ್ಳಾರಿ ಪ್ರದೇಶವನ್ನು ಬ್ರಿಟೀಷರಿಗೆ ದತ್ತಿಯಾಗಿ ಬಿಟ್ಟುಕೊಟ್ಟನು. ಆಗಿನಿಂದ ಈ ಪ್ರದೇಶವನ್ನು ದತ್ತಿಮಂಡಲ (ಬಳ್ಳಾರಿ, ಕಡಪ, ಕರ್ನೂಲು) ವೆಂದು ಕರೆಯಲಾಯಿತು. ಕ್ರಿ.ಶ ೧೮೦೦ರಲ್ಲಿ ನಿಜಾಮನಿಂದ ದೊರೆತ ಬಳ್ಳಾರಿ ಪ್ರಾಂತ್ಯವು ನೇರವಾಗಿ ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿತು”[೪] ನಂತರ ಈ ಪ್ರದೇಶ ಮುಂಬೈ ಪ್ರಾಂತಾಡಳಿತಕ್ಕೆ ಒಳಪಟ್ಟು ಮುಂಬೈ ಕರ್ನಾಟಕವೆಂಬ ಹೆಸರಿಗೆ ಒಳಗಾಯಿತು. ಕ್ರಿ.ಶ ೧೮೧೮ರ ಸುಮಾರಿಗೆ ಈ ಪ್ರದೇಶವು ಕೆಲವು ಕಾಲ ಮರಾಠ ಪೇಶ್ವೆಗಳ ವಶದಲ್ಲಿಯೂ ಇದ್ದುದಾಗಿ ತಿಳಿದುಬರುತ್ತದೆ.

ಬಳ್ಳಾರಿ, ಉತ್ತರಕನ್ನಡ, ದಕ್ಷಿಣಕನ್ನಡ, ಕೊಳ್ಳೆಗಾಲ ಮುಂತಾದ ಕೆಲವು ಕನ್ನಡ ಪ್ರದೇಶಗಳು ಬ್ರಿಟೀಷರ ನೇರ ಆಡಳಿತಕ್ಕೆ ಒಳಪಟ್ಟು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಲ್ಪಟ್ಟವು.

"ಬೆಳಗಾವಿ, ಬಿಜಾಪುರ, ಕೊಡಗು, ಉತ್ತರ ಕನ್ನಡದ ಕೆಲವು ಭಾಗಗಳು ಹಾಗೂ ಧಾರವಾಡ ಜಿಲ್ಲೆ ಮುಂಬೈ ಪ್ರಾಂತ್ಯಕ್ಕೆ ಸೇರಿಸಲ್ಪಟ್ಟವು"[೫] ಬಳ್ಳಾರಿಯ ಸಂಗನಕಲ್ಲಿನಲ್ಲಿ ಪ್ರಾಗೈತಿಹಾಸಿಕ ಕಾಲದ ಶಿಲಾ ಆಯುಧಗಳ ಕಾರ್ಯಗಾರವಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ ಬಳ್ಳಾರಿಗೆ 'ಬಳ್ಳಾರಿ' ಎಂದು ಹೆಸರು ಬರಲು ಆ ಊರಿನ ಆದಿದೈವ ಬಳ್ಳಾರಿ ದುರ್ಗಮ್ಮನೇ ಕಾರಣವೆಂಬ ವಾದವೂ ಇದೆ. ಕ್ರಿ.ಶ ೧೨ ನೇ ಶತಮಾನದಲ್ಲಿ ರಚಿತಗೊಂಡ ಯಶೋಧರ ಚರಿತೆಯಲ್ಲಿ ಬಳರಿ ಎಂಬ ಪದ ಪ್ರಯೋಗಗೊಂಡಿದೆ ಬಳರಿ ಎಂದರೆ ಸ್ತ್ರೀದೈವ ಎಂಬ ಅರ್ಥಗಳಿವೆ. ಬಳ್ಳಾರಿಯ ಆದಿ ದೈವ ಬಳರಿ (ದುರ್ಗಮ್ಮ)ಯಿಂದಾಗಿಯೇ ಆ ಊರಿಗೆ ಬಳ್ಳಾರಿ ಎಂಬ ಹೆಸರು ಬಂದಿದೆ ಎಂಬ ವಾದವೂ ಇದೆ. ಈ ನಗರ "ಕ್ರಿ.ಶ ೧೨ನೇ ಶತಮಾನಕ್ಕಾಗಲೇ ಅಸ್ತಿತ್ವದಲ್ಲಿತ್ತೆಂಬ ವಾದವಿದೆ. ಬೇಲೂರಿನಲ್ಲಿ ಸಿಕ್ಕ ಶಾಸನ ಕ್ರಿ.ಶ.೧೧೩೧ರದಾಗಿದ್ದು ಈ ಶಾಸನದಲ್ಲಿ ಬಳ್ಳಾರಿ ಪ್ರದೇಶ ಉಲ್ಲೇಖಗೊಂಡಿರುವುದನ್ನು ಕಾಣಬಹುದಾಗಿದೆ. ನಂತರ ಸಿಂಧೀಗೇರಿ, ಕೋಳೂರು, ಕುರುಗೋಡುಗಳಲ್ಲಿ ದೊರೆತ ಶಾಸನಗಳಲ್ಲಿ ಬಳ್ಳಾರಿ ಎಂಬ ಪದ ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ. ಹೊಯ್ಸಳರ ಮೂರು ಶಾಸನಗಳು (ಕ್ರಿ.ಶ.೧೧೬೧ ಬೇಲೂರು ಶಾಸನ ೧೯೩) ಕ್ರಿ.ಶ ೧೧೭೮ ರ ನಾಗಮಂಗಲ ಶಾಸನ, ಕ್ರಿ.ಶ.೧೧೮೩ರ ಬೇಲೂರು ಶಾಸನ ೧೩೭) ಶಾಸನಗಳಲ್ಲಿ ಬಳ್ಳಾರಿ ಪದ ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ."[೬] ಕೊಪ್ಪಳ ಪ್ರಾಚೀನ ಜೈನ ಶ್ರದ್ಧಾ ಕೇಂದ್ರವಾಗಿದ್ದು ಅದನ್ನು ಕೂಪಣನಗರವೆಂದು ಕರೆಯಲಾಗುತ್ತಿತ್ತು.

ಬ್ರಿಟೀಷ್ ಭಾರತದ ಕಾಲದಲ್ಲಿ ಆಗಿನ ಹಳೇ ಮದ್ರಾಸ್ ಪ್ರಾಂತಕ್ಕೆ ಬಳ್ಳಾರಿ ಸೇರ್ಪಡೆಗೊಂಡಿತ್ತು. ಕ್ರಿ.ಶ ೧೮೦೦ರಲ್ಲಿ ನಿಜಾಮರಿಂದ ಬ್ರಿಟೀಷರಿಗೆ ಕಡಪ ಕರ್ನೂಲು ಅನಂತಪುರ ಜಿಲ್ಲೆ ಬಳ್ಳಾರಿಯನ್ನೊಳಗೊಂಡು ಮದ್ರಾಸ್ ಪ್ರೆಸಿಡೆನ್ಸಿಯ ದತ್ತಿ ಮಂಡಲವೆಂದು ಘೋಷಣೆಗೊಂಡಿದ್ದವು. ಆದರೆ ಕೊಪ್ಪಳವು ಮೊದಲಿಗೆ ಬಾಂಬೆ ಪ್ರಸಿಡೆನ್ಸಿಗೆ ಸೇರಿ ತರುವಾಯ ಹೈದರಾಬಾದ ನಿಜಾಮರ ಹಿಡಿತಕ್ಕೆ ಒಳಗಾಯಿತು.

ಕ್ರಿ.ಶ ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಪ್ರಥಮ ಕಲೆಕ್ಟರಾಗಿ ಥಾಮಸ್ ಮನ್ರೊ ನೇಮಕಗೊಂಡಿದ್ದರು. ಭಾಷಾವಾರು ಪ್ರಾಂತಗಳಾಗಿ ವಿಂಗಡಣೆಗೊಳ್ಳುವವರೆಗೂ ಬಳ್ಳಾರಿಯು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿಯೇ ಇದ್ದಿತು. ಸ್ವಾತಂತ್ರ್ಯ ನಂತರ ಅಕ್ಟೋಬರ್ ೧, ೧೯೫೩ರಲ್ಲಿ ಭಾಷಾವಾರು ಪ್ರಾಂತ್ಯಗಳು ವಿಂಗಡಣೆಯಾದ ತರುವಾಯ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರಿಸಲ್ಪಟ್ಟಿತು. ಬ್ರಿಟೀಷರು ಬಳ್ಳಾರಿಯನ್ನು ಸುಮಾರು ಒಂದುನೂರ ನಲವತ್ತೇಳು ವರ್ಷಗಳಷ್ಟು ದೀರ್ಘವಾಗಿ ಆಳಿದರು. ಆದರೆ ಕೊಪ್ಪಳವು ೧೯೪೮ರವರೆಗೂ ಹೈದರಾಬಾದ್ ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತು. ಭಾರತವು ೧೯೪೭ರಲ್ಲಿ ಸ್ವಾತಂತ್ರ್ಯಗೊಂಡ ನಂತರ ಒಕ್ಕೂಟಕ್ಕೆ ಸೇರಲು ಹೈದರಾಬಾದ್ ನಿಜಾಮರು ಒಪ್ಪಿರಲಿಲ್ಲ. ಕೊನೆಗೆ ಭಾರತ ಸರ್ಕಾರದ

ಒತ್ತಾಯದ ಮೇರೆಗೆ ಇಷ್ಟವಿರದಿದ್ದರೂ ಅನಿವಾರ್ಯವಾಗಿ ೧೯೪೮ರೊಳಗೆ ಭಾರತದೊಳಗೆ ವಿಲೀನಗೊಳ್ಳುವ ಮೂಲಕ ಕೊಪ್ಪಳವು ಒಕ್ಕೂಟದೊಳಗೆ ಸೇರ್ಪಡೆಗೊಳ್ಳುವಂತಾಯಿತು.

ನೃಪತುಂಗನ ಆಸ್ಥಾನ ಕವಿ ಶ್ರೀವಿಜಯನ ಪ್ರಕಾರ ತಿರುಳ್ಗನ್ನಡವನ್ನು ಒಳಗೊಂಡ ಕನ್ನಡ ನಾಡಿನ ಕೇಂದ್ರಗಳಲ್ಲಿ ಕೊಪ್ಪಳವೂ ಒಂದು. ಕೂಪಣನಗರವೆಂದು ಕರೆಯಲ್ಪಟ್ಟಿದ್ದ ಕೊಪ್ಪಳವು ಜೈನರ ಶ್ರದ್ಧಾಕೇಂದ್ರವೂ ಆಗಿತ್ತು. ಬಳ್ಳಾರಿಗೆ ಹೊಂದಿಕೊಂಡೇ ಇರುವ ಕೊಪ್ಪಳ ಜಿಲ್ಲೆಯನ್ನು ಬಳ್ಳಾರಿಯಿಂದ ವಿಭಾಗಿಸಿರುವುದು ಈ ಪ್ರದೇಶದ ಜೀವನಾಡಿಯಾದ ತುಂಗಾಭದ್ರೆ. ೧೯೯೭ರ ಪೂರ್ವದಲ್ಲಿ ರಾಯಚೂರು ಜಿಲ್ಲೆಯಲ್ಲಿದ್ದಿತು. ೧೯೯೭ರಲ್ಲಿ ಜಿಲ್ಲೆಗಳ ಮರುವಿಂಗಡಣೆಯಾದಾಗ ಕೊಪ್ಪಳ ಸ್ವತಂತ್ರ ಜಿಲ್ಲೆಯಾಗಿ ಮಾರ್ಪಾಡುಗೊಂಡಿತು. ಕರ್ನಾಟಕದ ಈಶಾನ್ಯ ಭಾಗದಲ್ಲಿ ಈ ಜಿಲ್ಲೆ ಇದೆ. ಜಿಲ್ಲೆಯಲ್ಲಿ ಕೊಪ್ಪಳ, ಗಂಗಾವತಿ, ಕುಷ್ಟಗಿ, ಯಲಬುರ್ಗ ನಾಲ್ಕು ತಾಲೂಕುಗಳನ್ನೊಳಗೊಂಡಿದೆ. ಜಿಲ್ಲೆಯ ವಿಸ್ತೀರ್ಣವು ಒಟ್ಟು ೫,೫೭೦ ಚದರ ಕಿಲೋಮೀಟರ್ ಇದೆ. ರಾಯಚೂರು, ಗದಗ, ಬಾಗಲಕೋಟೆ, ಬಳ್ಳಾರಿ ಜಿಲ್ಲೆಗಳಿಂದ ಈ ಜಿಲ್ಲೆಯು ಸುತ್ತುವರೆದಿದೆ. ವಿಸ್ತೀರ್ಣದಲ್ಲಿ ರಾಜ್ಯದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಕೊಪ್ಪಳವು ೧೬ನೇ ಸ್ಥಾನದಲ್ಲಿದೆ. ಜಿಲ್ಲೆಯು ಪೂರ್ವದಿಂದ ಪಶ್ಚಿಮಕ್ಕೆ ೧೧೦ ಕಿಲೋಮೀಟರ್ ಹಾಗೂ ಉತ್ತರದಿಂದ ದಕ್ಷಿಣಕ್ಕೆ ೯೬ ಕಿಲೋಮೀಟರ್ ಉದ್ದವಿದೆ. ಸಮುದ್ರ ಮಟ್ಟದಿಂದ ಕನಿಷ್ಟ ೪೦೦ದಿಂದ ೭೦೦ ಮೀಟರ್‌ನಷ್ಟು ಎತ್ತರದಲ್ಲಿ ಈ ಜಿಲ್ಲೆಯ ಭೂಪ್ರದೇಶವಿದೆ. ಬಳ್ಳಾರಿ ಹನ್ನೊಂದು ತಾಲೂಕುಗಳನ್ನು ಒಳಗೊಂಡಿದ್ದರೆ ಕೊಪ್ಪಳ ನಾಲ್ಕು ತಾಲೂಕುಗಳನ್ನು ಮಾತ್ರ ಒಳಗೊಂಡಿದೆ. ಈ ನಾಲ್ಕು ತಾಲೂಕುಗಳಲ್ಲಿ ಕೊಪ್ಪಳ ಮತ್ತು ಗಂಗಾವತಿ ತಾಲೂಕುಗಳು ತುಂಗಾಭದ್ರಾ ನದಿಯಿಂದಾಗಿ ಕೃಷಿ ಚಟುವಟಿಕೆಗೆ ನೀರನ್ನು ಪಡೆದವು. ಅದರಲ್ಲೂ ಗಂಗಾವತಿಯು ಭತ್ತದ ಕಣಜವೆಂದೇ ಪ್ರಸಿದ್ಧವಾಯಿತು. ಆದರೆ ಕುಷ್ಟಗಿ ಮತ್ತು ಯಲಬುರ್ಗಾಗಳಿಗೆ ನೀರಿನ ಸೌಲಭ್ಯದಿಂದ ವಂಚಿತವಾಗಿವೆ. ಕೊಪ್ಪಳ ಜಿಲ್ಲೆಯಲ್ಲಿಯೇ ಯಲಬುರ್ಗಾವು ತುಂಬಾ ಹಿಂದುಳಿದ ತಾಲೂಕೆಂದು ಗುರುತಿಸಿಕೊಂಡಿದೆ. ತುಂಗಾಭದ್ರೆಯ ಹೊರತಾಗಿ ಹಿರೇಹಳ್ಳ, ಮಸ್ಕಿ ನಾಲೆ, ಹಿರೇನಾಡ ಹಳ್ಳ, ಅಳವಂಡಿ ನಾಲೆ, ಸಿಂಧನೂರು ನಾಲೆ, ಸಿದ್ದಾಪುರ ಹಳ್ಳ, ದುರುಗಮ್ಮನ ಹಳ್ಳ, ಮಾಸ್ತಿಹಳ್ಳ, ಕನಕಗಿರಿ ಹಳ್ಳಗಳಿವೆ. ಆದರೆ ಈ ಹಳ್ಳಗಳು ಬಹುತೇಕ ಮಳೆಯನ್ನು ಆಶ್ರಯಿಸಿಯೇ ಹರಿಯುವುದರಿಂದ ಮಳೆಗಾಲದಲ್ಲಿ ಮಾತ್ರ ನೀರನ್ನು ಹೊಂದಿರುವವು.

ಜಿಲ್ಲೆಯ ಕೊಪ್ಪಳದಲ್ಲಿ ಕಣಶಿಲೆಯ ಗುಡ್ಡಗಳಿದ್ದು ಮನೆ ಇತ್ಯಾದಿ ಕಟ್ಟಡ ಕೆಲಸಗಳಿಗೆ ಅವಶ್ಯವಾದ ಕಲ್ಲುಗಣಿಗಾರಿಕೆಗೆ ಅವಕಾಶ ಮಾಡಿಕೊಟ್ಟಿದೆ. ಇದಲ್ಲದೆ ಇಲ್ಲಿಯ ಗುಡ್ಡಗಳಲ್ಲಿ ಬೆಣಚುಗಲ್ಲು (ಕ್ವಾರ್ಟ್ಜ್)ಸಿಗುವುದು. ಗಂಗಾವತಿಯಲ್ಲಿ ಕಣಶಿಲೆಯ ಗುಡ್ಡಗಳಿದ್ದು ಕಲ್ಲುಗಣಿಗಾರಿಕೆಗೆ ಅವಕಾಶ ಕಲ್ಪಿಸಿದೆ. ಇದರ ಹೊರತಾಗಿ ಬಿಳಿ ಹಾಗೂ ಹಸಿರು ಬಣ್ಣದ ಕ್ವಾರ್ಟ್ಜ್ ಸಿಗುವುದು. ಕುಷ್ಟಗಿಯಲ್ಲಿಯೂ ಕಣಶಿಲೆಯ ಗುಡ್ಡಗಳಿವೆ. ಹಾಗೆಯೇ ಬೆಣಚುಗಲ್ಲು (ಕ್ವಾರ್ಟ್ಜ್)ಸಿಗುವುದು. ಯಲಬುರ್ಗಾದಲ್ಲಿ ಕಣಶಿಲೆಯ ಗುಡ್ಡಗಳಿವೆ.

ಬಳ್ಳಾರಿಯಲ್ಲಿ ಜಿಂದಾಲ್‌ನಂತಹ ಬೃಹತ್ ಕಬ್ಬಿಣ ಕಾರ್ಖಾನೆಗಳಲ್ಲದೆ ಮೆದುಕಬ್ಬಿಣ ತಯಾರಿಕೆಯ ಚಿಕ್ಕಪುಟ್ಟ ಕಾರ್ಖಾನೆಗಳನ್ನೂ ಕಾಣುತ್ತೇವೆ. ಅದೇ ರೀತಿ ಕೊಪ್ಪಳದಲ್ಲಿಯೂ ಕಿರ್ಲೋಸ್ಕರ್, ಕಲ್ಯಾಣಿ ಕಬ್ಬಿಣ ತಯಾರಿಕಾ ಕಾರ್ಖಾನೆಗಳಲ್ಲದೆ ಇತರೇ ಚಿಕ್ಕಪುಟ್ಟ ಮೆದುಕಬ್ಬಿಣ ತಯಾರಿಕಾ ಕಾರ್ಖಾನೆಗಳಿವೆ. ಆದರೆ ಇಲ್ಲಿಯ ಕಾರ್ಖಾನೆಗಳು ಕಬ್ಬಿಣ ಅದಿರನ್ನು ಬಳ್ಳಾರಿ ಭಾಗದಿಂದಲೇ ಪಡೆಯಬೇಕಾಗಿದೆ.

ಬಳ್ಳಾರಿ, ಹೊಸಪೇಟೆ, ಸಂಡೂರು ತಾಲೂಕುಗಳಲ್ಲಿ ರಾಷ್ಟ್ರೀಯ ಹೆದ್ದಾರಿಗಳು ಇವೆ. ಅದೇ ರೀತಿಯಾಗಿ ಕೊಪ್ಪಳ, ಕುಷ್ಟಗಿ, ಯಲಬುರ್ಗಾ ತಾಲೂಕುಗಳಲ್ಲಿಯೂ ರಾಷ್ಟ್ರೀಯ ಹೆದ್ದಾರಿ ಹಾದು ಹೋಗುವುದು. ಸಂಡೂರು, ಹೊಸಪೇಟೆ, ಬಳ್ಳಾರಿಯಲ್ಲಿ ತುಂಬಾ ಹಿಂದೆಯೇ ರೈಲ್ವೆ ಸಂಚಾರವಿತ್ತು. ಕೊಪ್ಪಳ ಜಿಲ್ಲೆಯಲ್ಲಿ ರೈಲ್ವೆ ಸೌಲಭ್ಯವನ್ನು ಕೊಪ್ಪಳ ತಾಲೂಕು ಮಾತ್ರ ಹೊಂದಿದ್ದಿತು. ಇತ್ತೀಚೆಗೆ ರೈಲ್ವೆ ಸೌಲಭ್ಯವನ್ನು ವಿಸ್ತರಿಸುವ ಉದ್ದೇಶದಿಂದ ಗಂಗಾವತಿಯೂ ಹೊಸದಾಗಿ ರೈಲ್ವೆ ಮಾರ್ಗವನ್ನು ಹೊಂದಿದೆ. ಒಂದುಕಡೆ ಒಣಭೂಮಿ, ಮತ್ತೊಂದೆಡೆ ನೀರಾವರಿ ಸೌಲಭ್ಯ ಹೊಂದಿದೆ. ಆದರೆ ಹೆಚ್ಚು ಕಪ್ಪುಮಣ್ಣು ಮತ್ತು ಕೆಂಪುಮಣ್ಣಿನಿಂದ ಕೂಡಿದ ದಖನ್ ಪ್ರಸ್ಥಭೂಮಿಯಾಗಿದೆ. ಅಲ್ಲಲ್ಲಿ ಕಣಶಿಲೆಗಳು, ಕಲ್ಲುಬಂಡೆಗಳು ಗುಡ್ಡಗಾಡುಗಳನ್ನೊಳಗೊಂಡಿದೆ. ಹಾಗೂ ಸಣ್ಣ ಪ್ರಮಾಣದ ಕುರುಚಲು ಅರಣ್ಯವನ್ನೊಳಗೊಂಡಿದೆ.

### ೨.೧ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಭೌಗೋಳಿಕ ಪರಿಸರ

ಕರ್ನಾಟಕದ ಒಟ್ಟು ಮೂವತ್ತು ಜಿಲ್ಲೆಗಳಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳು ಐತಿಹಾಸಿಕವಾಗಿ ತುಂಬಾ ಪ್ರಾಚೀನತೆಯನ್ನು ಹೊಂದಿದ ಜಿಲ್ಲೆಗಳಾಗಿವೆ. ಪ್ರಾಚೀನ ಜೈನ ಕೇಂದ್ರಗಳಲ್ಲಿ ಪ್ರಮುಖ ಜೈನಕೇಂದ್ರವೆಂದು ಗುರುತಿಸಲ್ಪಟ್ಟಿದ್ದು ಕೊಪ್ಪಳವಾಗಿದೆ. ಎರಡೂ ಜಿಲ್ಲೆಗಳ ಮಧ್ಯದಲ್ಲಿ ಈ ನಾಡಿನ ಪ್ರಮುಖ ಜೀವನಾಡಿಯಾದ ತುಂಗಾಭದ್ರ ನದಿ ಹರಿದು ಹೋಗುತ್ತದೆ. ತುಂಗಾಭದ್ರಾ ನದಿಯ ಎಡ ಹಾಗೂ ಬಲದಂಡೆಗಳು ಪ್ರಾಗೈತಿಹಾಸಿಕ ನೆಲೆಗಳನ್ನೊಳಗೊಂಡ ಪ್ರದೇಶಗಳನ್ನು ಹೊಂದಿದೆ. ಅಂದರೆ ತುಂಬಾ ಪ್ರಾಚೀನ ಕಾಲದಿಂದಲೂ ಮಾನವನ ನೆಲೆಗೆ ಈ ಪರಿಸರ ಆಶ್ರಯತಾಣವಾಗಿತ್ತೆಂಬುದು ಇಲ್ಲಿಯ ಕುರುಹುಗಳಿಂದ ತಿಳಿದುಬರುತ್ತದೆ.

- **ಬಳ್ಳಾರಿ ಜಿಲ್ಲೆ**

ವಿಜಯನಗರ ಸಾಮ್ರಾಜ್ಯದ ಕೇಂದ್ರ ಸ್ಥಾನವನ್ನು ಹೊಂದಿದ್ದ ಬಳ್ಳಾರಿ ಜಿಲ್ಲೆಯು ಕರ್ನಾಟಕದ ಮಧ್ಯ ಭಾಗದಲ್ಲಿದೆ. ಈ ಜಿಲ್ಲೆಯು ನೈರುತ್ಯ ಈಶಾನ್ಯ ದಿಕ್ಕುಗಳ ನಡುವೆ ಚಾಚಿಕೊಂಡಿದೆ. ಪ್ರಸ್ತುತ ಬಳ್ಳಾರಿ ಜಿಲ್ಲೆಯಲ್ಲಿ ಮೊದಲಿಗೆ ಹರಪನಹಳ್ಳಿ ತಾಲೂಕು ಸೇರ್ಪಡೆಗೊಂಡಿತ್ತು. ಆದರೆ ಜಿಲ್ಲಾ ಪಂಚಾಯತ್ ಹಾಗೂ ತಾಲೂಕು ಪಂಚಾಯತ್ ವ್ಯವಸ್ಥೆ ಜಾರಿಗೆಬಂದ ತರುವಾಯ ೧೯೯೭ರಲ್ಲಿ ರಾಜಕೀಯ ಕಾರಣಗಳಿಗಾಗಿ ಹರಪನಹಳ್ಳಿಯು ದಾವಣಗೆರೆ ಜಿಲ್ಲೆಗೆ ಸೇರ್ಪಡೆಗೊಂಡಿತ್ತು. ಹೀಗಾಗಿ ೮ ತಾಲೂಕುಗಳನ್ನು ಒಳಗೊಂಡಿದ್ದ ಬಳ್ಳಾರಿ ಜಿಲ್ಲೆಯು ಹರಪನಹಳ್ಳಿಯನ್ನು ಕಳೆದುಕೊಂಡು ಏಳು

ತಾಲೂಕುಗಳಿಗೆ ಮಾತ್ರ ಸೀಮಿತಗೊಂಡಿತ್ತು. ಆದರೆ ಬಳ್ಳಾರಿ ಜಿಲ್ಲೆಗೆ ಹೈದರಾಬಾದ್ ಕರ್ನಾಟಕದ ವಿಶೇಷ ಮಾನ್ಯತೆ (೩೭೧ ಜೆ) ದೊರೆತ ತರುವಾಯ ಹರಪನಹಳ್ಳಿಯ ಜನತೆ ತಾವು ದಾವಣಗೆರೆಗೆ ಸೇರಿದ್ದರಿಂದ ೩೭೧ ಜೆ ಸೌಲಭ್ಯದಿಂದ ವಂಚಿತವಾದೆವಲ್ಲಾ ಎಂದು ಹಪಾಹಪಿಸುತ್ತಿದ್ದರು. ೩೭೧ ಜೆ ಸೌಲಭ್ಯಕ್ಕಾಗಿ ಹರಪನಹಳ್ಳಿಯು ೨೦೧೮ರಲ್ಲಿ ಮರಳಿ ಬಳ್ಳಾರಿ ಜಿಲ್ಲಾ ವ್ಯಾಪ್ತಿಗೆ ಸೇರ್ಪಡೆಗೊಳಿಸಲು ರಾಜ್ಯ ಸರ್ಕಾರವು ಆದೇಶವನ್ನು ಹೊರಡಿಸಿತು. ಸರ್ಕಾರದ ಆದೇಶದಂತೆ ಹರಪನಹಳ್ಳಿಯು ಮತ್ತೆ ಬಳ್ಳಾರಿ ಜಿಲ್ಲೆಗೆ ಸೇರ್ಪಡೆಯಾಗಿದೆ. ಹಾಗೆಯೇ ತಾಲೂಕುಗಳ ಮರುವಿಂಗಡನೆಯನ್ನು ಮಾಡಿದಾಗ ಬಳ್ಳಾರಿ ತಾಲೂಕಿನ ಹೋಬಳಿ ಕೇಂದ್ರಗಳಲ್ಲಿ ಒಂದಾದ ಕುರುಗೋಡು ಹಾಗೂ ಹೊಸಪೇಟೆ ತಾಲೂಕಿನ ಹೋಬಳಿ ಕೇಂದ್ರವಾದ ಕಂಪ್ಲಿ ಹಾಗೂ ಕೂಡ್ಲಿಗಿ ತಾಲೂಕಿನ ಹೋಬಳಿ ಕೇಂದ್ರವಾದ ಕೊಟ್ಟೂರು ಹೊಸ ತಾಲೂಕುಗಳಾದವು. ಹೀಗಾಗಿ ಪ್ರಸ್ತುತ ಬಳ್ಳಾರಿಯು ಹನ್ನೊಂದು ತಾಲೂಕುಗಳನ್ನು ಒಳಗೊಂಡಿದೆ.

೧೯೯೭ರ ತರುವಾಯ ಬಳ್ಳಾರಿ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣವು ೮೪೪೭.೦೦ ಚ.ಕಿ. ಮೀಟರ್‌ಗಳಷ್ಟಿತ್ತು. ಆದರೆ ಹರಪನಹಳ್ಳಿಯು ಜಿಲ್ಲೆಗೆ ಮರು ಸೇರ್ಪಡೆಗೊಂಡ ನಂತರ ತನ್ನ ಮೂಲ ವ್ಯಾಪ್ತಿಗೆ ಮರಳಿದಂತಾಯಿತು. ಇದು ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ಶೇ. ೪.೪೦ರಷ್ಟು ಪಾಲನ್ನು ಹೊಂದಿದೆ. ಅಂದರೆ ರಾಜ್ಯದ ಒಟ್ಟು ಜಿಲ್ಲೆಗಳಿಗೆ ಹೋಲಿಸಿದರೆ ಇದು ವಿಸ್ತೀರ್ಣದಲ್ಲಿ ಎಂಟನೇ ಸ್ಥಾನದಲ್ಲಿದೆ.

ಉತ್ತರಕ್ಕೆ ಕೊಪ್ಪಳ ಜಿಲ್ಲೆ, ದಕ್ಷಿಣಕ್ಕೆ ಚಿತ್ರದುರ್ಗ ಜಿಲ್ಲೆ, ಪಶ್ಚಿಮಕ್ಕೆ ಗದಗ ಜಿಲ್ಲೆ, ಪೂರ್ವಕ್ಕೆ ಆಂಧ್ರಪ್ರದೇಶಗಳಿಂದ ಬಳ್ಳಾರಿ ಜಿಲ್ಲೆಯು ಸುತ್ತುವರೆದಿದೆ. ಈ ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಅನುಕೂಲಕರವಾಗಿದೆ. ಜಿಲ್ಲೆಯು ಉಷ್ಣ ಹವಾಮಾನದಿಂದ ಕೂಡಿದೆ. ಈ ಜಿಲ್ಲೆಯಲ್ಲಿ ಮಳೆ ಪ್ರಮಾಣ ಕಡಿಮೆಯಂದೇ ಹೇಳಬಹುದು. ಶುಷ್ಕ ವಾತಾವರಣದಿಂದ ಕೂಡಿದ ಪೂರ್ವಭಾಗದಲ್ಲಿ ಹೆಚ್ಚು ಅರಣ್ಯ ಪ್ರದೇಶವಿದೆ. ಈ ಭಾಗದಲ್ಲಿ ತುಂಗಾಭದ್ರ ನದಿಯಿಂದಾಗಿ ಪೂರ್ವ ತಾಲೂಕುಗಳಿಗೆ ನೀರಾವರಿ ಸೌಲಭ್ಯ ದೊರೆತಿದೆ. ಜಿಲ್ಲೆಯ ಹಡಗಲಿ ತಾಲೂಕನ್ನು ಪ್ರವೇಶಿಸುವ ತುಂಗಾಭದ್ರಾ ನದಿಯು ಮುಂದೆ ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಸಿರಗುಪ್ಪ ತಾಲೂಕುಗಳನ್ನು ಹಾದು ಆಂಧ್ರಪ್ರದೇಶದ ಮೂಲಕ ಮುಂದೆ ಹೋಗಿ ಸಮುದ್ರ ಸೇರುತ್ತದೆ. ತುಂಗಾಭದ್ರಾ ನದಿಯು ಒಟ್ಟು ಮೂರುನೂರ ಇಪ್ಪತ್ತು ಕಿ.ಮೀ ದೂರ ಹರಿಯುತ್ತದೆ. ತುಂಗಾಭದ್ರಾ ನದಿಯ ಹೊರತಾಗಿ ಹಗರಿ (ವೇದಾವತಿ) ಎಂಬ ಚಿಕ್ಕ ನದಿಯೊಂದು ಈ ಜಿಲ್ಲೆಯಲ್ಲಿ ಹರಿಯುತ್ತದೆ. ಇವುಗಳ ಹೊರತಾಗಿ ನಾರಿ ಹಳ್ಳದಂತಹ ಚಿಕ್ಕಮಟ್ಟ ಹಳ್ಳಗಳು ಈ ಜಿಲ್ಲೆಯಲ್ಲಿ ಕಂಡುಬರುತ್ತವೆ. ಇವುಗಳಲ್ಲದೆ ಹಿಂದೆ ಕಂಪಲಿರಾಯ ಮತ್ತು ವಿಜಯನಗರದ ಅರಸರು, ಸಣ್ಣಮಟ್ಟ ಪಾಳೆಯಗಾರರು ನಿರ್ಮಿಸಿದ ಕೆರೆ ಕಟ್ಟೆಗಳು ಸಹ ಜಿಲ್ಲೆಯಾದ್ಯಂತ ಕಂಡುಬರುತ್ತದೆ.

ಅತ್ಯುತ್ತಮ ಗುಣಮಟ್ಟದ ಕಬ್ಬಿಣ ಮತ್ತು ಮ್ಯಾಂಗನೀಸ್ ನಿಕ್ಷೇಪವನ್ನು ಈ ಜಿಲ್ಲೆಯಲ್ಲಿ ಕಾಣಬಹುದು. ಈ ಜಿಲ್ಲೆಯ ಸಂಡೂರು, ಹೊಸಪೇಟೆ, ಬಳ್ಳಾರಿ ತಾಲೂಕುಗಳು ಕಬ್ಬಿಣ ಮತ್ತು ಮ್ಯಾಂಗನೀಸ್

ಹೊಂದಿದ ಬೆಟ್ಟಗಳನ್ನು ಹೊಂದಿವೆ. ಕಬ್ಬಿಣ ನಿಕ್ಷೇಪದ ಪ್ರಮಾಣ ೧೦೩೨.೪೦ ದಶಲಕ್ಷ ಟನ್‌ಗಳಿಷ್ಟಿದೆ ಎಂದು ಭೂಗರ್ಭಶಾಸ್ತ್ರಜ್ಞರು ಅಂದಾಜಿಸಿದ್ದಾರೆ. ಹಾಗೆಯೇ ಮ್ಯಾಂಗನೀಸ್ ಪ್ರಮಾಣವು ೧೮.೮೧ ದಶಲಕ್ಷ ಟನ್‌ಗಳಿಷ್ಟಿದೆ ಎಂದು ಗುರುತಿಸಲಾಗಿದೆ.

ಇವಲ್ಲದೆ ಗ್ರಾನೇಟ್ ಕಲ್ಲುಗಳನ್ನು ಹೊಂದಿದ ಬೆಟ್ಟಗಳು ಬಳ್ಳಾರಿ ಜಿಲ್ಲೆಯಲ್ಲಿ ವ್ಯಾಪಕವಾಗಿ ಹರಡಿಕೊಂಡಿದೆ. ಹೀಗಾಗಿ ಗ್ರಾನೇಟ್ ಗಣಿಗಾರಿಕೆಯು ಇಲ್ಲಿ ವ್ಯಾಪಕವಾಗಿ ಹರಡಿರುವುದನ್ನು ಕಾಣಬಹುದಾಗಿದೆ. ೧೯೯೧ರ ಮಧ್ಯ ಭಾಗದಲ್ಲಿ ಜಾರಿಗೆ ಬಂದ ಹೊಸ ಆರ್ಥಿಕ ನೀತಿಯ ಪರಿಣಾಮವಾಗಿ ಜಿಲ್ಲೆಯಲ್ಲಿ ಬೃಹತ್ ಪ್ರಮಾಣದ ಕಂಪನಿಗಳು ಕಬ್ಬಿಣ ಮತ್ತು ಉಕ್ಕು ಉದ್ದಿಮೆಗಳ ಮೇಲೆ ಬಂಡವಾಳ ತೊಡಗಿಸಿವೆ. ಜೊತೆಗೆ ಇದರ ಬೆನ್ನಲ್ಲೇ ಚಿಕ್ಕ ಕಾರ್ಖಾನೆಗಳಿಂದ ಹಿಡಿದು ಜಿಂದಾಲ್ ವಿಜಯನಗರ ಉಕ್ಕು ಕಾರ್ಖಾನೆಯಂತಹ ಬೃಹತ್ ಕಾರ್ಖಾನೆಗಳು ಜಿಲ್ಲೆಯಲ್ಲಿ ತಲೆಯೆತ್ತಿವೆ. ಇದಲ್ಲದೆ ಮಿತ್ತಲ್‌ನಂತಹ ಕಂಪನಿಗಳು ಕಬ್ಬಿಣ ಕಾರ್ಖಾನೆಗಳನ್ನು ಸ್ಥಾಪಿಸಲು ಮುಂದಾಗಿವೆ. ಕುಡಿತಿನಿ ಮತ್ತು ತೋರಣಗಲ್‌ನಲ್ಲಿ ಎರಡು ಉಷ್ಣವಿದ್ಯುತ್ ತಯಾರಿಕಾ ಘಟಕಗಳು ತಲೆಯತ್ತಿವೆ. ಕುಡಿತಿನಿಯ ಉಷ್ಣ ವಿದ್ಯುತ್ ಸ್ಥಾವರವನ್ನು ಕರ್ನಾಟಕ ವಿದ್ಯುತ್ ನಿಗಮ ನಿರ್ವಹಿಸುತ್ತಿದೆ.

- **ಕೊಪ್ಪಳ ಜಿಲ್ಲೆ**

ನೃಪತುಂಗನ ಆಸ್ಥಾನ ಕವಿ ಶ್ರೀವಿಜಯನ ಪ್ರಕಾರ ತಿರುಳ್ಗನ್ನಡವನ್ನು ಒಳಗೊಂಡ ಕನ್ನಡ ನಾಡಿನ ಕೇಂದ್ರಗಳಲ್ಲಿ ಕೊಪ್ಪಳವೂ ಒಂದು. ಕೂಪಣನಗರವೆಂದು ಕರೆಯಲ್ಪಟ್ಟಿದ್ದ ಕೊಪ್ಪಳವು ಜೈನರ ಶ್ರದ್ಧಾಕೇಂದ್ರವೂ ಆಗಿತ್ತು. ಕೊಪ್ಪಳ ಜಿಲ್ಲೆಯನ್ನು ಬಳ್ಳಾರಿಯಿಂದ ವಿಭಾಗಿಸಿರುವುದು ಈ ಪ್ರದೇಶದ ಜೀವನಾಡಿಯಾದ ತುಂಗಾಭದ್ರ. ೧೯೯೭ರ ಪೂರ್ವದಲ್ಲಿ ರಾಯಚೂರು ಜಿಲ್ಲೆಯಲ್ಲಿದ್ದಿತು. ೧೯೯೭ರಲ್ಲಿ ಜಿಲ್ಲೆಗಳ ಮರುವಿಂಗಡಣೆಯಾದಾಗ ಕೊಪ್ಪಳ ಸ್ವತಂತ್ರ ಜಿಲ್ಲೆಯಾಗಿ ಅಸ್ಥಿತ್ವಕ್ಕೆ ಬಂದಿತು. ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಜಿಲ್ಲೆಯಲ್ಲಿ ಕೊಪ್ಪಳ, ಗಂಗಾವತಿ, ಕುಷ್ಟಗಿ, ಯಲಬುರ್ಗಾ ನಾಲ್ಕು ತಾಲೂಕುಗಳನ್ನೊಳಗೊಂಡಿದೆ. ಜಿಲ್ಲೆಯ ವಿಸ್ತೀರ್ಣವು ಒಟ್ಟು ೫,೫೭೦ ಚದರ ಕಿಲೋಮೀಟರ್ ಇದೆ. ರಾಯಚೂರು, ಗದಗ, ಬಾಗಲಕೋಟೆ, ಬಳ್ಳಾರಿ ಜಿಲ್ಲೆಗಳಿಂದ ಸುತ್ತುವರೆದಿದೆ. ವಿಸ್ತೀರ್ಣದಲ್ಲಿ ರಾಜ್ಯದ ಇತರ ಜಿಲ್ಲೆಗಳಿಗೆ ಹೋಲಿಸಿದರೆ ಕೊಪ್ಪಳವು ೧೬ನೇ ಸ್ಥಾನದಲ್ಲಿದೆ. ಜಿಲ್ಲೆಯು ಪೂರ್ವದಿಂದ ಪಶ್ಚಿಮಕ್ಕೆ ೧೧೦ ಕಿಲೋಮೀಟರ್ ಹಾಗೂ ಉತ್ತರದಿಂದ ದಕ್ಷಿಣಕ್ಕೆ ೯೬ ಕಿಲೋಮೀಟರ್ ಉದ್ದವಿದೆ. ಸಮುದ್ರ ಮಟ್ಟದಿಂದ ಕನಿಷ್ಟ ೪೦೦ದಿಂದ ೭೦೦ ಮೀಟರ್‌ನಷ್ಟು ಎತ್ತರದಲ್ಲಿ ಈ ಜಿಲ್ಲೆಯ ಭೂಪ್ರದೇಶವಿದೆ. ಬಳ್ಳಾರಿ ಹನ್ನೊಂದು ತಾಲೂಕುಗಳನ್ನು ಒಳಗೊಂಡಿದ್ದರೆ ಕೊಪ್ಪಳ ನಾಲ್ಕು ತಾಲೂಕುಗಳನ್ನು ಮಾತ್ರ ಒಳಗೊಂಡಿದೆ. ಈ ನಾಲ್ಕು ಜಿಲ್ಲೆಗಳಲ್ಲಿ ಕೊಪ್ಪಳ ಮತ್ತು ಗಂಗಾವತಿ ತಾಲೂಕುಗಳು ತುಂಗಾಭದ್ರಾ ನದಿಯಿಂದಾಗಿ ನೀರಾವರಿ ಸೌಲಭ್ಯ ಹೊಂದಿವೆ.

ಕೊಪ್ಪಳದಲ್ಲಿ ಕಣಶಿಲೆಯ ಗುಡ್ಡಗಳಿದ್ದು ಮನೆ ಇತ್ಯಾದಿ ಕಟ್ಟಡ ಕೆಲಸಗಳಿಗೆ ಅವಶ್ಯವಾದ ಕಲ್ಲುಗಣಿಗಾರಿಕೆಗೆ ಅವಕಾಶ ಮಾಡಿಕೊಟ್ಟಿದೆ. ಇದಲ್ಲದೆ ಇಲ್ಲಿಯ ಗುಡ್ಡಗಳಲ್ಲಿ ಬೆಣಚುಗಲ್ಲು

(ಕ್ವಾರ್ಟ್ಜ್)ಸಿಗುವುದು. ಗಂಗಾವತಿಯಲ್ಲಿ ಕಣಶಿಲೆಯ ಗುಡ್ಡಗಳಿದ್ದು ಕಲ್ಲುಗಣಿಗಾರಿಕೆಗೆ ಅವಕಾಶ ಕಲ್ಪಿಸಿದೆ. ಇದರ ಹೊರತಾಗಿ ಬಿಳಿ ಹಾಗೂ ಹಸಿರು ಬಣ್ಣದ ಕ್ವಾರ್ಟ್ಜ್ ಸಿಗುವುದು. ಕುಷ್ಟಗಿಯಲ್ಲಿಯೂ ಕಣಶಿಲೆಯ ಗುಡ್ಡಗಳಿವೆ. ಹಾಗೆಯೇ ಬೆಣಚುಗಲ್ಲು (ಕ್ವಾರ್ಟ್ಜ್)ಸಿಗುವುದು. ಯಲಬುರ್ಗಾದಲ್ಲಿ ಸಹ ಕಣಶಿಲೆಯ ಗುಡ್ಡಗಳಿವೆ.

ಬಳ್ಳಾರಿಯಲ್ಲಿ ಜಿಂದಾಲ್‌ನಂತಹ ಬೃಹತ್ ಕಬ್ಬಿಣ ಕಾರ್ಖಾನೆಗಳಲ್ಲದೆ ಮೆದುಕಬ್ಬಿಣ ತಯಾರಿಕೆಯ ಚಿಕ್ಕಪುಟ್ಟ ಕಾರ್ಖಾನೆಗಳನ್ನೂ ಕಾಣುತ್ತೇವೆ. ಅದೇ ರೀತಿ ಕೊಪ್ಪಳದಲ್ಲಿಯೂ ಕಿರ್ಲೋಸ್ಕರ್, ಕಲ್ಯಾಣಿ ಕಬ್ಬಿಣ ತಯಾರಿಕಾ ಕಾರ್ಖಾನೆಗಳಲ್ಲದೆ ಇತರೇ ಚಿಕ್ಕಪುಟ್ಟ ಮೆದುಕಬ್ಬಿಣ ತಯಾರಿಕಾ ಕಾರ್ಖಾನೆಗಳಿವೆ. ಆದರೆ ಇಲ್ಲಿಯ ಕಾರ್ಖಾನೆಗಳು ಕಬ್ಬಿಣ ಅದಿರನ್ನು ಬಳ್ಳಾರಿ ಭಾಗದಿಂದಲೇ ಪಡೆಯಬೇಕಾಗಿದೆ.

ಬಳ್ಳಾರಿ, ಹೊಸಪೇಟೆ, ಸಂಡೂರು ತಾಲೂಕುಗಳಲ್ಲಿ ರಾಷ್ಟ್ರೀಯ ಹೆದ್ದಾರಿಗಳು ಇವೆ. ಅದೇ ರೀತಿಯಾಗಿ ಕೊಪ್ಪಳ, ಕುಷ್ಟಗಿ, ಯಲಬುರ್ಗಾ ತಾಲೂಕುಗಳಲ್ಲಿಯೂ ರಾಷ್ಟ್ರೀಯ ಹೆದ್ದಾರಿ ಹಾದುಹೋಗುವುದು. ಸಂಡೂರು, ಹೊಸಪೇಟೆ, ಬಳ್ಳಾರಿಯಲ್ಲಿ ತುಂಬಾ ಹಿಂದೆಯೇ ರೈಲ್ವೆ ಸಂಚಾರವಿತ್ತು. ಕೊಪ್ಪಳ ಜಿಲ್ಲೆಯಲ್ಲಿ ರೈಲ್ವೆ ಸೌಲಭ್ಯವನ್ನು ಕೊಪ್ಪಳ ತಾಲೂಕು ಮಾತ್ರ ಹೊಂದಿದ್ದಿತು. ಇತ್ತೀಚೆಗೆ ರೈಲ್ವೆ ಸೌಲಭ್ಯವನ್ನು ವಿಸ್ತರಿಸುವ ಉದ್ದೇಶದಿಂದ ಗಂಗಾವತಿಯೂ ಹೊಸದಾಗಿ ರೈಲ್ವೆ ಮಾರ್ಗವನ್ನು ಹೊಂದಿದೆ.

ಪೂರ್ವಕ್ಕೆ ಬಳ್ಳಾರಿ ಜಿಲ್ಲೆ, ಪಶ್ಚಿಮಕ್ಕೆ ಗದಗ ಜಿಲ್ಲೆ, ಉತ್ತರಕ್ಕೆ ಬಾಗಲಕೋಟೆ, ರಾಯಚೂರು ಜಿಲ್ಲೆಗಳಿಂದ ಸುತ್ತುವರೆದಿದೆ. ಈ ಜಿಲ್ಲೆಯ ಪೂರ್ವಭಾಗವು ಸಮತಟ್ಟಾದ ಭೂಮಿಯನ್ನು ಹೊಂದಿದ್ದು ಕೃಷಿಗೆ ಅನುಕೂಲಕರವಾಗಿದೆ. ಬಹುತೇಕ ಬಳ್ಳಾರಿ ಜಿಲ್ಲೆಯ ವಾತಾವರಣವೇ ಇಲ್ಲಿಯೂ ಇದೆ.

### ೨.೨ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಜನಸಂಖ್ಯೆ

೨೦೧೧ರ ಜನಗಣತಿ ಪ್ರಕಾರ ಕರ್ನಾಟಕವು ಒಟ್ಟು ೫,೨೮,೫೦,೫೬ ಜನಸಂಖ್ಯೆಯನ್ನು ಹೊಂದಿದೆ ಇದರಲ್ಲಿ ಪುರುಷರು ೨,೬೮,೯೮,೯೧೮ ರಷ್ಟಿದ್ದರೆ ಮಹಿಳೆಯರು ೨,೫೯,೫೧,೬೪೪ ರಷ್ಟಿದ್ದಾರೆ.

ಪರಿಶಿಷ್ಟ ಜಾತಿಯ (೨೦೧೧) ಒಟ್ಟು ಜನಸಂಖ್ಯೆಯು ೮೫,೬೩,೯೩೦ರಷ್ಟಿದ್ದು ಪುರುಷರು ೪೩,೩೯,೧೪೫ ಹಾಗೂ ಮಹಿಳೆಯರು ೪೨,೨೪,೧೮೫ರಷ್ಟಿದ್ದಾರೆ. ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡದ (೨೦೦೧) ಒಟ್ಟು ಜನಸಂಖ್ಯೆಯು ೩೪,೬೩,೯೮೬ರಷ್ಟಿದ್ದು ಪುರುಷರು ೧೭,೫೬,೨೩೮ರಷ್ಟಿದ್ದರೆ ಮಹಿಳೆಯರು ೧೭,೦೭,೭೪೮ರಷ್ಟಿದ್ದಾರೆ. ಕರ್ನಾಟಕದ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ರಾಜ್ಯದ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯಾ ಪ್ರಮಾಣವು ಕೇವಲ ಶೇ. ೬.೫೮ರಷ್ಟಿದೆ. ಇದರಲ್ಲಿ ಪರಿಶಿಷ್ಟ ಪಂಗಡದ ಪುರುಷರ ಪ್ರಮಾಣವು ಶೇಕಡ ೩.೩೩ ಇದೆ ಹಾಗೂ ಮಹಿಳೆಯರ ಪ್ರಮಾಣವು ಶೇಕಡ ೩.೨೪ ದಷ್ಟು ಇದೆ. ೨೦೧೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯು ೨೦,೨೭,೧೪೦ರಷ್ಟಿದ್ದು ಇದರಲ್ಲಿ ಪುರುಷರು ೧೦,೨೯,೭೧೪ ರಷ್ಟಿದ್ದಾರೆ ಹಾಗೂ ಮಹಿಳೆಯರು ೯,೯೭,೪೨೬ ರಷ್ಟಿದ್ದಾರೆ.

ಪರಿಶಿಷ್ಟ ಜಾತಿಯು ಜನಸಂಖ್ಯೆಯು ಒಟ್ಟು ೩,೭೪,೨೧೮ ರಷ್ಟಿದೆ ಇದರಲ್ಲಿ ಪುರುಷರು ೧,೮೮,೫೩೬ ಹಾಗೂ ಮಹಿಳೆಯರು ೧,೮೫,೬೮೨ ರಷ್ಟಿದ್ದಾರೆ. ಪರಿಶಿಷ್ಟ ಪಂಗಡದ ಜನಸಂಖ್ಯೆಯು ಜಿಲ್ಲೆಯಲ್ಲಿ ಒಟ್ಟು ೩,೬೪,೬೩೮ರಷ್ಟಿದ್ದು ಪುರುಷರು ೧,೮೩,೬೬೨ ಹಾಗು ಮಹಿಳೆಯರು ೧,೮೦,೯೭೬ರಷ್ಟಿದ್ದಾರೆ. ಅಂದರೆ ಕರ್ನಾಟಕದ ಒಟ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆಗೆ ಹೋಲಿಸಿದರೆ ಬಳ್ಳಾರಿ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟ ಪಂಗಡದ ಜನಸಂಖ್ಯೆ ಕೇವಲ ಶೇಕಡ ೧೦.೫೩ರಷ್ಟು ಮಾತ್ರವಿದೆ, ಇದರಲ್ಲಿ ಪುರುಷರ ಪ್ರಮಾಣವು ಶೇಕಡ ೫.೩೦ ರಷ್ಟಿದ್ದರೆ ಮಹಿಳೆಯರ ಪ್ರಮಾಣ ಶೇಕಡ ೫.೨೩ರಷ್ಟಿದೆ.

| ಕೋಷ್ಟಕ:೨.೧ ೨೦೧೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆಯ ವಿವರ | | | | |
|---|---|---|---|---|
| ಕ್ರಸಂ | ತಾಲೂಕುಗಳು | ಜನಸಂಖ್ಯೆ | | |
| | | ಗಂಡು | ಹೆಣ್ಣು | ಒಟ್ಟು |
| ೧ | ಹೂವಿನ ಹಡಗಲಿ | ೯೮,೮೫೩ | ೯೬,೩೬೬ | ೧೯೫,೨೧೯ |
| ೨ | ಹಗರಿಬೊಮ್ಮನಹಳ್ಳಿ | ೯೫,೩೩೭ | ೯೨,೯೦೧ | ೧೮೮,೨೩೮ |
| ೩ | ಹೊಸಪೇಟೆ | ೨೨೯,೩೩೮ | ೨೩೦,೬೫೩ | ೪೫೯,೯೯೧ |
| ೪ | ಸಿರುಗುಪ್ಪ | ೧೩೪,೨೪೬ | ೧೩೪,೮೫೮ | ೨೬೯,೧೦೪ |
| ೫ | ಬಳ್ಳಾರಿ | ೩೮೭,೭೪೪ | ೩೮೩,೧೮೫ | ೭೭೦,೯೨೯ |
| ೬ | ಸಂಡೂರು | ೧೩೪,೦೩೪ | ೧೨೬,೧೭೯ | ೨೬೦,೨೧೩ |
| ೭ | ಕೂಡ್ಲಿಗಿ | ೧೫೭,೪೦೨ | ೧೫೧,೪೯೯ | ೩೦೮,೯೦೧ |
| ೮ | ಬಳ್ಳಾರಿ ಜಿಲ್ಲೆ | ೧೨೩೬,೯೪೧ | ೧೨೧೫,೬೪೧ | ೨೪೫೨,೫೯೫ |

ಕೃಪೆ: ೨೦೧೧ ರ ಬಳ್ಳಾರಿ ಜಿಲ್ಲಾ ಜನಗಣತಿ ಕೈಪಿಡಿ

ಮೇಲಿನ ಕೋಷ್ಟಕವನ್ನು ಗಮನಿಸಿದರೆ ಬಳ್ಳಾರಿ ಜಿಲ್ಲೆಯ ಜನಸಂಖ್ಯೆಯ ಪೂರ್ಣ ಚಿತ್ರಣ ದೊರೆಯುತ್ತದೆ. ೨೦೧೧ರ ಜನಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಒಟ್ಟು ೨.೪೫೨.೫೯೫ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ಪುರುಷರು ೧೨೩೬೯೫೪ ಮತ್ತು ೧೨೧೫೬೪೧ ಜನ ಮಹಿಳೆಯರು ಇರುವರು. (೨೦೧೧ರ ತರುವಾಯ ೨೦೧೮ರಲ್ಲಿ ತಾಲೂಕುಗಳ ಪುನರ್ವಿಂಗಡನೆ ಹಾಗೂ ಹರಪನಹಳ್ಳಿ ತಾಲೂಕು ಸೇರ್ಪಡೆಗೊಳಿಸಿಕೊಂಡಿರುವುದರಿಂದ ಅವುಗಳ ಮಾಹಿತಿಯನ್ನು ಇಲ್ಲಿ ನೀಡಿರುವುದಿಲ್ಲ)

ತಾಲೂಕುವಾರು ಜನಸಂಖ್ಯೆಯನ್ನು ಗಮನಿಸಿದರೆ ಹೂವಿನಹಡಗಲಿ ತಾಲೂಕು ಒಟ್ಟು ೧೯೧.೨೧೯ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ೯೮.೮೫೨ ರಷ್ಟು ಪುರುಷರು ಮತ್ತು ೯೬.೩೬೬ ಜನ

ಮಹಿಳೆಯರು ಇದ್ದಾರೆ. ಹಗರಿಬೊಮ್ಮನಹಳ್ಳಿ ತಾಲೂಕು ಒಟ್ಟು ೧೮೮.೨೩೮ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೯೫.೩೩೭ ಜನ ಪುರುಷರು ಮತ್ತು ೯೨.೯೦೧ ಜನ ಮಹಿಳೆಯರು ಇದ್ದಾರೆ. ಹೊಸಪೇಟೆ ತಾಲೂಕು ಒಟ್ಟು ೪೫೯.೯೯೧ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪುರುಷರು ೨೨೯.೩೩೮ ಮತ್ತು ೨೩೦೬೫೩ ಜನ ಮಹಿಳೆಯರು ಕಂಡು ಬರುತ್ತಾರೆ.

ಪೈ ಚಿತ್ರ: ೨.೧ ೨೦೧೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ತಾಲೂಕುವಾರು ಜನಸಂಖ್ಯೆಯ ವಿವರ




ಮೇಲಿನ ಪೈ ಚಿತ್ರದಲ್ಲಿ ೨೦೦೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯ, ಶೇಕಡವಾರು ಜನಸಂಖ್ಯೆಯನ್ನು ವಿವರಿಸಲಾಗಿದೆ. ಇದರಲ್ಲಿ ಶೇಕಡ ೫೦.೪೩ ರಷ್ಟು ಗಂಡು ಹಾಗೂ ೪೯.೫೭ ರಷ್ಟು ಹೆಣ್ಣು ಶೇಕಡ ಒಟ್ಟು ೧೦೦ ರಷ್ಟು ಜನಸಂಖ್ಯೆ ಹೊಂದಿದ್ದಾರೆ ಎಂಬುದನ್ನು ಈ ಚಿತ್ರದಲ್ಲಿ ಗುರುತಿಸಲಾಗಿದೆ.

**ಕೊಪ್ಪಳ ಜಿಲ್ಲೆಯ ಜನಸಂಖ್ಯೆ**

೨೦೧೧ರ ಜನಗಣತಿ ಪ್ರಕಾರ ಕರ್ನಾಟಕವು ಒಟ್ಟು ೬,೧೦,೯೫,೨೯೭ ಜನಸಂಖ್ಯೆಯನ್ನು ಹೊಂದಿದೆ ಇದರಲ್ಲಿ ಪುರುಷರು ೩,೦೯,೬೬,೬೫೭ ರಷ್ಟಿದ್ದರೆ ಮಹಿಳೆಯರು ೩,೦೧,೨೮,೬೪೦ ರಷ್ಟಿದ್ದಾರೆ. ಪರಿಶಿಷ್ಟ ಜಾತಿಯ (೨೦೧೧) ಒಟ್ಟು ಜನಸಂಖ್ಯೆಯು ೮೫,೬೩,೯೩೦ರಷ್ಟಿದ್ದು ಪುರುಷರು ೪೩,೩೯,೧೪೫ ಹಾಗೂ ಮಹಿಳೆಯರು ೪೨,೨೪,೧೮೫ರಷ್ಟಿದ್ದಾರೆ. ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡದ (೨೦೦೧) ಒಟ್ಟು ಜನಸಂಖ್ಯೆಯು ೩೪,೬೩,೯೮೬ರಷ್ಟಿದ್ದು ಪುರುಷರು ೧೭,೫೬,೨೩೮ರಷ್ಟಿದ್ದರೆ ಮಹಿಳೆಯರು ೧೭,೦೭,೭೪೮ರಷ್ಟಿದ್ದಾರೆ.

ಕರ್ನಾಟಕದ ಒಟ್ಟು ಜನಸಂಖ್ಯೆಗೆ ಹೋಲಿಸಿದರೆ ರಾಜ್ಯದ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯಾ ಪ್ರಮಾಣವು ಕೇವಲ ಶೇ. ೬.೫೮ರಷ್ಟಿದೆ. ಇದರಲ್ಲಿ ಪರಿಶಿಷ್ಟ ಪಂಗಡದ ಪುರುಷರ ಪ್ರಮಾಣವು

ಶೇಕಡ ೩.೩೩ ಇದೆ ಹಾಗೂ ಮಹಿಳೆಯರ ಪ್ರಮಾಣವು ಶೇಕಡ ೩.೨೪ ದಷ್ಟು ಇದೆ. ೨೦೧೧ರ ಜನಗಣತಿ ಪ್ರಕಾರ ಕೊಪ್ಪಳ ಜಿಲ್ಲೆಯ ಒಟ್ಟು ಜನಸಂಖ್ಯೆಯು ೧೧,೭೪,೦೦೧ ರಷ್ಟಿದ್ದು ಇದರಲ್ಲಿ ಪುರುಷರು ೫,೯೧,೮೯೨ ರಷ್ಟಿದ್ದಾರೆ ಹಾಗೂ ಮಹಿಳೆಯರು ೫,೮೨,೧೦೯ ರಷ್ಟಿದ್ದಾರೆ.

ಪರಿಶಿಷ್ಟ ಜಾತಿಯು ಜನಸಂಖ್ಯೆಯು ಒಟ್ಟು ೨,೫೮,೬೦೮ರಷ್ಟಿದೆ ಇದರಲ್ಲಿ ಪುರುಷರು ೧,೨೯,೩೪೧ ಹಾಗೂ ಮಹಿಳೆಯರು ೧,೨೯,೨೬೭ರಷ್ಟಿದ್ದಾರೆ. ಪರಿಶಿಷ್ಟ ಪಂಗಡದ ಜನಸಂಖ್ಯೆಯು ಜಿಲ್ಲೆಯಲ್ಲಿ ಒಟ್ಟು ೧,೬೪,೨೭೧ರಷ್ಟಿದ್ದು ಪುರುಷರು ೮೨,೭೬೧ ಹಾಗು ಮಹಿಳೆಯರು ೮೧,೫೧೦ರಷ್ಟಿದ್ದಾರೆ. ಅಂದರೆ ಕರ್ನಾಟಕದ ಒಟ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆಗೆ ಹೋಲಿಸಿದರೆ ಕೊಪ್ಪಳ ಜಿಲ್ಲೆಯಲ್ಲಿ ವಾಸವಾಗಿರುವ ಪರಿಶಿಷ್ಟ ಪಂಗಡದ ಜನಸಂಖ್ಯೆ ಕೇವಲ ಶೇಕಡ ೧೧.೮೨ರಷ್ಟು ಮಾತ್ರವಿದೆ.

| ಕೋಷ್ಟಕ:೨.೨ ಕೊಪ್ಪಳ ತಾಲೂಕುವಾರು ಜನಸಂಖ್ಯೆ ವಿವರ | | | | |
|---|---|---|---|---|
| ಕ್ರಸಂ | ತಾಲೂಕು | ಜನಸಂಖ್ಯೆ | | |
| | | ಗಂಡು | ಹೆಣ್ಣು | ಒಟ್ಟು |
| ೧ | ಕೊಪ್ಪಳ | ೧,೫೫,೫೪೭ | ೧,೫೧,೫೩೬ | ೩,೦೭,೦೮೩ |
| ೨ | ಕುಷ್ಟಗಿ | ೧,೩೧,೭೩೪ | ೧,೨೮,೧೮೦ | ೨,೫೯,೯೧೪ |
| ೩ | ಗಂಗಾವತಿ | ೧,೭೬,೯೩೮ | ೧,೭೭,೪೩೮ | ೩,೫೪,೩೭೬ |
| ೪ | ಯಲಬುರ್ಗಾ | ೧,೨೭,೬೭೩ | ೧,೨೪,೯೫೫ | ೨,೫೨,೬೨೮ |
| | ಒಟ್ಟು | ೫,೯೧,೮೯೨ | ೫,೮೨,೧೦೯ | ೧೧,೭೪,೦೦೧ |

(ಕೃಪೆ: ೨೦೧೧ ಕೊಪ್ಪಳ ಜಿಲ್ಲಾ ಜನಗಣತಿ ವರದಿ ಕೈಪಿಡಿ)

೨೦೧೧ರ ಜನಗಣತಿಯ ಪ್ರಕಾರ ಕೊಪ್ಪಳ ಜಿಲ್ಲೆಯ ಒಟ್ಟು ೧೧,೭೪,೦೦೧ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ಪುರುಷರು ೫,೯೧,೮೯೨ ಮತ್ತು ೫,೮೨,೧೦೯ ಜನ ಮಹಿಳೆಯರು ಇರುವರು.

ತಾಲೂಕುವಾರು ಜನಸಂಖ್ಯೆಯನ್ನು ಗಮನಿಸಿದರೆ ಕೊಪ್ಪಳ ತಾಲೂಕು ಒಟ್ಟು ೩,೦೭,೦೮೩ ಜನಸಂಖ್ಯೆಯನ್ನು ಹೊಂದಿದ್ದು, ಅದರಲ್ಲಿ ೧,೫೫,೫೪೭ ರಷ್ಟು ಪುರುಷರು ಮತ್ತು ೧,೫೧,೫೩೬ ಜನ ಮಹಿಳೆಯರು ಇದ್ದಾರೆ.

ಕುಷ್ಟಗಿ ತಾಲೂಕು ಒಟ್ಟು ೨,೫೯,೯೧೪ ಜನಸಂಖ್ಯೆಯನ್ನು ಹೊಂದಿದ್ದು, ಇದರಲ್ಲಿ ೧,೩೧,೭೩೪ ಜನ ಪರುರುಷರು ಮತ್ತು ೧,೨೮,೧೮೦ ಜನ ಮಹಿಳೆಯರು ಇದ್ದಾರೆ. ಗಂಗಾವತಿ ತಾಲೂಕು ಒಟ್ಟು ೩,೫೪,೩೭೬ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪುರುಷರು ೧,೭೬,೯೩೮ ಮತ್ತು ೧,೭೭,೪೩೮ ಜನ ಮಹಿಳೆಯರು ಕಂಡು ಬರುತ್ತಾರೆ. ಯಲಬುರ್ಗ ತಾಲೂಕು ಒಟ್ಟು ೨,೫೨,೬೨೮ ಜನಸಂಖ್ಯೆಯನ್ನು ಹೊಂದಿದ್ದು ಇದರಲ್ಲಿ ಪುರುಷರು ೧,೨೭,೬೭೩ ಮತ್ತು ೧,೨೪,೯೫೫ ಜನ ಮಹಿಳೆಯರು ಕಂಡು ಬರುತ್ತಾರೆ.

ಕೋಷ್ಟಕ:೨.೨ ಕೊಪ್ಪಳ ತಾಲೂಕುವಾರು ಜನಸಂಖ್ಯೆ ವಿವರ




## ೨.೩ ದೇವದಾಸಿಯರ ಜನಸಂಖ್ಯೆ

ಕರ್ನಾಟಕದ ಪ್ರಮುಖ ಶಕ್ತಿ ಕೇಂದ್ರಗಳಲ್ಲಿ ಒಂದಾದ ಹುಲುಗಿ ಕ್ಷೇತ್ರವು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಮಧ್ಯ ತುಂಗಾಭದ್ರಾ ನದಿ ದಂಡೆಯ ಮೇಲೆ ಇದೆ. ಹಾಗಾಗಿ ಈ ಪರಿಸರದಲ್ಲಿ ದೇವದಾಸಿ ಪದ್ದತಿಯು ಹೆಚ್ಚಾಗಿ ಕಂಡುಬರುತ್ತಿದೆ. ಇದಲ್ಲದೆ ದೇವದಾಸಿ ಪದ್ಧತಿಯನ್ನು ಪೋಷಣೆ ಮಾಡುತ್ತಿರುವ ಉಚ್ಚೆಂಗಿ ಎಲ್ಲಮ್ಮ, ಮೈಲಾರಲಿಂಗ, ಆಂಜನೇಯ, ಈರಣ್ಣ, ಎಲ್ಲಮ್ಮ ಇತ್ಯಾದಿ ದೈವಗಳ ಪ್ರಭಾವವೂ ದೇವದಾಸಿ ಪದ್ಧತಿ ಬೆಳೆಯಲು ಕಾರಣವಾಗಿವೆ. ಬಹುತೇಕ ಕೆಳಸಮುದಾಯಗಳೇ ಈ ಪದ್ಧತಿಗೆ ಒಳಗಾಗುತ್ತಿವೆ. ಬಹುತೇಕ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಲ್ಲಿ ಈ ಪದ್ಧತಿಯು ಹೆಚ್ಚು ಪ್ರಚಲಿತವಿದೆ. ೨೦೦೭ರ ಸಮೀಕ್ಷೆಯ ಪ್ರಕಾರ ಕರ್ನಾಟಕದ ಕೆಳಗೆ ಸೂಚಿಸಿದ ಜಿಲ್ಲೆಗಳಲ್ಲಿ ದೇವದಾಸಿಯರ ಜನಸಂಖ್ಯೆಯು ಈ ಕೆಳಗಿನಂತಿದೆ.

| ಕೋಷ್ಟಕ : ೨.೩ ದೇವದಾಸಿಯರ ಜಿಲ್ಲಾವಾರು ಜನಸಂಖ್ಯೆ (೧೯೯೩-೯೪) | | |
|---|---|---|
| ಕ್ರಸಂ | ಜಿಲ್ಲೆಗಳು | ದೇವದಾಸಿಯರ ಜನಸಂಖ್ಯೆ |
| ೧ | ಬೆಳಗಾವಿ | ೩೬೦೦ |
| ೨ | ಬಾಗಲಕೋಟೆ | ೪೮೦೪ |
| ೩ | ಬಿಜಾಪುರ | ೧೯೬೪ |
| ೪ | ಬಳ್ಳಾರಿ | ೧೬೩೫ |

| | | |
|---|---|---|
| ೫ | ಕೊಪ್ಪಳ | ೪೮೮೦ |
| ೬ | ರಾಯಚೂರು | ೨೪೯೪ |
| ೭ | ಗುಲಬರ್ಗಾ | ೯೯೧ |
| ೮ | ಧಾರವಾಡ | ೪೮೧ |
| ೯ | ಹಾವೇರಿ | ೬೧೭ |
| ೧೦ | ಗದಗ | ೧೪೦೭ |
| | **ಒಟ್ಟು** | **೨೨,೮೭೩** |

ಕೃಪೆ: ಪ್ರಸನ್ನಕುಮಾರ್:ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು–ಒಂದು ಸಮಾಜಶಾಸ್ತ್ರೀಯ ಅಧ್ಯಯನ (ಬೆಳಗಾವಿ ಜಿಲ್ಲೆ) ಕ.ವಿ.ವಿ, ಹಂಪಿ:೨೦೧೪:೨೬೪

೧೯೯೩–೯೪ನೇ ಸಾಲಿನಲ್ಲಿ ನಡೆಸಿದ ಸಮೀಕ್ಷೆಯಲ್ಲಿ ರಾಜ್ಯದ ೧೦ ಜಿಲ್ಲೆಗಳಲ್ಲಿ ಒಟ್ಟು ೨೨೮೭೩ ದೇವದಾಸಿಯರು ಇರುವುದನ್ನು ದಾಖಲಿಸಿದ್ದಾರೆ. ಇದರಲ್ಲಿ ಬಳ್ಳಾರಿ ಜಿಲ್ಲೆಯು ೧,೬೨೪ ಹಾಗೂ ಕೊಪ್ಪಳವು ೪,೮೮೦ ಜನ ದೇವದಾಸಿಯರನ್ನು ಹೊಂದಿದ್ದವು ಎಂದು ದಾಖಲಾಗಿದೆ.

**ಕೋಷ್ಟಕ:೨.೪ ಕರ್ನಾಟಕ ದೇವದಾಸಿಯರ ಜಿಲ್ಲಾವಾರು ಜನಸಂಖ್ಯೆ (೨೦೦೭–೦೮)**

| ಕ್ರಸಂ | ಜಿಲ್ಲೆಗಳು | ದೇವದಾಸಿಯರ ಜನಸಂಖ್ಯೆ |
|---|---|---|
| ೧ | ಬೆಳಗಾವಿ | ೧೧೨೪ |
| ೨ | ಬಾಗಲಕೋಟೆ | ೩೦೨೩ |
| ೩ | ಬಿಜಾಪುರ | ೨೧೩೯ |
| ೪ | ಬಳ್ಳಾರಿ | ೯೭೩೩ |
| ೫ | ಕೊಪ್ಪಳ | ೧೧೫೫ |
| ೬ | ರಾಯಚೂರು | ೧೪೫೫ |
| ೭ | ಗುಲಬರ್ಗಾ | ೮೬೮ |
| ೮ | ಧಾರವಾಡ | ೨೮೨ |
| ೯ | ಹಾವೇರಿ | ೩೭೩ |
| ೧೦ | ಗದಗ | ೧೪೯೩ |
| ೧೧ | ಶಿವಮೊಗ್ಗ | ೨೪ |
| ೧೨ | ಚಿತ್ರದುರ್ಗ | ೪೦೬ |

| | | |
|---|---|---|
| ೧೩ | ದಾವಣಗೆರೆ | ೭೫೯ |
| ೧೪ | ಯಾದಗಿರಿ | ೭೫೯ |
| | **ಒಟ್ಟು** | **೨೩,೭೮೭** |

ಕೃಪೆ: ಪ್ರಸನ್ನಕುಮಾರ್:ಬದಲಾವಣೆಯ ಹಾದಿಯಲ್ಲಿ ದೇವದಾಸಿಯರು-ಒಂದು ಸಮಾಜಶಾಸ್ತ್ರೀಯ ಅಧ್ಯಯನ (ಬೆಳಗಾವಿ ಜಿಲ್ಲೆ) ಕ.ವಿ.ವಿ, ಹಂಪಿ:೨೦೧೪:೨೬೩

ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ೨೦೦೭-೦೮ ನೇ ಸಾಲಿನಲ್ಲಿ ದೇವದಾಸಿಯರ ಕುರಿತು ನಡೆಸಿದ ಸಮೀಕ್ಷೆಯಿಂದ ರಾಜ್ಯದ ೧೪ ಜಿಲ್ಲೆಗಳಲ್ಲಿನ ಒಟ್ಟು ದೇವದಾಸಿಯರ ಸಂಖ್ಯೆಯು ೨೩೭೮೭ ಇದೆ. ೧೯೯೩-೯೪ ನೇ ಸಾಲಿನ ದೇವದಾಸಿಯರ ಸಂಖ್ಯೆಗಿಂತ ೨೦೦೭-೦೮ರಲ್ಲಿ ದೇವದಾಸಿಯರ ಸಂಖ್ಯೆಯು ಹೆಚ್ಚಾಗಿದೆ. ಅಂದರೆ ದಶಕದಿಂದ ದಶಕಕ್ಕೆ ಕೇವಲ ಕರ್ನಾಟಕದ ಜನಸಂಖ್ಯೆ ಮಾತ್ರ ಹೆಚ್ಚಳವಾಗುವಂತೆ ಇಲ್ಲಿಯ ಜನರಲ್ಲಿ ಹಸಿವು, ಬಡತನ, ಮೌಢ್ಯತೆಗಳೂ ಹೆಚ್ಚಾಗುತ್ತಿದೆ. ಹಾಗೆಯೇ ದೇವದಾಸಿಯರ ಪ್ರಮಾಣವೂ ಹೆಚ್ಚಾಗುತ್ತಿದೆ ಎಂಬುದು ತಿಳಿಯುತ್ತದೆ. ವಾಸ್ತವವಾಗಿ ಸಮೀಕ್ಷೆಗಿಂತ ಹೆಚ್ಚಿನ ಪ್ರಮಾಣದಲ್ಲಿಯೇ ದೇವದಾಸಿಯರಿರುವರು. ಸರ್ಕಾರದ ಕಾನೂನುಗಳಿಗೆ ಹೆದರಿಯೋ, ಇಲ್ಲವೇ ಸಾರ್ವಾತ್ರಿಕವಾಗಿ ಗುರುತಿಸಿಕೊಳ್ಳಲು ಹಿಂಜರಿದೋ ಬಹುತೇಕ ದೇವದಾಸಿಯರು ಸಮೀಕ್ಷೆಯಿಂದ ಹೊರಗುಳಿದಿರುವ ಸಾಧ್ಯತೆ ಇದೆ.

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿರುವ ದೇವದಾಸಿಯರು ಎಷ್ಟಿರುವರೆಂದು ದೇವದಾಸಿ ಪುನರ್ವಸತಿ ಯೋಜನಾ ಕಛೇರಿಯ ೨೦೦೭-೦೮ರ ಸಾಲಿನ ದೇವದಾಸಿಯರ ಜನಸಂಖ್ಯೆಯ ವಿವರ ಈ ಕೆಳಗೆ ನೀಡಲಾಗಿದೆ.

**ಕೋಷ್ಟಕ ೨.೫ ಬಳ್ಳಾರಿ ಜಿಲ್ಲೆಯ ತಾಲೂಕುವಾರು ದೇವದಾಸಿಯರ ಜನಸಂಖ್ಯೆ :೨೦೦೭-೦೮**

| **ಕ್ರಸಂ** | **ತಾಲೂಕು** | **ದೇವದಾಸಿಯರ ಸಂಖ್ಯೆ** |
|---|---|---|
| ೧ | ಹಡಗಲಿ | ೯೭೮ |
| ೨ | ಹ.ಬೊ.ಹಳ್ಳಿ | ೧೮೨೧ |
| ೩ | ಹೊಸಪೇಟೆ | ೨೫೯೬ |
| ೪ | ಸಿರುಗುಪ್ಪ | ೧೦೬೯ |
| ೫ | ಬಳ್ಳಾರಿ | ೧೨೭೯ |
| ೬ | ಸಂಡೂರು | ೯೬೮ |
| ೭ | ಕೂಡ್ಲಿಗಿ | ೧೦೨೨ |
| | **ಒಟ್ಟು** | **೯೭೩೩** |

(ಮೂಲ: ದೇವದಾಸಿಯರ ಪುರ್ನವಸತಿ ಯೋಜನಾ ಕಛೇರಿ, ಬಳ್ಳಾರಿ)

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ದೇವದಾಸಿಯರ ಜನಸಂಖ್ಯೆಯು ೯೭೮ ಇದೆ. ಅದೇ ರೀತಿ ಹಗರಿಬೊಮ್ಮನಹಳ್ಳಿಯಲ್ಲಿ ೧,೮೨೧, ಹೊಸಪೇಟೆಯಲ್ಲಿ ೨,೫೯೬, ಸಿರುಗುಪ್ಪದಲ್ಲಿ ೧,೦೬೯, ಬಳ್ಳಾರಿಯಲ್ಲಿ ೧,೨೭೯, ಸಂಡೂರಿನಲ್ಲಿ ೯೬೮, ಕೂಡ್ಲಿಗಿಯಲ್ಲಿ ೧,೦೨೨ ದೇವದಾಸಿಯರಿದ್ದು ಬಳ್ಳಾರಿ ಜಿಲ್ಲೆಯಲ್ಲಿರುವ ದೇವದಾಸಿಯರ ಒಟ್ಟು ಸಂಖ್ಯೆ ೯,೭೩೩ ಎಂದು ವರದಿಯಾಗಿದೆ.

**ಕೋಷ್ಟಕ:೨.೬ ಕೊಪ್ಪಳ ಜಿಲ್ಲೆಯಲ್ಲಿರುವ ತಾಲೂಕುವಾರು ದೇವದಾಸಿಯರ ವಿವರ**

| ಕ್ರಸಂ | ತಾಲೂಕು | ದೇವದಾಸಿಯರ ಸಂಖ್ಯೆ |
|---|---|---|
| ೧ | ಕೊಪ್ಪಳ | ೪೦೭ |
| ೨ | ಕುಷ್ಟಗಿ | ೧೮೦ |
| ೩ | ಗಂಗಾವತಿ | ೪೦೦ |
| ೪ | ಯಲಬುರ್ಗಾ | ೧೬೮ |
| | ಒಟ್ಟು | ೧,೧೫೫ |

(ಮೂಲ: ದೇವದಾಸಿಯರ ಪುರ್ನವಸತಿ ಯೋಜನಾ ಕಛೇರಿ, ಕೊಪ್ಪಳ)

ಕೊಪ್ಪಳ ಜಿಲ್ಲೆಯ ಕೊಪ್ಪಳ ತಾಲೂಕಿನ ದೇವದಾಸಿಯರ ಜನಸಂಖ್ಯೆಯು ೪೦೭ ಇದೆ. ಅದೇ ರೀತಿಯಗಿ ಕುಷ್ಟಗಿಯಲ್ಲಿ ೧೮೦, ಗಂಗಾವತಿಯಲ್ಲಿ ೪೦೦, ಯಲಬುರ್ಗಾದಲ್ಲಿ ೧೬೮ ದೇವದಾಸಿಯರಿದ್ದು ಕೊಪ್ಪಳ ಜಿಲ್ಲೆಯಲ್ಲಿರುವ ದೇವದಾಸಿಯರ ಒಟ್ಟು ಸಂಖ್ಯೆ ೧,೧೫೫ ಎಂದು ವರದಿಯಾಗಿದೆ.

**ಭಾರತದಲ್ಲಿ ಮಹಿಳಾ ಲೈಂಗಿಕ ಕಾರ್ಯಕರ್ತರ ಪ್ರಮಾಣ**

"೧೯೯೭ರಲ್ಲಿ ದೇಶದಲ್ಲಿ ಅಂದಾಜು ಎರಡು ದಶಲಕ್ಷ ಮಹಿಳಾ ಲೈಂಗಿಕ ಕಾರ್ಯಕರ್ತರು ಇದ್ದರು. ೨೦೦೭ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು ಭಾರತದಲ್ಲಿ ಮೂರು ದಶಲಕ್ಷ ಮಹಿಳಾ ಲೈಂಗಿಕ ಕಾರ್ಯಕರ್ತರ ಉಪಸ್ಥಿತಿಯನ್ನು ವರದಿ ಮಾಡಿತು. ಇದರಲ್ಲಿ ೩೫.೪೭ರಷ್ಟು ಜನರು ಮೊದಲು ವ್ಯಾಪಾರಕ್ಕೆ ಪ್ರವೇಶ ಮಾಡಿದರು. ೧೯೯೭ ಹಾಗೂ ೨೦೦೪ರ ಮಧ್ಯದಲ್ಲಿ ವೇಶ್ಯೆಯರ ಸಂಖ್ಯೆಯು ಶೇಕಡ ೫೦ರಷ್ಟು ಅಧಿಕವಾಗಿದೆ ಎಂದು ಗುರುತಿಸಲಾಗಿದೆ"[೬]

ಇನ್ನು ಭಾರತದಲ್ಲಿ ಉತ್ತರ ಭಾರತಕ್ಕಿಂತ ದಕ್ಷಿಣ ಭಾರತದಲ್ಲಿಯೇ ಲೈಂಗಿಕ ಕಾರ್ಯಕರ್ತರು ಹೆಚ್ಚಿನ ಪ್ರಮಾಣದಲ್ಲಿರುವರು ಎಂದು ಅಧ್ಯಯನ ವರದಿಗಳು ತಿಳಿಸುತ್ತವೆ. ೨೦೦೯ರಲ್ಲಿ ಎಚ್ ಐ ವಿ/ಏಡ್ಸ್ ನಿಯಂತ್ರಣಾ ಸಂಸ್ಥೆಯು ನಡೆಸಿದ ಸಮೀಕ್ಷೆಯ ಪ್ರಕಾರ ದಕ್ಷಿಣ ಭಾರತದ ರಾಜ್ಯಗಳಲ್ಲಿರುವ ಲೈಂಗಿಕ ಕಾರ್ಯಕರ್ತರ ರಾಜ್ಯವಾರು ಜನಸಂಖ್ಯೆ ಈ ಕೆಳಗೆ ನೀಡಲಾಗಿದೆ.

| ಕೋಷ್ಟಕ:೨.೭ ರಾಜ್ಯವಾರು ಮಹಿಳಾ ಲೈಂಗಿಕ ಕಾರ್ಯಕರ್ತರ ಅಂದಾಜು ಜನಸಂಖ್ಯೆ (೨೦೦೯) | | | | |
|---|---|---|---|---|
| ಕ್ರಸಂ | ರಾಜ್ಯ | ಮಹಿಳಾ ಲೈಂಗಿಕ ಕಾರ್ಯಕರ್ತರ ಜನಸಂಖ್ಯೆ | | |
| | | ನಗರ | ಗ್ರಾಮೀಣ | ಒಟ್ಟು |
| ೧ | ಆಂಧ್ರಪ್ರದೇಶ | ೧,೫೬,೨೦೫ | ೧,೩೬,೭೪೪ | ೨,೯೨,೯೪೯ |
| ೨ | ಕರ್ನಾಟಕ | ೯೬,೦೫೭ | ೮೬,೩೮೬ | ೧,೮೨,೪೪೩ |
| ೩ | ಮಹಾರಾಷ್ಟ್ರ | ೭೯,೫೮೬ | ೮೫,೪೧೬ | ೧,೬೫,೦೦೨ |
| ೪ | ತಮಿಳುನಾಡು | ೭೦,೭೩೨ | ೪೩,೫೪೩ | ೧,೧೪,೨೭೫ |
| ೫ | ಪಶ್ಚಿಮ ಬಂಗಾಳ | ೫೭,೮೫೦ | ೩೧,೨೩೫ | ೮೯,೦೮೫ |
| | ಒಟ್ಟು | ೪,೬೦,೪೩೦ | ೩,೮೩,೩೭೪ | ೮,೪೩,೮೦೪ |

ಕೃಪೆ: ಏಡ್ಸ್ ನಿಯಂತ್ರಣ ಮಂಡಳಿಯ ವರದಿ:೨೦೦೯

**ಕೋಷ್ಟಕ:೨.೭ ರಾಜ್ಯವಾರು ಮಹಿಳಾ ಲೈಂಗಿಕ ಕಾರ್ಯಕರ್ತರ ಅಂದಾಜು ಜನಸಂಖ್ಯೆ (೨೦೦೯)**




"೨೦೦೯ರ ಲೈಂಗಿಕ ಕಾರ್ಯಕರ್ತರ ಗಣತಿಯಲ್ಲಿ ಕರ್ನಾಟಕವನ್ನೂ ಸೇರಿ ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಹಾಗೂ ಪಶ್ಚಿಮಬಂಗಾಳ ರಾಜ್ಯಗಳಲ್ಲಿ ಒಟ್ಟು ೮,೪೩,೮೦೪ ಮಹಿಳಾ ಲೈಂಗಿಕ ಕಾರ್ಯಕರ್ತೆಯರಿರುವುದಾಗಿ ಅಂದಾಜಿಸಲಾಗಿದೆ. ಇದರಲ್ಲಿ ಆಂಧ್ರಪ್ರದೇಶದಲ್ಲಿ ೨,೯೨,೯೪೯ ಲೈಂಗಿಕ ಕಾರ್ಯಕರ್ತೆಯರಿರುವುದಾಗಿ ಅಂದಾಜಿಸಲಾಗಿದೆ. ನಗರ ಪ್ರದೇಶದಲ್ಲಿ ೧,೫೬,೨೦೫ ವೇಶ್ಯೆಯರಿದ್ದರೆ ಗ್ರಾಮೀಣ ಪ್ರದೇಶದಲ್ಲಿ ೧,೩೬,೭೪೪ ವೇಶ್ಯೆಯರಿರುವರೆಂದು ಹೇಳಲಾಗಿದೆ"[೮]

| ಕೋಷ್ಟಕ:೨.೮ ಕರ್ನಾಟಕದ ಜಿಲ್ಲಾವಾರು ವೇಶ್ಯೆಯರ ಜನಸಂಖ್ಯೆಯ ವಿವರ | | | |
|---|---|---|---|
| ಕ್ರ.ಸಂ | ಜಿಲ್ಲೆಗಳು | ಏಡ್ಸ್ ನಿಯಂತ್ರಣ ಸಂಸ್ಥೆಯ ಮಾಹಿತಿ ಪ್ರಕಾರ ಲೈಂಗಿಕ ಕಾರ್ಯಕರ್ತರ ಸಂಖ್ಯೆ | ಜಯಮಾಲ ವರದಿಯ ಪ್ರಕಾರ ಲೈಂಗಿಕ ಕಾರ್ಯಕರ್ತರ ಸಂಖ್ಯೆ |
| ೧ | ಉಡುಪಿ | ೫೪೨ | ೫೪೨ |
| ೨ | ಉತ್ತರಕನ್ನಡ | ೨,೩೬೯ | ೨,೩೬೯ |
| ೩ | ಕಲಬುರ್ಗಿ | ೩,೨೩೫ | ೨,೭೨೦ |
| ೪ | ಕೊಡಗು | ೫೫೩ | ೫೦೦ |
| ೫ | ಕೊಪ್ಪಳ | ೧,೭೨೩ | ೧,೫೨೭ |
| ೬ | ಕೋಲಾರ | ೧,೮೨೫ | ೧,೮೨೫ |
| ೭ | ಗದಗ | ೨,೧೦೮ | ೨,೧೦೮ |
| ೮ | ಚಾಮರಾಜನಗರ | ೭೭೪ | ೭೭೪ |
| ೯ | ಚಿಕ್ಕಬಳ್ಳಾಪುರ | ೧,೬೦೦ | ೧,೫೯೨ |
| ೧೦ | ಚಿಕ್ಕಮಗಳೂರು | ೧,೭೪೪ | ೧,೭೪೮ |
| ೧೧ | ಚಿತ್ರದುರ್ಗ | ೩,೧೧೭ | ೩,೮೬೮ |
| ೧೨ | ತುಮಕೂರು | ೨,೫೩೮ | ೨,೫೩೮ |
| ೧೩ | ದಕ್ಷಿಣಕನ್ನಡ | ೨,೧೮೬ | ೨,೧೮೬ |
| ೧೪ | ದಾವಣಗೆರೆ | ೨,೪೮೭ | ೨,೪೮೭ |
| ೧೫ | ಧಾರವಾಡ | ೪,೮೪೧ | ೪,೮೪೧ |
| ೧೬ | ಬಳ್ಳಾರಿ | ೫,೫೨೦ | ೫,೫೨೦ |
| ೧೭ | ಬಾಗಲಕೋಟೆ | ೫,೦೬೭ | ೫,೦೬೭ |
| ೧೮ | ಬೀದರ್ | ೧,೧೩೩ | ೧,೧೪೧ |
| ೧೯ | ಬೆಳಗಾವಿ | ೧೦,೬೪೪ | ೧೦,೬೪೪ |
| ೨೦ | ಬೆಂಗಳೂರು ನಗರ | ೨೧,೩೨೭ | ೨೧,೩೨೭ |
| ೨೧ | ಬೆಂಗಳೂರು ಗ್ರಾಮಾಂತರ | ೧,೭೮೦ | ೧,೪೭೧ |

| | | | |
|---|---|---|---|
| ೨೨ | ಮೈಸೂರು | ೧,೯೮೮ | ೨೦೦೦ |
| ೨೩ | ಮಂಡ್ಯ | ೧,೨೨೧ | ೧,೨೨೧ |
| ೨೪ | ಯಾದಗಿರಿ | ೧,೦೫೬ | ೧,೩೯೬ |
| ೨೫ | ರಾಮನಗರ | ೧,೦೯೩ | ೧,೦೫೦ |
| ೨೬ | ರಾಯಚೂರು | ೨,೪೮೩ | ೪,೨೨೮ |
| ೨೭ | ವಿಜಯಪುರ | ೫,೩೩೬ | ೫,೩೩೬ |
| ೨೮ | ಶಿವಮೊಗ್ಗ | ೩,೨೭೭ | ೩,೨೭೭ |
| ೨೯ | ಹಾಸನ | ೧,೪೨೦ | ೩,೪೪೯ |
| ೩೦ | ಹಾವೇರಿ | ೧,೮೮೧ | ೧,೮೮೧ |
| | **ಒಟ್ಟು** | **೯೬,೮೭೮** | **೧,೦೦,೬೭೬** |

(ಕೃಪೆ: ಪ್ರಜಾವಾಣಿ ವರದಿ; ಜುಲೈ, ೧೫, ೨೦೧೭)

ಲೈಂಗಿಕ ಕಾರ್ಯಕರ್ತರಿಗೆ ಸಂಬಂಧಿಸಿದಂತೆ ಏಡ್ಸ್ ನಿಯಂತ್ರಣ ಸಂಸ್ಥೆ ಹಾಗೂ ಜಯಮಾಲ ಅವರು ಮಹಿಳಾ ಲೈಂಗಿಕ ಕಾರ್ಯಕರ್ತೆಯರ ಕುರಿತು ನಡೆಸಿದ ಸಮೀಕ್ಷೆಯಲ್ಲಿ ಏಡ್ಸ್ ನಿಯಂತ್ರಣ ಸಂಸ್ಥೆಯ ಪ್ರಕಾರ ಅವರಿಗೆ ದೊರೆತ ಲೈಂಗಿಕ ಕಾರ್ಯಕರ್ತೆಯರ ಒಟ್ಟು ಸಂಖ್ಯೆ ೯೬,೮೭೮, ಜಯಮಾಲ ಅವರ ಅಧ್ಯಯನ ಸಮಿತಿಗೆ ದೊರೆತ ಲೈಂಗಿಕ ಕಾರ್ಯಕರ್ತರ ಒಟ್ಟು ಸಂಖ್ಯೆ ೧,೦೦,೬೭೯, ಅಂದರೆ ಎರಡು ಏಡ್ಸ್ ನಿಯಂತ್ರಣ ಸಂಸ್ಥೆ ಹಾಗೂ ಜಯಮಾಲ ಅಧ್ಯಯನ ಸಮಿತಿಯವರು ನಡೆಸಿದ ಸಮೀಕ್ಷೆಯಲ್ಲಿ ದೊರೆತ ಸಂಖ್ಯೆಯಲ್ಲಿ ವ್ಯತ್ಯಾಸವಿದೆ. ಈ ಎರಡೂ ಅಂಕಿಅಂಶಗಳನ್ನು ತಾಳೆನೋಡಿದಾಗ ಎರಡರ ಮಧ್ಯೆ ಲೈಂಗಿಕ ಕಾರ್ಯಕರ್ತರ ಸಂಖ್ಯೆಗಳಲ್ಲಿ ೩೮೦೧ರಷ್ಟು ವ್ಯತ್ಯಾಸವಿರುವುದು ತಿಳಿದುಬರುವುದು.

ಕಲಬುರ್ಗಿ, ಕೊಡಗು, ಕೊಪ್ಪಳ, ಚಿಕ್ಕಬಳ್ಳಾಪುರ, ರಾಮನಗರ, ಜಿಲ್ಲೆಗಳಲ್ಲಿ ಏಡ್ಸ್ ನಿಯಂತ್ರಣ ಸಂಸ್ಥೆಗೆ ದೊರೆತಿರುವ ಲೈಂಗಿಕ ಕಾರ್ಯಕರ್ತರಿಗಿಂತ ಕಡಿಮೆ ಸಂಖ್ಯೆಯಲ್ಲಿ ಜಯಮಾಲ ಅಧ್ಯಯನ ಸಮಿತಿಗೆ ಲೈಂಗಿಕ ಕಾರ್ಯಕರ್ತೆಯರು ಕಂಡುಬಂದಿದ್ದಾರೆ. ಈ ಐದು ಜಿಲ್ಲೆಗಳಿಂದ ಏಡ್ಸ್ ನಿಯಂತ್ರಣ ಸಂಸ್ಥೆಗೆ ಒಟ್ಟು ೮,೨೦೪ ಲೈಂಗಿಕ ಕಾರ್ಯಕರ್ತರು ದೊರೆತರೆ ಜಯಮಾಲ ಅಧ್ಯಯನ ಸಮಿತಿಗೆ ಒಟ್ಟು ೭,೩೮೯ ಲೈಂಗಿಕ ಕಾರ್ಯಕರ್ತರು ದೊರೆತಿದ್ದಾರೆ.

ಚಿಕ್ಕಮಗಳೂರು, ಚಿತ್ರದುರ್ಗ, ಮೈಸೂರು, ಯಾದಗಿರಿ, ರಾಯಚೂರು, ಹಾಸನ ಜಿಲ್ಲೆಗಳಲ್ಲಿ ಏಡ್ಸ್ ನಿಯಂತ್ರಣ ಸಂಸ್ಥೆಗಿಂತ ಜಯಮಾಲ ಅಧ್ಯಯನ ಸಮಿತಿ ಹೆಚ್ಚಿನ ಲೈಂಗಿಕ ಕಾರ್ಯಕರ್ತರನ್ನು ಗುರುತಿಸಿರುವರು. ಏಡ್ಸ್ ನಿಯಂತ್ರಣ ಸಂಸ್ಥೆಗೆ ಒಟ್ಟು ೧೧,೮೧೮ ಲೈಂಗಿಕ ಕಾರ್ಯಕರ್ತರು

ದೊರೆತರೆ ಜಯಮಾಲ ಅಧ್ಯಯನ ಸಮಿತಿಗೆ ಒಟ್ಟು ೧೬,೬೪೯ ಲೈಂಗಿಕ ಕಾರ್ಯಕರ್ತರು ದೊರೆತಿರುವರು.

ಕಡಿಮೆ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಲೈಂಗಿಕ ಕಾರ್ಯಕರ್ತರು ದೊರೆತ ಹನ್ನೊಂದು ಜಿಲ್ಲೆಗಳ ಹೊರತಾಗಿ ಇನ್ನು ೧೯ ಜಿಲ್ಲೆಗಳಲ್ಲಿ ಎರಡರ ಸಮೀಕ್ಷೆಯು ಸಮಾನ ಸಂಖ್ಯೆಯಲ್ಲಿ ಲೈಂಗಿಕ ಕಾರ್ಯಕರ್ತರಿರುವುದಾಗಿ ಹೇಳಿದೆ.

ಒಟ್ಟಾರೆ ಕರ್ನಾಟಕದ ಬೆಂಗಳೂರು ಜಿಲ್ಲೆ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಅಧಿಕ ಲೈಂಗಿಕ ಕಾರ್ಯಕರ್ತರು ಸಮೀಕ್ಷೆಯಲ್ಲಿ ದೊರೆತರೆ ಅತ್ಯಂತ ಕಡಿಮೆ ಲೈಂಗಿಕ ಕಾರ್ಯಕರ್ತರು ಕೊಡಗಿನಲ್ಲಿ ಕಂಡುಬಂದಿದ್ದಾರೆ. ಪ್ರಾಯಶಃ ಈ ರೀತಿ ಲೈಂಗಿಕ ಕಾರ್ಯಕರ್ತರ ಸಂಖ್ಯೆಯಲ್ಲಿ ವ್ಯತ್ಯಾಸ ಬರಲು ಕಾರಣಗಳೆಂದರೆ ಲೈಂಗಿಕ ಕಾರ್ಯಕರ್ತರು ಒಂದೇ ಕಡೆ ಇದ್ದು ವೃತ್ತಿ ಮಾಡುವುದಿಲ್ಲ. ಗಿರಾಕಿಗಳು ಹೆಚ್ಚಿನ ಪ್ರಮಾಣದಲ್ಲಿ ಎಲ್ಲಿ ದೊರೆಯುತ್ತಾರೋ ಅಲ್ಲಿಗೆ ತಾತ್ಕಾಲಿಕವಾಗಿ ವಲಸೆ ಹೋಗುತ್ತಿರುತ್ತಾರೆ. ಎರಡನೇ ಕಾರಣವೆಂದರೆ ಎಷ್ಟೋ ವೇಳೆ ಸಮೀಕ್ಷೆಗೆ ಹೋದಾಗ ಲೈಂಗಿಕ ಕಾರ್ಯಕರ್ತೆಯರು ತಾವು ಲೈಂಗಿಕ ವೃತ್ತಿಯಲ್ಲಿ ತೊಡಗಿದವರಲ್ಲ ಎಂಬಂತೆ ವರ್ತಿಸಿ ಸಮೀಕ್ಷೆದಾರರ ದಾರಿ ತಪ್ಪಿಸುವ ಸಾಧ್ಯತೆಯೂ ಇದೆ. ಒಂದು ಅಂದಾಜಿನ ಪ್ರಕಾರ ಈ ಎರಡೂ ಸಮೀಕ್ಷೆಗಳಿಗೆ ದೊರೆತ ಲೈಂಗಿಕ ಕಾರ್ಯಕರ್ತರಿಗಿಂತ ಹತ್ತುಪಟ್ಟು ಹೆಚ್ಚು ಮಹಿಳೆಯರು ಲೈಂಗಿಕ ವೃತ್ತಿಯಲ್ಲಿ ನಿರತವಾಗಿರುವುದಾಗಿ ಅಂದಾಜಿಸಲಾಗಿದೆ. ಇವರು ಸಮೀಕ್ಷೆಗೆ ದೊರೆಯದೆ ತೆರೆಮರೆಯ ಹಿಂಭಾಗದಲ್ಲಿಯೇ ಲೈಂಗಿಕ ವೃತ್ತಿ ಮಾಡುವವರಾಗಿರುವರು.

**ಕೊನೆ ಟಿಪ್ಪಣಿಗಳು**

೧ ಸಾವಿತ್ರಿ ಕೆ.ಎಂ, ಕುಮ್ಮಟದುರ್ಗ ಪರಿಸರದ ಕುಮಾರರಾಮನ ಹಬ್ಬ, ೨೦೦೨, ಪುಟ –೨೪

೨ ಬಳ್ಳಾರಿ ಜಿಲ್ಲಾ ಗೆಜೆಟಿಯರ ೧೯೦೪, ಪುಟ –೪೫

೩ ವಿರೂಪಾಕ್ಷಿ ಪೂಜಾರಿಹಳ್ಳಿ, ಬಳ್ಳಾರಿ ಜಿಲ್ಲೆಯಲ್ಲಿನ ಕಲೆಕ್ಟರ್‌ಗಳ ಆಳ್ವಿಕೆ, ಕ.ವಿ.ವಿ, ೨೦೧೨ ಪುಟ –೮೪

೪ ಚಂದ್ರಶೇಖರ್ ಟಿ.ಆರ್, ಬಡತನ,೧೯೯೮, ಪುಟ –೨೧

೫ ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರೋದಯದ ಮೈಲಿಗಲ್ಲುಗಳು: ಎಸ್.ಆರ್.ರಾಮಸ್ವಾಮಿ ಅವರ (ಲೇಖನ) ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ, ೧೯೯೮, ಪುಟ –೧೯೫

೬ ಗೆಜೆಟೆಡ್ ಆಫ್ ಇಂಡಿಯಾ, ೧೯೭೨, ಪುಟ –೮೪

೭ ಕೊಪ್ಪಳ ಜಿಲ್ಲಾ ೨೦೧೧ ಜನಗಣತಿ ವರದಿ ಕೈಪಿಡಿ, ೨೦೧೨

೮ ಪ್ರಜಾವಾಣಿ ದಿನಪತ್ರಿಕೆ ವರದಿ: ಜುಲೈ, ೧೫, ೨೦೧೭

# ಅಧ್ಯಾಯ: ಮೂರು
# ವೇಶ್ಯಾವಾಟಿಕೆಯ ಪರಿಕಲ್ಪನೆ ಹಾಗೂ ಪ್ರಾಚೀನತೆ

೩.೧ ವೇಶ್ಯಾವಾಟಿಕೆಯ ಪರಿಕಲ್ಪನೆ

೩.೨ ವೇಶ್ಯೆ ಪದದ ಅರ್ಥ

೩.೩ ವೇಶ್ಯಾವಾಟಿಕೆ ಪದ್ಧತಿಯ ಪ್ರಾಚೀನತೆ

೩.೪ ಭಾರತದಲ್ಲಿ ವೇಶ್ಯಾ ಪದ್ಧತಿ

೩.೫ ಸಾಹಿತ್ಯ ಕೃತಿಗಳಲ್ಲಿ ದೊರೆಯುವ ವೇಶ್ಯಾವಾಟಿಕೆಯ ವಿವರಗಳು

೩.೬ ಶಾಸನಗಳಲ್ಲಿ ವೇಶ್ಯೆಯರ ಉಲ್ಲೇಖ

# ಅಧ್ಯಾಯ : ಮೂರು

# ವೇಶ್ಯಾವಾಟಿಕೆಯ ಪರಿಕಲ್ಪನೆ ಹಾಗೂ ಪ್ರಾಚೀನತೆ

ವೇಶ್ಯಾವಾಟಿಕೆ ಪ್ರಪಂಚದಲ್ಲಿ ಬೆಳೆದು ಬಂದ ಅನಿಷ್ಟ ಪದ್ಧತಿಗಳಲ್ಲಿ ಒಂದು. ಭಾರತವಲ್ಲದೇ ಪಶ್ಚಿಮಏಷ್ಯಾ, ಬ್ಯಾಬಿಲೋನಿಯ, ಪೂರ್ವಪ್ರಾಂತ್ಯ, ಮಧ್ಯಅಮೇರಿಕಾ, ಪಶ್ಚಿಮಆಫ್ರಿಕಾ, ಸಿರಿಯಾ, ಮಲೇಷಿಯಾ, ಅರೇಬಿಯಾ, ಈಜಿಪ್ಟ್, ಗ್ರೀಸ್ ಮತ್ತು ರೋಮ್ ಮೊದಲಾದ ದೇಶಗಳಲ್ಲಿ ವೇಶ್ಯಾಪದ್ಧತಿ ಅಸ್ತಿತ್ವದಲ್ಲಿ ಇತ್ತೆಂಬುದನ್ನು ಗ್ರೀಸ್ ಮತ್ತು ರೋಮ್‌ನ ಇತಿಹಾಸಕಾರರು, ಸಾಹಿತಿಗಳು, ಪ್ರವಾಸಿ ಬರಹಗಾರರು ತಮ್ಮ ಬರಹಗಳಲ್ಲಿ ಆ ಮಾಹಿತಿಗಳನ್ನು ಪ್ರಾಕ್ತನ ಸಾಕ್ಷ್ಯಧಾರಗಳೊಂದಿಗೆ ತುಲನೆ ಮಾಡಿ ಅಧ್ಯಯನ ಮಾಡಿದಾಗ ಈ ಪದ್ಧತಿ ಬಹು ಹಿಂದಿನಿಂದಲೂ ಅಸ್ತಿತ್ವದಲ್ಲಿತ್ತು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಸ್ಪಷ್ಟವಾಗುತ್ತದೆ. ಆರಂಭದಲ್ಲಿ ಧರ್ಮ–ದೇವರುಗಳ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದ ಈ ಪದ್ಧತಿ ಕ್ರಮೇಣ ಸಾಮಾಜಿಕ ಸ್ವರೂಪವನ್ನು ತಾಳಿ ಮುಂದುವರಿದು ಅಂಧಶ್ರದ್ಧೆಯ ಅನಿಷ್ಟ ಪದ್ಧತಿಯಂತೆ ಇಂದಿಗೂ ಅಸ್ತಿತ್ವದಲ್ಲಿದೆ. ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಪ್ರಾಚೀನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಈ ಪದ್ಧತಿಯ ಮೂಲ ಸ್ವರೂಪವೇನು? ಅದರ ವಿವಿಧ ಆಯಾಮಗಳೇನು? ಅದರ ಅರ್ಥ, ಪರಿಕಲ್ಪನೆ ಮತ್ತು ಪ್ರಾಚೀನತೆ ಹಾಗೂ ಈ ಪದ್ಧತಿಯನ್ನು ಪುಷ್ಟೀಕರಿಸುತ್ತ ಬಂದಿರುವ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಂಗತಿಗಳನ್ನು ಈ ಕೆಳಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ೩.೧ ವೇಶ್ಯಾವಾಟಿಕೆಯ ಪರಿಕಲ್ಪನೆ

ಪ್ರಪಂಚೀಕರಣದ ಈ ಹೊತ್ತಿನಲ್ಲಿ ವೇಶ್ಯಾವಾಟಿಕೆಯು ಜಗತ್ತಿನೆಲ್ಲೆಡೆ ತನ್ನ ಕರಾಳತೆಯ ಬಾಹುಗಳನ್ನು ಚಾಚಿಕೊಂಡಿದೆ. ಹಾಗಾಗಿಯೇ ಪ್ರಪಂಚದಲ್ಲಿ ನಾವಿಂದು ವೇಶ್ಯಾವೃತ್ತಿ ಇರದ, ವೇಶ್ಯೆಯರಿಲ್ಲದ, ವ್ಯಭಿಚಾರವಿಲ್ಲದ ದೇಶಗಳನ್ನು ಕಾಣಲು ಸಾಧ್ಯವಿಲ್ಲದಂತಾಗಿದೆ. ಔದ್ಯೋಗೀಕರಣದ ಪರಿಣಾಮವಾಗಿ ದಿನೇ ದಿನೇ ನಗರಗಳು ಅಡ್ಡಾದಿಡ್ಡಿಯಾಗಿ ಬೆಳೆಯುತ್ತಿದ್ದು, ವೇಶ್ಯಾವೃತ್ತಿಗೆ ಹೆಚ್ಚು ಅವಕಾಶಗಳನ್ನು ಕಲ್ಪಿಸಿವೆ. ಹಾಗಾಗಿ ಇಂದು ನಗರಗಳಲ್ಲಿ ಇತರ ಉದ್ಯೋಗಗಳಂತೆ ವೇಶ್ಯಾವೃತ್ತಿ ಒಂದು ಪ್ರಮುಖ

ಉದ್ಯಮವಾಗಿ ಬೆಳೆಯತೊಡಗಿದೆ. ಆರ್ಥಿಕವಾಗಿ ಸಂಕಷ್ಟದಲ್ಲಿರುವ, ನಿರುದ್ಯೋಗ ಮಹಿಳೆಯರಿಗೆ ವೇಶ್ಯಾವಾಟಿಕೆಯೆಂಬುದು ಬಂಡವಾಳ ತೊಡಗಿಸಬೇಕಿಲ್ಲದ, ಲಾಭದಾಯಕ ಉದ್ಯಮವಾಗಿದೆ. ನಗರಗಳಲ್ಲಿನ ಜನಸಂಖ್ಯೆ ಹೆಚ್ಚಿದಂತೆ ಅಲ್ಲಿರುವ ವೇಶ್ಯೆಯರ ಸಂಖ್ಯೆಯೂ ಹೆಚ್ಚುತ್ತಿದೆ. ವೇಶ್ಯೆಯರನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಅವರ ಮೂಲಕ ಹಣ ಸಂಪಾದಿಸುವ ವೇಶ್ಯಾವಾಟಿಕೆ ಅಡ್ಡೆಗಳು, ಹೋಟೆಲ್‌ಗಳು, ವಸತಿ ಗೃಹಗಳು ಇಂದು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿವೆ. ನಗರಗಳ ನಿರ್ದಿಷ್ಟ ಮನೆ, ವಸತಿ ಗೃಹ, ಬೀದಿ ಬಡಾವಣೆಗಳು ವೇಶ್ಯಾವೃತ್ತಿಗೆ ಮನೆ ಮಾತಾಗಿವೆ. ಜಗತ್ತಿನ ಅತ್ಯಂತ ಹಳೆಯ ಉದ್ಯೋಗಗಳಲ್ಲಿ ವೇಶ್ಯಾವೃತ್ತಿಯೂ ಒಂದಾಗಿದ್ದು, ಇದು ತುಂಬಾ ಪ್ರಾಚೀನವಾದ ಸಾಮಾಜಿಕ ಸಮಸ್ಯೆಯಾಗಿದೆ. ಇದು ಪುರುಷ–ಸ್ತ್ರೀ ನಡುವಿನ ಸಂಬಂಧಗಳಿಗೆ ಸಂಬಂಧಿಸಿದ್ದು, ಆರಂಭದಿಂದಲೂ ಸಾರ್ವತ್ರಿಕವಾಗಿ ಎಲ್ಲಡೆ ಅಸ್ತಿತ್ವದಲ್ಲಿದೆ. ವೇಶ್ಯೆಯರನ್ನು ಇಂದು ಹಲವಾರು ಪರ್ಯಾಯ ಹೆಸರುಗಳಿಂದ ಗುರುತಿಸುತ್ತಾರೆ. ಕಾಮೋದ್ರಿತ ಪುರುಷರನ್ನು ತೃಪ್ತಿಗೊಳಿಸುವ ಭಾಗವಾಗಿ, ಧಾರ್ಮಿಕ ಫಲವಂತಿಕೆಯ ಹೆಸರಿನಲ್ಲಿ ಆಸ್ತಿತ್ವಕ್ಕೆ ಬಂದ ಈ ಪದ್ಧತಿ ಕ್ರಮೇಣ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳೊಂದಿಗೆ ಇಂದಿಗೂ ಆಸ್ತಿತ್ವದಲ್ಲಿದೆ.

### ೨.೨ ವೇಶ್ಯೆ ಪದದ ಅರ್ಥ

ವೇಶ್ಯೆ ಎಂಬುದು ಸಂಸ್ಕೃತ ಪದ. ವೇಶ್ಯೆ ಎಂಬುದಕ್ಕೆ ಕನ್ನಡದಲ್ಲಿ ಸೂಳೆ ಎಂಬ ಪದ ಬಳಕೆಯಲ್ಲಿದೆ. ಸೂಳೆ ಪದಕ್ಕೆ ಪರ್ಯಾಯವಾಗಿ ವ್ಯಭಿಚಾರಿಣಿ, ದೇವದಾಸಿ, ಪಾತರದವಳು, ನಟಿ, ಜಾರಿಣಿ, ಮೊದಿ, ಮೋಟಿ, ಮೊಡ್ಡಿ, ಬೊಡ್ಡಿ, ಬಸವಿ, ಲಂಜಿ, ತೊತ್ತು, ಹಾದರದವಳು ಎಂಬಿತ್ಯಾದಿಯಾಗಿ ಸೂಳೆ ಪದಕ್ಕೆ ಸಮಾನಾರ್ಥಗಳನ್ನು ಪ್ರಾದೇಶಿಕವಾಗಿ ಬಳಸುತ್ತಾರೆ. ಇತ್ತೀಚೆಗೆ ಈ ಪದಗಳನ್ನು ಬಳಸುವುದು ಮಹಿಳೆಗೆ ಮಾಡುವ ಅವಮಾನವೆಂದು ಪರಿಗಣಿಸಿದ ಸಮಾಜಶಾಸ್ತ್ರಜ್ಞರು, ಮಹಿಳಾವಾದಿ ಬರಹಗಾರರು ಈ ಪದಗಳಿಗೆ ಸಂವಾದಿಯಾಗಿ ಲೈಂಗಿಕ ಕಾರ್ಯಕರ್ತೆ ಎಂಬ ಪದ ಬಳಸುತ್ತಿದ್ದಾರೆ. ಹಾಗಾಗಿ ಇಂದು ಬರುತ್ತಿರುವ ಎಲ್ಲಾ ಬರಹಗಳಲ್ಲಿಯೂ ಲೈಂಗಿಕ ಕಾರ್ಯಕರ್ತೆ ಎಂದೇ ಬಳಸುವುದನ್ನು ಕಾಣಬಹುದಾಗಿದೆ.

ವೇಶ್ಯಾ ವ್ಯವಸ್ಥೆಯು ಒಂದು ವೃತ್ತಿಯಾಗಿ ಪರಿಗಣಿಸಲ್ಪಟ್ಟಿದ್ದು, ವೇಶ್ಯೆಯರು ಮೊದಲು ಗುರುತಿಸಿಕೊಂಡಿರುವುದೇ ದೇವಾಲಯಗಳ ಜೊತೆಗೆ, ದೇವರ ಸೇವೆ ಮಾಡುವವರಾಗಿ, ದೇವಾಲಯಗಳಲ್ಲಿ ನೂರಾರು ಸೂಳೆಯರನ್ನು ದೇವರ ಸೇವೆಗೆಂದು ನೇಮಿಸಲಾಗುತ್ತಿತ್ತು. ಇಲ್ಲವೇ ಅರ್ಪಿಸಲಾಗುತ್ತಿತ್ತು. ದೇವಾಲಯಗಳಲ್ಲಿ ದೇವರಿಗೆ ಚಾಮರ ಬೀಸುವುದಕ್ಕೆ, ಪಂಜು (ರಾತ್ರಿ ಉತ್ಸವವಿದ್ದಾಗ ದೀಪ ಹಿಡಿಯುವ) ಹಿಡಿಯುವುದಕ್ಕೆ, ದೇವರ ಪಲ್ಲಕ್ಕಿ ಉತ್ಸವಕ್ಕೆ ಹಾಡು ಹೇಳಲು, ಪಲ್ಲಕ್ಕಿ ಹೊತ್ತು ತರುವವರಿಗೆ ಬಟ್ಟೆ ಹಾಸುವ, ದೇವರ ಆರತಿ ಬೆಳಗಲು, ದೇವರ ಮುಂದೆ ನರ್ತನಾ ಮಾಡುವಂತಹ ಹಲವಾರು ಕಾರ್ಯಗಳನ್ನು ನಿರ್ವಹಿಸಲು ಮಹಿಳೆಯರನ್ನು ನೇಮಿಸಲಾಗುತ್ತಿತ್ತು. ಈ ಎಲ್ಲಾ ಕೆಲಸಗಳನ್ನು ಸರದಿ ಪ್ರಕಾರ ನಿರ್ವಹಿಸಬೇಕೆಂಬ ನಿಯಮವಿದ್ದು, ಈ ರೀತಿ ಸರದಿ

ಪ್ರಕಾರ ಕೆಲಸ ಮಾಡುವಸ್ತ್ರೀಯರನ್ನು ಮೊದಲು 'ಸೂಳ್' ಎಂದು ಕರೆಯಲಾಗುತ್ತಿತ್ತು. 'ಸೂಳ್' ಅಂದರೆ ಸರದಿ ಎಂದರ್ಥ. ಈ ಸೂಳ್ ಪದವೇ ಕಾಲಾಂತರದಲ್ಲಿ ಸೂಳೆ ಎಂದಾಗಿರುವ ಸಾಧ್ಯತೆ ಇದೆ. ಈ ವೃತ್ತಿಗೆ ಮೊದಲು ಸಾಕಷ್ಟು ಧಾರ್ಮಿಕ ಪಾವಿತ್ರ್ಯತೆ ಇತ್ತು. ಕ್ರಮೇಣ ಅವರಿಗಿದ್ದ ಧಾರ್ಮಿಕ ಪಾವಿತ್ರತೆ ವಿವಿಧ ಕಾರಣಗಳಿಗಾಗಿ ಕಡಿಮೆಯಾಗಿ, ಸೂಳೆಯರ ಸ್ಥಾನ ಸಮಾಜದಲ್ಲಿ ಕೆಳಹಂತಕ್ಕೆ ತಲುಪಿ ಅವರನ್ನು ಕೀಳೆಂದು, ಕನಿಷ್ಠ ಎಂದು ಕಾಣಲು ಆರಂಭವಾಯಿತು. ಅಂದಿನಿಂದ ಈ ಪದ ಅಶ್ಲೀಲ ಪದವಾಯಿತು. ಆನಂತರ ಇದೇ ಪದವೇ 'ವೇಶ್ಯೆ' ಎನ್ನುವ ಶಿಷ್ಟ ಪದವಾಗಿ ರೂಪುಗೊಂಡಿತು. ಅದೇ ರೀತಿ "ಪೊಡ್ಡಿ, ಬೊಡ್ಡಿ ಎನ್ನುವ ಪದಗಳಿಗೆ ಹೊಸಗನ್ನಡದಲ್ಲಿ ದೋಷಿತ ಸ್ತ್ರೀ; ಅಪವಿತ್ರ ಹೆಂಗಸು ಎನ್ನುವ ಅರ್ಥಗಳಿವೆ"[7]

ಕನ್ನಡ ಶಾಸನಗಳಲ್ಲಿ ದೇವರಿಗೆ ಅರ್ಪಿಸಲ್ಪಟ್ಟ ಮಹಿಳೆಯರನ್ನು ಹೆಚ್ಚಾಗಿ ಸೂಳೆಯರೆಂದು ಗುರುತಿಸಲಾಗಿದೆ. ಅವುಗಳಲ್ಲಿನ ಕೆಲವೇ ಕೆಲವು ಶಾಸನಗಳು ಮಾತ್ರ ದೇವದಾಸಿಯರೆಂದು, ಬಸವಿಯರೆಂದು ಗುರುತಿಸಿವೆ. ಅದೇ ಕಾಲದಲ್ಲಿ ಸೃಷ್ಟಿಗೊಂಡ ಸಾಹಿತ್ಯ ಕೃತಿಗಳು ಆ ವರ್ಗದ ಮಹಿಳೆಯರನ್ನು ವೇಶ್ಯೆ, ಜಾರಣಿ, ವ್ಯಭಿಚಾರಿಣಿ, ಹಾದರಗಿತ್ತಿ, ಸೂಳೆ ಎಂದು ಪ್ರಧಾನವಾಗಿ ಗುರುತಿಸಿವೆ. ಈ ಹಿನ್ನೆಲೆಯಲ್ಲಿ ಈ ಎರಡು ಪದಗಳನ್ನು ಸ್ಪಷ್ಟವಾಗಿ ಇಂದಿನ ಆಧುನಿಕ ದಿನಗಳಲ್ಲಿ ವಿಭಾಗಿಸುವುದು ಕಷ್ಟ. ಆದರೂ ಒಂದು ಅಂತಿಮ ನಿರ್ಣಯಕ್ಕೆ ಬರಬಹುದು. ಧಾರ್ಮಿಕ ಹಿನ್ನೆಲೆಯಲ್ಲಿ ಯಾವುದಾದರೊಂದು ದೇವರಿಗೆ ಮೊದಲು ಅರ್ಪಿಸಲ್ಪಟ್ಟು ಆನಂತರ ಅವಳು ವೇಶ್ಯಾವೃತ್ತಿಯನ್ನು ಕೈಗೊಂಡಿದ್ದರೆ ಅಥವಾ ಮೌಖಿಕ ಒಪ್ಪಂಧದಂತೆ ಕೆಲ ಪುರಷರಿಗೆ ಲೈಂಗಿಕ ಸೇವೆ ಒದಗಿಸುವವರನ್ನು ಲೈಂಗಿಕ ಕಾರ್ಯಕರ್ತರೆಂದು ಕರೆಯಬಹುದು. ಅದೇ ರೀತಿ ನಟನೆ, ಪಾತ್ರ, ಹಾಡು ಈ ರೀತಿಯ ಯಾವುದಾದರೂಂದು ಕಲೆಗಳಲ್ಲಿ ಪ್ರಾವಿಣ್ಯತೆ ಗಳಿಸಿದ ಸ್ತ್ರೀಯೋರ್ವಳು ಇಲ್ಲವೇ ತನ್ನ ಸುಂದರ ಮೈಮಾಟದಿಂದ ಪುರುಷನನ್ನು ತನ್ನತ್ತ ಸೆಳೆದುಕೊಂಡು ಮುಂದೆ ಅದನ್ನೇ ವ್ಯವಹಾರಿಕವಾಗಿ ಪುನರಾವರ್ತನೆ ಮಾಡುವವರನ್ನು ವೇಶ್ಯೆಯರೆನ್ನಬಹುದು. ದೇವದಾಸಿಯರು ಇಡೀ ಜೀವನ ಪೂರ್ತಿ ಕೇವಲ ಒಬ್ಬ ಪುರುಷನೊಟ್ಟಿಗೆ ಪ್ರೀತಿಯಿಂದ ಅನುರಕ್ತಳಾಗಿ ಜೀವಿಸಿದ ಉದಾಹರಣೆಗಳಿವೆ. ವೇಶ್ಯೆಯರು ಹೆಚ್ಚು ವ್ಯವಹಾರಿಕವಾಗಿರುವುದರಿಂದ ಮತ್ತು ಹಣಕ್ಕೆ ಹೆಚ್ಚು ಮಾನ್ಯತೆ ನೀಡುವುದರಿಂದ ಅವರಲ್ಲಿ ಈ ರೀತಿಯ ಅನುರಕ್ತತೆ, ಜೀವನಪೂರ್ತಿ ಕಾಲ ಕಳೆಯುವಿಕೆಯ ಸಾಧ್ಯತೆಗಳು ಬಹು ಕಡಿಮೆ ಇರುತ್ತವೆ. ಅದಕ್ಕಾಗಿ ಅವರು ಹೆಚ್ಚು ಪುರುಷರಿಗೆ ತಮ್ಮ ಲೈಂಗಿಕ ಸೇವೆ ನೀಡಿ ತಮ್ಮ ಆದಾಯ ವೃದ್ಧಿಸಿಕೊಳ್ಳುತ್ತಾರೆ. ಹಿಂದೆ ಅರಮನೆ ಮತ್ತು ಗುರುಮನೆಗಳಲ್ಲಿ ವೇಶ್ಯೆಯಾದವರು ಇದಕ್ಕೆ ಅಪವಾದವಾಗಿದ್ದು, ಅವರು ಕೇವಲ ಒಬ್ಬ ರಾಜನಲ್ಲಿ ಇಲ್ಲವೇ ಅರಮನೆಯಲ್ಲಿಯೇ ತಮ್ಮ ಜೀವನ ಕಳೆದ ಉದಾಹರಣೆಗಳಿವೆ. ಆಧುನಿಕ ದಿನಗಳಲ್ಲಿ ಈ ಎರಡು ಪದಗಳು ತನ್ನ ಮೌಲ್ಯ ಕಳೆದುಕೊಂಡು ಹೆಚ್ಚು ಕಡಿಮೆ ಒಂದೇ ಸ್ವರೂಪವನ್ನು ಪಡೆದುಕೊಂಡಿವೆ. ಇವೆರಡು ಲೈಂಗಿಕ ಕಾರ್ಯಕರ್ತೆ ಎಂಬ ಒಂದೇ ಅರ್ಥದಲ್ಲಿಯೇ ಇಂದು ಬಳಕೆಗೊಳ್ಳುತ್ತಿವೆ.

ಸಾಮಾನ್ಯವಾಗಿ ಹಣಕ್ಕಾಗಿ ತನ್ನ ದೇಹವನ್ನು ಮಾರಿಕೊಳ್ಳುವವಳನ್ನು ವೇಶ್ಯೆ ಎನ್ನುತ್ತೇವೆ. ಹಣ ಇಲ್ಲವೇ ಇತರ ಉದ್ದೇಶಕ್ಕಾಗಿ ಒಬ್ಬರನ್ನು ಇಲ್ಲವೇ ಹಲವು ವ್ಯಕ್ತಿಗಳೊಡನೆ ನಿರಂತರವಾಗಿ ಅಕ್ರಮ ಲೈಂಗಿಕ ಸಂಬಂಧವನ್ನು ಹೊಂದುವುದನ್ನು ವೇಶ್ಯಾವೃತ್ತಿ ಎಂದು ಅರ್ಥೈಸಬಹುದು. ವೇಶ್ಯಾವೃತ್ತಿಯಲ್ಲಿ ಮಾರಾಟ, ಅಕ್ರಮ ಮತ್ತು ಉದ್ರೇಕದ ಆಪೇಕ್ಷೆ ಈ ಮೂರು ಅಂಶಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ ಎಂದು ಸಾಮಾಜಿಕ ಹಾಗೂ ನೈತಿಕ ಆರೋಗ್ಯ ಸಲಹಾ ಸಮಿತಿಯು ತನ್ನ ವರದಿಯಲ್ಲಿ ಅಭಿಪ್ರಾಯಪಟ್ಟಿದೆ. ಈ ವೃತ್ತಿಯಲ್ಲಿ ವ್ಯವಹಾರಿಕವಾಗಿ ತೊಡಗಿಕೊಳ್ಳುವವರೇ ಹೆಚ್ಚಾಗಿದ್ದಾರೆ. ಆದ್ದರಿಂದ ವೇಶ್ಯಾವೃತ್ತಿಯಲ್ಲಿ ತೊಡಗಿದವರನ್ನು ಈ ಮುಂದಿನಂತೆ ನಾವು ನಾಲ್ಕು ಪ್ರಕಾರಗಳಲ್ಲಿ ವಿಭಾಗಿಸಬಹುದು.

೧. ದೇವರ ಹೆಸರಿನಲ್ಲಿ ಪರಪುರುಷರಿಗೆ ದೇಹ ಅರ್ಪಿಸುವುದು.

೨. ಕಾಮ ತೃಷೆಗಾಗಿ ಪರಪುರುಷರಿಗೆ ದೇಹ ಅರ್ಪಿಸುವುದು.

೩. ಬಡತನ ಇಲ್ಲವೇ ಆರ್ಥಿಕ ಸೌಲಭ್ಯಕ್ಕಾಗಿ ಪರಪುರುಷರಿಗೆ ದೇಹ ಅರ್ಪಿಸುವುದು.

೪. ವೈಯಕ್ತಿಕ ಹಿತಾಸಕ್ತಿ ಅಥವಾ ಪುರುಷನ ಮೋಹಜಾಲಕ್ಕೊಳಗಾಗಿ ಪರಪುರುಷರಿಗೆ ದೇಹ ಅರ್ಪಿಸುವುದು.

ಮೊದಲನೆಯ ಪ್ರಕಾರವು ದೇವದಾಸಿಯ ಹೆಸರಿನಲ್ಲಿ ನಡೆಯುವ ಕ್ರಿಯೆಯಾಗಿದ್ದರೆ, ಎರಡನೆಯದು ಕಾಮತೃಷೆಗಾಗಿ ಪರಪುರುಷರಿಗೆ ದೇಹವೊಡ್ಡುವುದು. ಇದನ್ನು ಸಾಮಾನ್ಯವಾಗಿ ಗ್ರಾಮೀಣ ಭಾಷೆಯಲ್ಲಿ ಹಾದರತನವೆನ್ನುವರು. ಲೈಂಗಿಕವಾಗಿ ತನ್ನ ಗಂಡನೊಂದಿಗೆ ದೈಹಿಕ ತೃಪ್ತಿ ಹೊಂದದ ಸ್ತ್ರೀ ತನ್ನ ದೈಹಿಕ ತೃಷೆಗಾಗಿ ಪರ ಪುರುಷರೊಂದಿಗೆ ದೈಹಿಕ ಸಂಪರ್ಕ ಹೊಂದುವುದಾಗಿದೆ. ಮೂರನೆಯ ಕ್ರಮವೆಂದರೆ ಬಡತನದ ಕಾರಣಕ್ಕಾಗಿ ಇಲ್ಲವೇ ಹಣದ ಮೇಲಿನ ವ್ಯಾಮೋಹದಿಂದಾಗಿ ಬೇರೆ ಪುರುಷರೊಂದಿಗೆ ದೈಹಿಕ ಕ್ರಿಯೆ ನಡೆಸುವುದು. ಇದು ಹೆಣ್ಣಿನ ಇಷ್ಟಾನಿಷ್ಟಗಳಿಗಿಂತ ಕೇವಲ ವ್ಯವಹಾರಿಕ ಮನೋಭಾವನೆಯದ್ದಾಗಿದೆ. ಕೊನೆಯ ಪ್ರಕಾರದಲ್ಲಿ ವಿವಾಹಿತ ಸ್ತ್ರೀ ಪ್ರೀತಿಯ ನೆಪದಿಂದ ತನ್ನ ಪತಿಯಿಂದ ವಿಮುಖವಾಗಿ ಪರ ಪುರುಷನೊಟ್ಟಿಗೆ ಸೇರಿ ತನ್ನ ದೈಹಿಕ ಆಪೇಕ್ಷೆಯನ್ನು ಈಡೇರಿಸಿಕೊಳ್ಳುವುದಾಗಿದೆ.

### ೨.೩ ವೇಶ್ಯಾವಾಟಿಕೆ ಪದ್ಧತಿಯ ಪ್ರಾಚೀನತೆ

ವಿಶ್ವದ ಪ್ರಾಚೀನ ನಾಗರೀಕತೆಗಳಲ್ಲಿ ಒಂದಾದ ಬ್ಯಾಬಿಲೋನಿಯದಲ್ಲಿ ವೇಶ್ಯಾಪದ್ಧತಿ ಬಹು ಹಿಂದೆಯೇ ಜಾರಿಯಲ್ಲಿತ್ತು. ಧಾರ್ಮಿಕ ಸ್ವರೂಪದಲ್ಲಿ ಅತಿ ಪ್ರಾಚೀನ ಕಾಲದಲ್ಲಿಯೇ ಅಂದರೆ ಕ್ರಿ.ಪೂ ೩೦೦೦ ರಿಂದ ಕ್ರಿ.ಪೂ. ೧೫೦೦ರ ಕಾಲಘಟ್ಟದಲ್ಲಿ ಈ ಪದ್ಧತಿ ಅಸ್ತಿತ್ವದಲ್ಲಿತ್ತೆಂದು ಅಲ್ಲಿನ ಆಕರಗಳು ಸ್ಪಷ್ಟೀಕರಿಸಿವೆ. ದೊರೆತ ಪ್ರಾಚೀನ ದಾಖಲೆಗಳನ್ನು ಉಲ್ಲೇಖಿಸಿ ಹೇಳುವುದಾದರೆ ಪ್ರಾಯಶಃ ವಿಶ್ವದಲ್ಲೇ ಪ್ರಥಮವಾಗಿ ಈ ಪದ್ಧತಿ ಬ್ಯಾಬಿಲೋನಿಯದಲ್ಲಿ ಅಸ್ತಿತ್ವದಲ್ಲಿದ್ದರಬಹುದೆಂದು ಊಹಿಸಬಹುದು. ಅಲ್ಲಿನ ದೈವಗಳು ಜನರ ಬದುಕಿನ ಅವಿಭಾಜ್ಯ ಅಂಗವಾಗಿದ್ದವು. ಅವುಗಳು ಹೊಂದಿದ್ದ ಪವಿತ್ರ

ಸೇವಕರೇ ಕಾಲಾಂತರದಲ್ಲಿ ವೇಶ್ಯೆಯರಾಗಿ ಮಾರ್ಪಾಡಾಗಿದ್ದಿರಬಹುದಾದ ಸಾಧ್ಯತೆಯನ್ನು ವಿದ್ವಾಂಸರಾದ ಟಾವ್ನಿ ಮತ್ತು ಪೆಂಜರ್ ಈ ಮುಂದಿನಂತೆ ದಾಖಲಿಸಿದ್ದಾರೆ. "ಅಂದು ದೇವರು ಜನರೊಂದಿಗೆ ಭೋಜನ ಮಾಡುತ್ತಿತ್ತು. ಯಾವುದಾದರೂ ಅಪಾಯ ಅಥವಾ ತೊಂದರೆಯ ಸಂದರ್ಭಗಳಲ್ಲಿ ಸಲಹೆಗಾರನಾಗಿ ಮತ್ತು ಸಹಾಯಕನಾಗಿ ಅದು ಕೆಲಸ ಮಾಡುತ್ತಿತ್ತು. ದೇವಸ್ಥಾನವು ದೇವತೆಯ ಗೃಹಕ್ಕಿಂತ ಹೆಚ್ಚಾಗಿದ್ದುದರಿಂದ ಮನುಷ್ಯನ ಬಾಹ್ಯ ಸಂಬಂಧಗಳು ದೈವೀ ಶಕ್ತಿಗಳ ಜೊತೆ ಬೆರೆತುಕೊಂಡಿದ್ದವು. ಅದು ಆಧುನಿಕ ಬ್ಯಾಂಕಿನ ವ್ಯವಸ್ಥೆಯ ಹಾಗೆ ದೇಶದ ಸಂಪತ್ತಿನ ಕೇಂದ್ರವೂ ಆಗಿತ್ತು. ಗುತ್ತಿಗೆಗೆ ಕೊಡುವುದರಿಂದ ಅಥವಾ ರಾಸುಗಳನ್ನು ಮೇಯಿಸಲು ಬಳಸುತ್ತಿದ್ದ ಅದರ ಜಮೀನಿನಿಂದ ಬರುತ್ತಿದ್ದ ಆದಾಯ ಮತ್ತು ಪದಾರ್ಥಗಳ ರೂಪದಲ್ಲಿ ಬರುತ್ತಿದ್ದ ಅನೇಕ ಬಗೆಯ ಸಂಪತ್ತು ಅಲ್ಲಿ ಕ್ರೂಢೀಕರಣವಾಗುತ್ತಿತ್ತು. ಸಮಾಜದಲ್ಲಿ ಅತಿ ಮುಖ್ಯ ನಿರ್ಣಾಯಕ ಪಾತ್ರಗಳನ್ನು ನಿರ್ವಹಿಸುತ್ತಿದ್ದ. ಹಲವು ದೇವಾಲಯಗಳಲ್ಲಿ ಲಾರ್ಸಾದಲ್ಲಿದ್ದ ಮಾರ್ಡೊಕ್, ಎರೆಕ್‌ನಲ್ಲಿದ್ದ ಶಮಷ್, ಉರ್‌ನಲ್ಲಿದ್ದ ಇಷ್ತರ್(ಮಾತೃದೇವತೆ) ದೇವಾಲಯಗಳು ಪ್ರಮುಖವಾಗಿದ್ದವು. ಅವು ಹಲವು ಪವಿತ್ರ ಸೇವಕರನ್ನು(Hieroduloi) ಪಡೆದಿದ್ದವು. ಅವರಲ್ಲಿ ಪುರುಷರು ಮತ್ತು ಮಹಿಳೆಯರೂ ಇದ್ದು, ಅವರನ್ನು ಅನೇಕ ವರ್ಗಗಳಲ್ಲಿ ವಿಂಗಡಿಸಲಾಗಿತ್ತು"[೨] ದೇವಾಲಯಗಳಲ್ಲಿ ಸೇವೆಗಾಗಿ ಇದ್ದ ಮಹಿಳೆಯರಲ್ಲಿ ಕೆಲವರನ್ನು ಪೂಜಾರಿಣಿಗಳೆಂದು ನೇಮಿಸಲಾಗಿತ್ತು. ಅವರಲ್ಲಿ 'ಎಂಟು' (ನಿನ್-ಅನ್) ಮತ್ತು 'ನಟಿಟು' (ಸಲ್-ಮೆ) ಎನ್ನುವ ಎರಡು ವರ್ಗಗಳಿದ್ದವು. ಆ ಮಹಿಳೆಯರಿಗೆ ಅಂದಿನ ಸಮಾಜದಲ್ಲಿ ತುಂಬಾ ಗೌರವವಿತ್ತು.

'ಎಂಟು/ನಿನ್-ಅನ್' ಎಂದರೆ ದೇವರ ವಧುಗಳೆಂದು ಅರ್ಥ. ಅಂತಹ ಮಹಿಳೆಯರನ್ನು ಸಮಾಜದಲ್ಲಿ ಅತಿ ಶ್ರೇಷ್ಠರೆಂದು ಭಾವಿಸಲಾಗಿತ್ತು. ಅವರು ವಿವಾಹಿತರೋ ಅವಿವಾಹಿತರೋ ತಿಳಿದುಬರುವುದಿಲ್ಲ. ಆದರೆ ಅವರ ತಂದೆಯರ ಕುರಿತು ಯಾವುದೇ ವಿವರಣೆ ಇಲ್ಲ. ನಟಿಟು(ಸಲ್-ಮೆ)ಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಮದುವೆಯಾಗಲು ಅವರಿಗೆ ಅವಕಾಶವಿತ್ತು. ಆದರೆ, ಮಕ್ಕಳನ್ನು ಹೊಂದುವುದಕ್ಕೆ ಅವಕಾಶವಿರಲಿಲ್ಲ. ಎಂಟು ಮತ್ತು ನಟಿಟು ಈ ಇಬ್ಬರೂ ವೈಯಕ್ತಿಕವಾಗಿ ಆಸ್ತಿಯನ್ನು ಹೊಂದಲು ಅವಕಾಶವಿತ್ತು. ಅವರು ಮಠಗಳಲ್ಲಿ (ಗಾಗಮ್) ಇಲ್ಲವೇ ತಮ್ಮ ಸ್ವಂತ ಮನೆಗಳಲ್ಲಿ ವಾಸಿಸಲು ಅವಕಾಶವಿದ್ದಿತು"[೩]

ಬ್ಯಾಬಿಲೋನಿಯಾದ ಸಮಾಜದಲ್ಲಿ(ಕ್ರಿ.ಪೂ.೨೧೯೦) ಶ್ರೀಮಂತರು ತಮ್ಮ ಪ್ರಧಾನ ಹೆಂಡತಿಯೊಂದಿಗೆ ಅನೇಕ ಉಪಪತ್ನಿ ಮತ್ತು ವೇಶ್ಯೆಯರನ್ನು ಹೊಂದಿರುತ್ತಿದ್ದರು. ಅವರು ತಮ್ಮ ಪ್ರಧಾನ ಹೆಂಡತಿಯನ್ನು 'ಎಂಟು' ಎಂದೂ, ಉಳಿದ ಉಪಪತ್ನಿ ಮತ್ತು ವೇಶ್ಯೆಯರನ್ನು 'ನಟಿಟು' ಎಂದು ಕರೆಯುತ್ತಿದ್ದರು. ಅಲ್ಲಿದ್ದ ದೇವರು ಇಚ್ಛಿಸಿದಲ್ಲಿ ಯಾವುದೇ ವ್ಯಕ್ತಿಯ 'ಎಂಟು' (ಪ್ರಧಾನ ಪತ್ನಿ) ಅಥವಾ 'ನಟಿಟು' (ಉಪಪತ್ನಿ, ವೇಶ್ಯೆಯರು)ರನ್ನು ಪಡೆದು ತನ್ನ ಸೇವೆಯಲ್ಲಿರಿಸಿಕೊಳ್ಳಬಹುದೆಂಬ ನಂಬಿಕೆ ಅಲ್ಲಿನ ಜನರಲ್ಲಿತ್ತು. ಆ ಕಾರಣಕ್ಕಾಗಿ ಈ ಎರಡು ಬಗೆಯ ದೇವರ ಸೇವೆಯಲ್ಲಿ ತಮ್ಮನ್ನು

ತೊಡಗಿಸಿಕೊಂಡ ಅಸಂಖ್ಯಾತ ಮಹಿಳೆಯರು ಅಂದಿನ ಸಮಾಜದಲ್ಲಿದ್ದರು. ದೇವರ ಸೇವೆಗಾಗಿ ಈ ರೀತಿ ಸಮರ್ಪಣೆಯಾದ 'ಎಂಟು' ಮತ್ತು 'ನಟಿಟು' ವರ್ಗದ ಮಹಿಳೆಯರೊಂದಿಗೆ ಇನ್ನೂ ಕೆಳಗಿನ ಹಂತದಲ್ಲಿ 'ಜಿಕ್ರು' ಮತ್ತು 'ಜರ್ಮಶಿಟು' ಎಂದು ಕರೆಯಲ್ಪಡುತ್ತಿದ್ದ ದೇವರಿಗೆ ಅರ್ಪಿಸಿದ ಕೆಲ ಮಹಿಳೆಯರಿದ್ದರು. ಅವರು ದೇವಸ್ಥಾನದ ಸೇವಕಿಯರಾಗಿದ್ದು, ತುಂಬಾ ಐಶ್ವರ್ಯವಂತೆಯರೂ ಮತ್ತು ಸಮಾಜದಲ್ಲಿ ಉತ್ತಮ ಗೌರವವನ್ನು ಹೊಂದಿದ್ದವರೂ ಆಗಿದ್ದರು. ಅಂದಿನ ಸಮಾಜದಲ್ಲಿ ಇವರು ಮದುವೆ ಮಾಡಿಕೊಳ್ಳಲು, ಮಕ್ಕಳನ್ನು ಹೆರಲು ಅವಕಾಶ ಹೊಂದಿದ್ದರು. 'ಜರ್ಮಶಿಟು'ವಿಗಿಂತ 'ಜಿಕ್ರು' ಸ್ವಲ್ಪ ಮೇಲಂತಸ್ತನ್ನು ಹೊಂದಿದ್ದಳು ಎಂದು ಹೇಳಲಾಗುತ್ತದೆ. ಜಿಕ್ರುವಿನ ತಂದೆಯ ಆಸ್ತಿಗೆ ಸಂಬಂಧಿಸಿದ ಹಾಗೆ ಅವಳಿಗೆ ತನ್ನ ಉಯಿಲಿನಲ್ಲಿ ಏನನ್ನೂ ತೋರಿಸದೆ ಸತ್ತು ಹೋದರೆ, ಅವಳು ತನ್ನ ಸಹೋದರರೊಂದಿಗೆ ಸಮಾನವಾಗಿ ಆಸ್ತಿ ಪಾಲನ್ನು ಪಡೆಯಬಹುದಾಗಿತ್ತು. ಆದರೆ, ಆಕೆ ಜರ್ಮಶಿಟು ಅಥವಾ ಕಡಿಶಿಟು (ಜರ್ಮಶಿಟುವಿನ ಮತ್ತೊಂದು ವರ್ಗ) ಆಗಿದ್ದ ಪಕ್ಷದಲ್ಲಿ ತನ್ನ ಸಹೋದರನ ಭಾಗದಲ್ಲಿ ಮೂರನೆಯ ಒಂದು ಭಾಗವನ್ನು ಮಾತ್ರ ಪಾಲು ಪಡೆಯಲು ಸಾಧ್ಯವಾಗುತ್ತಿತ್ತು.'[೪] ಪರಂಪರಾಗತ ಆಸ್ತಿ ಹೊಂದುವುದರಲ್ಲಿ ಕಡಿಶಿಟುಗಳನ್ನು ಜರ್ಮಶಿಟುಗಳೊಂದಿಗೆ ವರ್ಗೀಕರಿಸಲಾದರೂ, ಅವರು ಸ್ಪಷ್ಟವಾಗಿ ಉಚ್ಛಸ್ಥಾನವನ್ನು ಹೊಂದಿರುತ್ತಿದ್ದರು. ಅವರು ಬ್ಯಾಬಿಲೋನಿಯಾದ ಮಕ್ಕಳಿಗೆ ಕಡ್ಡಾಯವಾಗಿ ಹಾಲುಣಿಸುವುದು ಅವರ ಮುಖ್ಯ ಕರ್ತವ್ಯವಾಗಿತ್ತು.

ಹಮ್ಮುರಬಿಯ ರಾಜ್ಯಾಡಳಿತ ಕಾಲದಲ್ಲಿ ಇಷ್ತಾರ್(ಹಿರಿಯ ಮಾತೃದೇವತೆ) ದೇವತೆಯ ಪಂಥ ಇಲ್ಲಿ ಬಹಳ ಜನಪ್ರಿಯವಾಗಿತ್ತು. ಅಂದು ಮುರ್‌ಡಕ್ ದೇವಾಲಯವು ಈ ದೇವತೆಯ ಮುಖ್ಯ ಕೇಂದ್ರವಾಗಿತ್ತು. ಜನರು ಆಕೆಯನ್ನು 'ಸರ್‌ಪನಿಟ್' ಎಂದು ಕರೆದು, ಮುರ್‌ಡಕ್‌ನ ಹೆಂಡತಿಯೆಂದು ಭಕ್ತಿಯಿಂದ ಪೂಜಿಸುತ್ತಿದ್ದರು. ಈ ದೇವತೆಯನ್ನು ತೃಪ್ತಿಯಿಂದಿಡಲು ಇಲ್ಲವೇ ಪ್ರಸನ್ನಗೊಳಿಸಲು ಬ್ಯಾಬಿಲೋನಿನ ಎಲ್ಲಾ ಮಹಿಳೆಯರು ಕಡ್ಡಾಯವಾಗಿ ವೇಶ್ಯಾಗಾರಿಕೆಯನ್ನು ಅನುಸರಿಸುತ್ತಿದ್ದರು ಎಂದು ಗ್ರೀಕ್ ಇತಿಹಾಸಕಾರ ಹೆರೊಡೊಟಸ್ ದಾಖಲಿಸಿದ್ದಾನೆ. ಈ ವೇಶ್ಯಾವೃತ್ತಿಯನ್ನು ಕೆಲವು ವೇಳೆ ಬಲವಂತವಾಗಿಯೂ ಕೆಲವು ವೇಳೆ ಸ್ವ-ಇಚ್ಛೆಯಿಂದಲೂ ಇಲ್ಲವೇ ಅನಿವಾರ್ಯವಾಗಿ ಮಾಡಲೇಬೇಕಾಗಿತ್ತು. ಧರ್ಮ ಮತ್ತು ಫಲವಂತಿಕೆಯ ಹೆಸರಿನಲ್ಲಿ ನಡೆಯುತ್ತಿದ್ದ ಈ ವಿಧಿ ಅಂದು ಸಾರ್ವತ್ರಿಕರಣಗೊಂಡಿತ್ತು.

"ಇಷ್ತಾರ್‌ನ ಮಾತೃದೇವತೆಯ ಪಂಥ ಸುಮೇರಿಯನ್ ಬ್ಯಾಬಿಲೋನಿಯಾ ಮತ್ತು ಆಸ್ಸಿರಿಯಾದ ಅನೇಕ ನಗರಗಳಲ್ಲಿ ಪ್ರಸಿದ್ಧಿಗೊಳ್ಳಲು ಹಲವು ಕಾರಣಗಳಿದ್ದವು. ಅವುಗಳಲ್ಲಿ ಆಕೆಯನ್ನು 'ಪ್ರಾಣಿ ಮತ್ತು ಸಸ್ಯಗಳಿಗೆ ಜೀವ ನೀಡುವಾಕೆ ಮತ್ತು ಪ್ರಣಯ ದೇವತೆ. ಮದುವೆ ಮತ್ತು ಹೆರಿಗೆಗಳ ಹಾಗೂ ಸೃಷ್ಟಿಯ ಜೊತೆಗೆ ಸಂಬಂಧ ಹೊಂದಿರುವಳು, ಭಯಂಕರಳು, ಯುದ್ಧ ದೇವತೆಯಾಗಿರುವ ಆಕೆ ಶತ್ರುಗಳ ಜೀವ ನಾಶಕ್ಕೂ ಕಾರಣವಾಗಬಲ್ಲವಳು ಎಂದು ಜನ ಭಾವಿಸಿದ್ದರು. ಕೆಲವರು ಈಕೆಯನ್ನು ಸೃಷ್ಟಿ ಶಕ್ತಿ ಮತ್ತು ವಿನಾಶ ಶಕ್ತಿಗಳನ್ನು ಹೊಂದಿರುವ ಅರ್ಧನಾರೀಶ್ವರನಾದ ಶಿವನೊಂದಿಗೆ

ಹೋಲಿಸಿದ್ದಾರೆ."[೫] ಇದರೊಂದಿಗೆ 'ಎರಿಕ್ ಪ್ರದೇಶದ ರಾಣಿ', 'ಕಾಮ ದೇವತೆ', 'ಕಾಮನ ಕಣ್ಣಿನವಳು', 'ಪ್ರೀತಿಯ ವಾರಂಗನೆ', 'ದೇವಾಲಯದ ಗಣಿಕೆ' ಮತ್ತು 'ಪ್ರಣಯದ ದೇವತೆ' ಇತ್ಯಾದಿ ಬಿರುದುಗಳಿಂದ ಆಕೆಯನ್ನು ಗುರುತಿಸಲಾಗಿದೆ. ಇಷ್ತಾರ್ ದೇವತೆಯ ಪಂಥಕ್ಕೆ ಎಷ್ಟು ಜನಪ್ರಿಯತೆ ಇತ್ತೆಂಬುದಕ್ಕೆ ವಿವಿದೆಡೆ ದೊರೆತ ಆಕೆಯ ನಗ್ನ ಚಿತ್ರಗಳೇ ಸಾಕ್ಷಿಯಾಗಿವೆ. ಈ ದೇವತೆಯ ನಗ್ನ ಶಿಲ್ಪಗಳು ಬ್ಯಾಬಿಲೋನಿಯಾದಲ್ಲಿ ಮಾತ್ರವಲ್ಲದೆ ಅದರ ಹೊರಗಿನ ಪ್ರದೇಶಗಳಾದ ಉತ್ತರದ ಸಿರಿಯಾ ಮತ್ತು ಕರ್ಚೆಮಿಷ್‌ನಲ್ಲಿ ದೊರೆತಿವೆ."[೬] ಚಿತ್ರ ಮತ್ತು ಶಿಲ್ಪಗಳಲ್ಲಿ ಆಕೆಯನ್ನು ಬಹುತೇಕ ಬೆತ್ತಲೆಯಾಗಿ ಚಿತ್ರಿಸಲಾಗಿದೆ. ಇಲ್ಲವೇ ತನ್ನ ಉಡುಗೆಯನ್ನು ಪಕ್ಕಕ್ಕೆ ಸರಿಸಿ, ತನ್ನ ದೇಹದ ಅಂಗಾಂಗಳನ್ನು ಪ್ರದರ್ಶಿಸಿದಂತೆ ಚಿತ್ರಿಸಲಾಗಿದೆ. ತನ್ನ ಎದೆಯನ್ನು ಮುಂದಕ್ಕೆ ಬಾಗಿಸಿ ನಿಂತ ಭಂಗಿಯಲ್ಲಿರುವ ಹಲವಾರು ಶಿಲ್ಪಗಳು ಈ ಮೇಲಿನ ಅಂಶಗಳನ್ನು ಪ್ರತಿನಿಧಿಸುತ್ತವೆ."[೭]

ಇಷ್ತಾರ್‌ನ ದೇವಾಲಯಗಳಲ್ಲಿ ಅನೇಕ ಪೂಜಾರಿಣಿಯರನ್ನು ಮತ್ತು ಸೇವಕಿಯರನ್ನು ಕೆಲಸಕ್ಕೆ ನೇಮಿಸಿಕೊಳ್ಳಲಾಗಿತ್ತು. ಆ ಸೇವಕಿಯರು ಕಾಮುಕರಾಗಿದ್ದು, ಅವರಿಗೆ 'ಕ್ವಿಜೆರೆಟಿ'(ಗಣಿಕೆ), 'ಶಮ್‌ಕಟಿ'(ಸಂತೋಷ ನೀಡುವ ಸೇವಕಿ) ಮತ್ತು 'ಖರಿಮಟಿ' (ನಿಷ್ಠೆ ಹೊಂದಿದವಳು) ಎಂದು ಹೆಸರುಗಳಿದ್ದವು. ಈ ಮಹಿಳೆಯರು ಅಂದು ಸಾಕಷ್ಟು ಜನಪ್ರಿಯರಾಗಿದ್ದರು. ಕೆಲ ಕೃತಿಗಳಲ್ಲಿ ಇವರ ವರ್ಣನೆ ಹೀಗಿದೆ. "ಎರಿಕ್ ಎಂಬ ಅನು ಮತ್ತು ಇಷ್ತಾರ್‌ನ ಮನೆ, ಅದು ಸೂಳೆಯರ ಪಟ್ಟಣ, ಹಾದರದ ತವರು, ಬಂದ ಗಿರಾಕಿಗಳು ಇಷ್ತಾರ್‌ಗೆ ಒಂದು ಕೈಯಲ್ಲಿ ಹಣವನ್ನು ಅರ್ಪಿಸಿದರೆ ಮತ್ತೊಂದು ಕೈಯನ್ನು ತನಗೆ ಇಷ್ಟವಾದ ವಾರಂಗನೆಯ ಮೇಲೆ ಇಟ್ಟಿರುತ್ತಿದ್ದರೆಂದು 'ಫಿರ್‍ರಾ' ಐತಿಹ್ಯವೊಂದು ವರ್ಣಿಸಿದೆ.

ಅಸ್ಸೀರಿಯಾದ ದೊರೆ ಅಸ್ಸೂರ್-ಬನಿ-ಪಾಲ್(ಕ್ರಿ.ಪೂ. ೬೬೮-೬೨೬)ನ ಗ್ರಂಥಾಲಯದಲ್ಲಿ ಹಲವು ಮಹತ್ವದ ಚಾರಿತ್ರಿಕ ಗ್ರಂಥಗಳಿದ್ದವು. ಅವುಗಳಲ್ಲಿ ಬ್ಯಾಬಿಲೋನಿಯರ ಅತ್ಯಂತ ಮುಖ್ಯ ಸಾಹಿತ್ಯ ಕೃತಿಯಾದ 'ಗಿಲ್‌ಗಮೆಸ್ ಮಹಾಕಾವ್ಯ' ಒಂದಾಗಿದೆ. ಇದು ಹನ್ನೆರಡು ಕಡತಗಳಲ್ಲಿದ್ದು, ಅಲ್ಲಿನ ಇಷ್ತಾರ್ ಪದ್ಧತಿಯ ಮೇಲೆ ಗಮನಾರ್ಹವಾದ ಬೆಳಕನ್ನು ಚೆಲ್ಲುತ್ತದೆ.

ಇಷ್ತಾರ್ ದೇವಾಲಯದಿಂದ ಬಂದ ಶಮಖತ್ ಎನ್ನುವ ವಾರಾಂಗನೆ 'ಎಂಗಿಡುವಿನ' ಕಾಮವನ್ನು ತಣಿಸಿದ್ದು, ಅವನನ್ನು ವಶೀಕರಿಸಿಕೊಂಡು ಎರಿಕ್‌ಗೆ ಹಿಂದುರಿಗಿ ಕರೆದೊಯ್ದು ಅವನ ಉಪಚಾರ ಮಾಡಿದ ಸಂಗತಿ ಮತ್ತು ಟಮೂಜ್ ಸತ್ತಾಗ, ಇಷ್ತಾರ್ ಹೇಡ್ಸ್(ಶಿಯೋಲ್)ಗೆ ಹೋಗಿ, ಅವನನ್ನು ಹುಡುಕುವ ಸಂಗತಿಗಳು ಈ ಕಾವ್ಯದಲ್ಲಿ ಪ್ರಧಾನವಾಗಿವೆ. ಫ್ರೇಜರ್, ಹೇಸ್ಟಿಂಗ್ಸ್ ಮತ್ತು ಸ್ಕ್ರಡರ್ ಮುಂತಾದ ವಿದ್ವಾಂಸರು ಈ ಪುರಾಣವನ್ನು ವಿವರವಾಗಿ ವರ್ಣಿಸಿದ್ದಾರೆ. ಈ ಕಾವ್ಯದಲ್ಲಿ ಮುಖ್ಯವಾಗಿ "ಧಾರ್ಮಿಕ ವೇಶ್ಯಾಗಾರಿಕೆ" ಹೇಗೆ ಸೃಷ್ಟಿಯಾಯಿತು ಎನ್ನುವ ವಿವರಗಳಿವೆ. ಇದೇ ಕಾವ್ಯದ ಕೆಲವು ಸಂಗತಿಗಳನ್ನು ಆಧರಿಸಿ ಫ್ರೇಜರ್, ಟಾವ್ನಿ ಹಾಗೂ ಪೆಂಜರ್ ಎನ್ನುವ ವಿದ್ವಾಂಸರು ಈ ಪದ್ಧತಿಯ ಹುಟ್ಟನ್ನು ಈ ರೀತಿ ಅರ್ಥೈಸಿದ್ದಾರೆ.

“ಇಷ್ತಾರ್ ಪ್ರತಿವರ್ಷವೂ ತನ್ನ ಪ್ರಣಯಿಯನ್ನು ಹುಡುಕಿಕೊಂಡು ಶಿಯೋಲ್‌ಗೆ ಹೋಗತೊಡಗಿದಳು. ಇದು ಅಲ್ಲಿಯ ನೆಲದ ಫಲವತ್ತತೆಯ ಮೇಲೆ ಪ್ರತಿಕೂಲ ಪರಿಣಾಮವನ್ನು ಬೀರಿತು. ಮಾನವ ಮತ್ತು ಪ್ರಾಣಿಗಳಲ್ಲಿ ಆಕಾಂಕ್ಷೆಯು ಕ್ಷೀಣಿಸಿ ಫಲವಂತಿಕೆಯ ಪ್ರಮಾಣ ತಗ್ಗಿತು ಎಂಬ ನಂಬಿಕೆ ಅವರಲ್ಲಿತ್ತು. ಪ್ರಣಯ ದೇವತೆಯ ಇಚ್ಛೆಯಂತೆ ಫಲವಂತಿಕೆಯ ಕೊರತೆಯನ್ನು ಸರಿಹೊಂದಿಸಲು ಕೆಲವು ಮಹಿಳೆಯರು ಧಾರ್ಮಿಕ ವೇಶ್ಯಾಗಾರಿಕೆಗೆ ತೊಡಗಬೇಕಾಯಿತು.”[೮]

ಫ್ರೇಜರ್, ಟಾಮ್ಮಿ ಹಾಗೂ ಪೆಂಜರ್ ಅವರ ಪ್ರಕಾರ ಬ್ಯಾಬಿಲೋನಿಯದಲ್ಲಿ ಹಿಂದೆ ಪಾವಿತ್ರ್ಯತೆಯ ಹೆಸರಿನಲ್ಲಿ ವೇಶ್ಯಾಗಾರಿಕೆ ಪದ್ಧತಿ ಆಸ್ತಿತ್ವದಲ್ಲಿತ್ತು ಎಂದು ತಿಳಿದುಬರುವುದು. ಈ ಪದ್ಧತಿ ಧರ್ಮದ ನೆಲೆಗಟ್ಟಿನಲ್ಲಿ ಮತ್ತು ಫಲವಂತಿಕೆಯ ಹೆಸರಿನಲ್ಲಿ ಅಲ್ಲಿ ಬೆಳೆದು ಬಂದಿರುವ ಸಾಧ್ಯತೆ ಇದೆ. ಕಾಲಾಂತರದಲ್ಲಿ ಹಲವು ಮಾರ್ಪಾಡುಗಳಿಗೆ ಒಳಗಾದ ಈ ಪದ್ಧತಿಯು ಇಂದಿನ ಆಧುನಿಕ ವೇಶ್ಯಾಪದ್ದತಿಯ ಸ್ವರೂಪವನ್ನು ಪಡೆದುಕೊಂಡಿತೆನ್ನಬಹುದು.

ವಿಶ್ವದ ಇತರೆಡೆಗಳಂತೆಯೇ ಸಿರಿಯಾ, ಫೊನೇಷಿಯಾ ಮತ್ತು ಕನಾನ್‌ಗಳಲ್ಲಿಯೂ ಪ್ರಾಚೀನ ಕಾಲದಿಂದಲೂ ಆಸ್ತಿತ್ವದಲ್ಲಿತ್ತು ಎಂದು ಹೇಳಲಾಗುವುದು. ಧಾರ್ಮಿಕ ವೇಶ್ಯಾಗಾರಿಕೆ ಪದ್ಧತಿ ಅಲ್ಲಿನ ಮಾತೃದೇವತಾ ಆರಾಧನೆಯೊಂದಿಗೆ ಆರಂಭವಾಯಿತಂತೆ. ‘ಅಟ್ಟರ್’ ಅಥವಾ ‘ಅತ್ತರವ’ ಎಂದು ಸಿರಿಯಾದಲ್ಲಿ ಮಾತೃದೇವತೆಯನ್ನು ಕರೆಯುತ್ತಾರೆ. ಲೆಬನಾನ್‌ನ ಪವಿತ್ರ ನಗರ ಹೈರಾಪೊಲೀಸ್(ಆಧುನಿಕ ಮೆಂಬಿಜ)ನಲ್ಲಿ ‘ಅತರಗಟಿಸ್’ ಎಂಬ ಹೆಸರಿನಿಂದ ಮಾತೃದೇವತೆಯನ್ನು ಗುರುತಿಸುತ್ತಾರೆ. ಕ್ರಿ.ಶ.೧೫೦ರ ಸುಮಾರಿನಲ್ಲಿ ಲುಸಿಯನ್‌ನಿಂದ ಬರೆಯಲ್ಪಟ್ಟ ‘ಡೇಡಿ ಸಿರಿಯ’ ಎನ್ನುವ ಕೃತಿಯು ಹೈರಾಪೊಲೀಸ್‌ನಲ್ಲಿದ್ದ ಪೂಜೆ ಪದ್ಧತಿಯ ಕುರಿತು ಮಾಹಿತಿ ನೀಡುತ್ತದೆ. ಕ್ರಿ.ಪೂ.೧೪ನೆಯ ಶತಮಾನದಲ್ಲಿದ್ದ ಹಿಟಿಟ್ ಅಧಿಪತ್ಯವು ತುತ್ತ ತುದಿಯಲ್ಲಿದ್ದಾಗ, ಅಲ್ಲಿನ ಧಾರ್ಮಿಕ ಪದ್ಧತಿ ಲುಸಿಯನ್ ವಿವರಿಸಿರುವ ಹಾಗೆಯೇ ಇತ್ತೆಂಬುದನ್ನು ಏಷ್ಯಾ ಮೈನರ್ ಮತ್ತು ಉತ್ತರ ಸಿರಿಯಾದಲ್ಲಿ ದೊರೆತ ನಾಣ್ಯಗಳು ಪುಷ್ಟೀಕರಿಸಿವೆ. ಈ ನಾಣ್ಯಗಳಲ್ಲಿ ಚಿತ್ರಿಸಿರುವಂತೆ ಜೋಡಿಯಾದ ಗಂಡು–ಹೆಣ್ಣುಗಳ ಚಿತ್ರವಿದೆ. ಅಲ್ಲಿಯ ದೇವಸ್ಥಾನಗಳಲ್ಲಿ ಆರಂಭವಾದ ವೇಶ್ಯೆಗಾರಿಕೆಯ ಕುರಿತು ಬ್ಯಾಬಿಲೋನ್ ದೇವಾಲಯದಲ್ಲಿ ನಡೆಯುತ್ತಿದ್ದ ಆಚರಣೆಯೊಂದನ್ನು ಆಧಾರವಾಗಿಟ್ಟುಕೊಂಡು ಈ ಕೆಳಗಿನಂತೆ ತಿಳಿಸಲಾಗಿದೆ. “ಅಥೋನಿಯನ್ನಾ ಕಳೆದುಕೊಂಡ ದೇವತೆಗಳು ಶೋಕಾಚರಣೆಯ ನಂತರ ಅಲ್ಲಿಯ ಜನರೆಲ್ಲ ಕೇಶ ಮುಂಡನವನ್ನು ಕಡ್ಡಾಯವಾಗಿ ಮಾಡಿಸಿಕೊಳ್ಳಬೇಕಿತ್ತು. ಅದಕ್ಕೆ ತಿರಸ್ಕರಿಸಿದ ಹೆಣ್ಣು ಮಕ್ಕಳು ಆ ದೇವಾಲಯದಲ್ಲಿ ಇಡೀ ದಿವಸ ಎಲ್ಲರಿಗೂ ಅರ್ಪಿತವಾಗಬೇಕಾಗಿತ್ತು. ಅಪರಿಚಿತರು ಮಾತ್ರ ಹೆಂಗಸರನ್ನು ಬಾಡಿಗೆಗೆ ತೆಗೆದುಕೊಳ್ಳಲು ಅವಕಾಶವಿತ್ತೆಂದು ನಮಗೆ ತಿಳಿದುಬರುತ್ತದೆ”[೯] ಈ ರೀತಿಯ ಆಚರಣೆ ಜೊತೆಗೆ ಮತ್ತೊಂದು “ಅತೀ ಮಹತ್ವದ ಆಚರಣೆಯೆಂದರೆ ದೇವತೆಗೆ ಶೀಲ ಮತ್ತು ತಲೆಕೂದಲನ್ನು ಅರ್ಪಿಸುವುದೇ ಆಗಿತ್ತು”[೧೦] ಭಾರತದಲ್ಲಿ ಈ ರೀತಿಯ ಆಚರಣೆಗಳು ಇನ್ನೂ ಜೀವಂತವಾಗಿರುವುದನ್ನು ಹಲವು ಕಡೆ ಧಾರ್ಮಿಕ ಕ್ಷೇತ್ರಗಳಲ್ಲಿ ಕಾಣುತ್ತೇವೆ.

"ಸಿರಿಯಾ, ಬ್ಯಾಬಿಲೋನಿಯಾ ಸುತ್ತಮುತ್ತ ಧಾರ್ಮಿಕ ವೇಶ್ಯಾಗಾರಿಕೆಯೆಂಬುದು ಸ್ಥಳೀಯ ದೇವಾಲಯಗಳಲ್ಲಿ ಅಂದಿನ ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದ್ದು ಮಾತ್ರ ಸತ್ಯ ಸಂಗತಿಯಾಗಿತ್ತು. ಮಲೇಷಿಯಾ, ಕನಾನ್ ಮತ್ತು ಸೈಪ್ರಸ್ ಮುಂತಾದ ಪ್ರದೇಶಗಳಲ್ಲಿಯೂ ಅಟರ್ಟ್, ಅಶೊರತ್ ಮತ್ತು ಅಸ್ಪೇಟ್ ಎನ್ನುವ ಹೆಸರುಗಳಿಂದ ಮಾತೃದೇವತೆಯ ಆರಾಧನೆ ರೂಢಿಯಲ್ಲಿತ್ತು. ಇಷ್ತಾರ್ ದೇವತೆಯಂತೆ ಈಕೆಯನ್ನು "ಪ್ರಣಯ, ಫಲವಂತಿಕೆ ಮತ್ತು ಯುದ್ಧಗಳ ದೇವತೆಯೆಂದೂ ಆರಾಧಿಸಲಾಗುತ್ತಿತ್ತು. ಅದೇ ರೀತಿಯಲ್ಲಿ ಮಾತೃದೇವತೆಯನ್ನು ಗ್ರೀಕರು ಮತ್ತು ಫೊನೇಷಿಯನ್ನರು ಆರಾಧಿಸುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ಸಿರಿಯಾದ ವಿಷಯ ಪ್ರಸ್ತಾಪಿಸುವಾಗ ಆ ಪ್ರದೇಶದಲ್ಲಿ ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ವೇಶ್ಯಾಗಾರಿಕೆ ನಡೆಯುತ್ತಿತ್ತೆಂದು ಹೆರೊಡೋಟಸ್‌ನು ಉಲ್ಲೇಖಿಸುತ್ತಾನೆ. ಅಲೆಗ್ಸಾಂಡ್ರಿಯಾದ ದಯೆ ಉಳ್ಳವಳು–'ಜಸ್ಟಿನ್' ಮತ್ತು 'ಅಥೆನಕಸ್', ಇವುಗಳೊಂದಿಗೆ ಸೈಪ್ರೆಸ್‌ನ್ ಕಿಟಿಯೋನ್ ದೇವಾಲಯದಲ್ಲಿದ್ದ ಗಂಡು ವೇಶ್ಯೆಯರ ಬಗ್ಗೆಯೂ ಹೆರೋಡೋಟಸ್‌ನು ದಾಖಲಿಸಿದ್ದಾನೆ. ಫೊನೇಷಿಯದ ಶಿಲಾಶಾಸನಗಳು ಸಿಸಿಲಿಯಾ ಎರಿಕ್ಸ್ ಎಂಬಲ್ಲಿ ಅಷ್ಟಾರ್ಟ್ ಪ್ರದೇಶದಲ್ಲಿದ್ದ ಒಂದು ದೇವಾಲಯದ ಬಗ್ಗೆ ದಾಖಲಿಸಿವೆ. ಅಷ್ಟಾರ್ಟ್, ತನಿತ್ ಈ ಹೆಸರಿನಿಂದ ಕರೆಸಿಕೊಳ್ಳುತ್ತಿದ್ದ ಮಾತೃದೇವತೆಯು ಉತ್ತರ ಆಫ್ರಿಕಾದ ಕರಾವಳಿ ಉದ್ದಕ್ಕೂ ಬಹಳ ಜನಪ್ರಿಯಳಾಗಿದ್ದಳು. ಅರೆಬಿಯಾದಲ್ಲಿ ಆಯ್‌–ಲಟ್ ಅಥವಾ ಆಯ್‌–ಉಜ್ಜಾ ಮಾತೃದೇವತೆಯ ಪೂಜೆಯೊಂದಿಗೆ ತಾತ್ಕಾಲಿಕ ಧಾರ್ಮಿಕ ವೇಶ್ಯಾಗಾರಿಕೆಯು ರೂಢಿಯಲ್ಲಿತ್ತು ಎಂಬುದನ್ನು ಟಾವ್ನಿ ಮತ್ತು ಪೆಂಜರ್ ಉಲ್ಲೇಖಿತ್ತಾರೆ."[೧೧]

ಜಗತ್ತಿನ ಇತರೆಡೆಯಂತೆ ಪಶ್ಚಿಮ ಆಫ್ರಿಕಾದಲ್ಲಿಯೂ ವೇಶ್ಯಾಪದ್ಧತಿ ರೂಢಿಯಲ್ಲಿದ್ದಿತು ಎಂದು ತಿಳಿದುಬರುವುದು. ಪಶ್ಚಿಮ ಆಫ್ರಿಕಾದ ಸ್ಲೇವ್‌ಕೋಸ್ಟ್ ಮತ್ತು ಗೋಲ್ಡ್‌ಕೋಸ್ಟ್‌ಗಳಲ್ಲಿ ಪವಿತ್ರ ವೇಶ್ಯಾಗಾರಿಕೆಯು ರೂಡಿಯಲ್ಲಿದ್ದಿತು ಎಂದು ಬರ್ಟನ್ ಮತ್ತು ಎಲ್ಲಿಸ್ ಫ್ರೇಜರ್ ಮುಂತಾದ ವಿದ್ವಾಂಸರು ಗುರುತಿಸಿದ್ದಾರೆ.



"ದೇವರಿಗೆ ಅರ್ಪಿಸಲ್ಪಟ್ಟ ಗಂಡು ಅಥವಾ ಹೆಣ್ಣು ಯಾರೇ ಆಗಿರಲಿ ಅವರನ್ನು 'ಕೋಸಿಯೋ' (ಉಪಯೋಗವಿಲ್ಲದವರು) ಎಂದು ಕರೆಯಲಾಗುತ್ತಿತ್ತು.[೧೨] ದೇವರಿಗೆ ಅರ್ಪಿಸಲ್ಪಟ್ಟವರು ದೇವರ ಸ್ವತ್ತಾಗುತ್ತಾರೆ. ಕೋಸಿಯೋನ ದಂಥೆ ವೇಶ್ಯಾಗಾರಿಕೆಯಾಗಿರುತ್ತಿತ್ತು. ಪ್ರತಿಯೊಂದು ಪಟ್ಟಣದಲ್ಲೂ ಹತ್ತರಿಂದ ಹನ್ನೆರಡು ವರ್ಷ ವಯೋಮಾನದ ಸುಂದರ ಹುಡುಗಿಯರನ್ನು ಸ್ವೀಕರಿಸಲು ಈ ಬಗೆಯ ಒಂದು ಸಂಸ್ಥೆ ಅಸ್ತಿತ್ವದಲ್ಲಿತ್ತು. ಹೆಣ್ಣು ಮೂರು ವರ್ಷಗಳವರೆಗೆ ಸಂಸ್ಥೆಯಲ್ಲಿದ್ದು, ವೇಶ್ಯಾಗಾರಿಕೆಯ ಕುಶಲತೆಯ ಕುರಿತು ತರಬೇತಿ ಹೊಂದುತ್ತಿದ್ದರು. ಮೂರು ವರ್ಷಗಳ ನಂತರ ಸಾರ್ವಜನಿಕ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಅಂತಹ ಹೆಣ್ಣುಗಳನ್ನು ದೇವರೊಂದಿಗೆ ಮದುವೆಯಾದವರೆಂದೇ ಪರಿಭಾವಿಸುತ್ತಾರೆ. ಅಂತಹ ಹೆಣ್ಣಿಗೆ ಹುಟ್ಟಿದ ಮಕ್ಕಳು ದೇವರಿಗೆ ಸೇರಿದವರಾಗಿರುತ್ತಾರೆ".[೧೩]

"ಪ್ರಾಚೀನ ಕಾಲದಲ್ಲಿ ಪೆರು, ಮೆಕ್ಸಿಕೋ, ಬೋರ್ಗಿಯೋ, ಜಪಾನ್, ಭಾರತ, ಪಶ್ಚಿಮ ಏಷಿಯಾ, ಪ್ರಾಚೀನ ಮಧ್ಯ ಅಮೇರಿಕಾ ಮತ್ತು ಪಶ್ಚಿಮ ಆಫ್ರಿಕಾ ಮುಂತಾದ ರಾಷ್ಟ್ರಗಳಲ್ಲಿ ವೇಶ್ಯಾ ಪದ್ಧತಿ ಆಸ್ತಿತ್ವದಲ್ಲಿದ್ದನ್ನು ಗುರುತಿಸಬಹುದು. ವೇಶ್ಯಾಗಾರಿಕೆ ಪದ್ಧತಿ ಧಾರ್ಮಿಕತೆಯ ಹೆಸರಿನಲ್ಲಿ ಎಲ್ಲೆಡೆ ಆಸ್ತಿತ್ವಕ್ಕೆ ಬಂದಿದೆ. ದೇವರಿಗೆ ಅರ್ಪಣೆಯಾಗಿ ದೇವದಾಸಿಯಾದವಳು ಸ್ಥಳೀಯ ಪುರೋಹಿತ, ದೇವಾಲಯದ ಮೇಲುಸ್ತುವಾರಿ ಮಾಡುವ ವ್ಯಕ್ತಿಗೆ ದೈವದ ಹೆಸರಿನಲ್ಲಿ ಇಲ್ಲವೇ ಧಾರ್ಮಿಕ ನಿಯಮಗಳ ಹೆಸರಿನಲ್ಲಿ ಕಡ್ಡಾಯವಾಗಿ ತಮ್ಮನ್ನು ಲೈಂಗಿಕ ಸೇವೆಗೆ ಅರ್ಪಿಸಿಕೊಳ್ಳಬೇಕಿತ್ತು. ಅಲ್ಲದೇ ಅವರು ನರ್ತಕಿಯರಾಗಿ, ಸೇವಕಿಯರಾಗಿ ಹಲವು ರೀತಿಯ ಸೇವೆಯನ್ನು ಮಾಡಲೇಬೇಕಿತ್ತು. ಧರ್ಮ ಮತ್ತು ಫಲವಂತಿಕೆಯ ಹೆಸರಿನಲ್ಲಿ ಹೆಣ್ಣನ್ನು ಲೈಂಗಿಕವಾಗಿ ಶೋಷಿಸುವ ಮತ್ತು ಅವರ ಮುಗ್ದತೆಯನ್ನು ವಂಚಿಸುವ ಪರಿ ಜಗತ್ತಿನೆಲ್ಲೆಡೆ ಇದ್ದಿದ್ದು ಈ ಆಚರಣೆಯಿಂದ ನಮಗೆ ಸ್ಪಷ್ಟವಾಗುತ್ತದೆ. "ಯಾವಾಗ ಮನುಷ್ಯನ ಭಾವನೆಗಳು ಆಚರಣೆಯೊಳಗೆ ಪ್ರವೇಶಿಸುತ್ತವೆಯೋ ಆಗ ಭಾವೋದ್ರೇಕಗೊಂಡ ಮತ್ತು ಸಾಕಷ್ಟು ವಿಚಿತ್ರ ಸ್ವಭಾವ ಮತ್ತು ವಾತಾರವಣದ ಪರಿಸ್ಥಿತಿಗಳು 'ಕಾಮೋದ್ರೇಕ' ಚಟುವಟಿಕೆಗಳಿಗೆ ಉತ್ತೇಜನ ನೀಡುತ್ತವೆ. ಇಲ್ಲಿ ಧಾರ್ಮಿಕ ಆಚರಣೆಯ ಪಾತ್ರ ಗಮನಾರ್ಹವಾದುದಲ್ಲ"[೧೪] ಎಂದು ಜೋಗನ್ ಶಂಕರ್ ಅವರು ತಿಳಿಸುವರು.

### ೨.೪ ಭಾರತದಲ್ಲಿ ವೇಶ್ಯಾ ಪದ್ಧತಿ

ವೇಶ್ಯಾವೃತ್ತಿ ಅಥವಾ ಅದಕ್ಕೆ ಸಂವಾದಿಯಾದ ವೃತ್ತಿಗಳಲ್ಲಿ ತೊಡಗಿದ ಮಹಿಳೆಯರ ಕುರಿತಂತೆ ಪ್ರಾಚೀನ ಕೃತಿಗಳು ಶಾಸನಗಳಲ್ಲಿ ಸಾಂದರ್ಭಿಕವಾಗಿ ಉಲ್ಲೇಖಿಸಿರುವುದನ್ನು ಕಾಣುತ್ತೇವೆ.

ಭಾರತದ ಪ್ರಾಚೀನ ಕೃತಿಗಳಲ್ಲಿ ದೇವರ ಸೇವೆ ಮಾಡಲು ನಿಯೋಜನೆಗೊಂಡ ದೇವದಾಸಿಯರಲ್ಲಿ ಏಳು ಬಗೆ ಇರುವುದಾಗಿ ಹೇಳಲಾಗಿದೆ. ಅವುಗಳೆಂದರೆ

೧ ದತ್ತ: ದೇವಾಲಯಕ್ಕೆ ತನ್ನನ್ನು ಅರ್ಪಿಸಿಕೊಳ್ಳುವವಳು

೨ ವಿಕ್ರಿತಾ: ದೇವಾಲಯದ ಸೇವಾ ಕಾರ್ಯಕ್ಕೆ ತನ್ನನ್ನು ಮಾರಿಕೊಂಡವಳು

೩ ಭೃತ್ಯಾ: ಕುಟುಂಬದ ಪೋಷಣೆಯ ಸಲುವಾಗಿ ದೇವದಾಸಿಯಾದವಳು

೪ ಭಕ್ತಾ: ಭಕ್ತಿಯ ಕಾರಣಕ್ಕಾಗಿ ದೇವದಾಸಿಯಾದವಳು

೫ ಹೃತ್ಯಾ: ಅಪಹೃತಳಾಗಿ ಬಂದವಳು, ದೇವಾಲಯಕ್ಕೆ ಉಡುಗೊರೆಯಾಗಿ ನೀಡಲ್ಪಟ್ಟವಳು

೬ ಅಲಂಕಾರ: ದೇವಾಲಯದ ಅಲಂಕಾರಣ ಕಾರ್ಯಕ್ಕೆ ರಾಜ ಅಥವಾ ಮಂತ್ರಿಯಿಂದ ನಿಯೋಜಿತಳಾದವಳು

೭ ರುದ್ರಗಣಿಕಾ/ಗೋಪಿಕಾ: ನಿಯಮಿತ ವೃತ್ತಿವೇತನ ಪಡೆದು ನೃತ್ಯ ಗಾಯನ ಮಾಡುವವಳು

"ಕರ್ನಾಟಕದ ಶಿಲಾ ಶಾಸನಗಳಲ್ಲಿ ಅಂಗಭೋಗ, ರಂಗಭೋಗಗಳ ಉಲ್ಲೇಖ ದೊರೆಯುತ್ತದೆ. ದೇವರಿಗೆ ಅಂಗಭೋಗದ ಸೇವೆಯನ್ನು ಮಾಡುವವಳು(ಚಾಮರಸೇವೆ, ಕಸಗುಡಿಸುವುದು, ದೇವರಕಾರ್ಯಕ್ಕೆ ಹೂವು ಇತ್ಯಾದಿ ಒದಗಿಸುವ ಕಾಯಕ ಮಾಡುವವಳು), ರಂಗಭೋಗ ಸೇವೆಯಂದರೆ ದೇವರ ಪೂಜಾ ಕಾರ್ಯದ ಸಂದರ್ಭದಲ್ಲಿ ಗಾಯನ ನೃತ್ಯ ಮಾಡುವವಳು ಎಂದು ಹೇಳಲಾಗುವುದು. ಚೋಳರಾಜನ ೧೦೦೪ರ ಶಾಸನದಲ್ಲಿ ತಂಜಾವೂರಿನ ಬೃಹದೇಶ್ವರ ದೇವಾಲಯದ ಸುತ್ತ ನಾಲ್ಕು ಬೀದಿಗಳಲ್ಲಿ ೪೦೦ ದೇವದಾಸಿಯರಿಗಾಗಿ ಉಚಿತ ವಸತಿಗಳನ್ನು ನಿರ್ಮಿಸಿ ಅವರ ಜೀವನ ನಿರ್ವಹಣೆಗಾಗಿ ಭೂಮಿಯನ್ನು ಉಂಬಳಿಯಾಗಿ ನೀಡಿದ ಉಲ್ಲೇಖವಿದೆ."

ದೇವದಾಸಿಯರನ್ನು ಮಂಗಳಮುಖಿ, ನಿತ್ಯ ಸುಮಂಗಲಿ, ನಾಯಕಸಾನಿ, ಬಸವಿ ಇತ್ಯಾದಿ ಹೆಸರುಗಳಿಂದ ಕರೆಯುವರು. ಆಂಧ್ರ ಹಾಗೂ ಕರ್ನಾಟಕದಲ್ಲಿ ಬಸವಿ ಎಂದು ದೇವದಾಸಿಯರನ್ನು ಕರೆಯಲಾಗುವುದು. ಧಾರ್ಮಿಕ ಸಂಸ್ಥೆಯ ಮುಖ್ಯಸ್ಥ, ಗುರು ಹಾಗೂ ಹಣವಂತರ ಕಾಮಲಾಲಸೆಯನ್ನು ಪೂರೈಸುವ ಕಾಯಕವನ್ನು ಹೆಣ್ಣು ದೇವದಾಸಿಯ ಹೆಸರಿನಲ್ಲಿ ಮಾಡಬೇಕಾಗಿದ್ದಿತು. ಭಾರತೀಯ ಸಂಸ್ಕೃತಿಯ ಪೂರ್ವದಲ್ಲಿ ದೇವದಾಸಿಯರಿಗೆ ಸಾಮಾಜಿಕವಾಗಿ ಗೌರವದ ಸ್ಥಾನವಿದ್ದಿತು. ಆದರೆ ದೇವದಾಸಿ ಪದ್ಧತಿಯ ಗೌರವ ಕಡಿಮೆಯಾಗುತ್ತಾ ದೇವದಾಸಿಯರನ್ನು ಸಮಾಜ ಹೀನಾಯವಾಗಿ ಕಾಣತೊಡಗಿತು. ವೃತ್ತಿಗೌರವ ಕಳೆದುಹೋದಂತೆಲ್ಲಾ ಈ ಪರಂಪರೆಗೆ ವೇಶ್ಯಾವಾಟಿಕೆಯೆಂಬ ಅರ್ಥ ಬರತೊಡಗಿತು. ಬ್ರಿಟೀಷರ ಕಾಲದಲ್ಲಿಯೇ ವೇಶ್ಯಾವಾಟಿಕೆ ನಿಷೇಧ ಕಾಯ್ದೆ ಜಾರಿಯಾದವು. ಮುಂಬಯಿ (೧೯೨೩), ಉತ್ತರ ಪ್ರದೇಶ ಮತ್ತು ಬಂಗಾಲ (೧೯೩೩), ಬಿಹಾರ (೧೯೪೮) ಮೈಸೂರು ರಾಜ್ಯ (೧೯೫೬)ಗಳಲ್ಲಿ ವೇಶ್ಯಾವಾಟಿಕೆ ನಿಷೇಧ ಕಾಯ್ದೆಯು ವಿವಿಧ ಹಂತಗಳಲ್ಲಿ ಜಾರಿಗೊಂಡಿತು. ಭಾರತ ಸರ್ಕಾರವು ೧೯೫೬ರಲ್ಲಿ ಮಹಿಳೆಯರ ಅನೈತಿಕ ವ್ಯವಹಾರ ನಿಷೇಧ ಕಾಯ್ದೆಯನ್ನು ದೇಶಾದ್ಯಂತ ಏಕರೂಪವಾಗಿ ಜಾರಿಗೊಳಿಸಿತು.

ಭಾರತವು ಪತಿವ್ರತೆಯರಿಗೆ, ಸತಿವ್ರತರಿಗೆ, ಏಕಪತ್ನಿ ವ್ರತಸ್ಥರಿಗೆ ಹೆಸರಾಗಿರುವಂತೆಯೇ ಸುರ ಸುಂದರಿಯರು, ವಿಲಾಸೀ ಸ್ತ್ರೀಯರು, ದೇವದಾಸಿಯರು ಮೊದಲಾದವರಿಗೂ ವಿಖ್ಯಾತವಾಗಿದೆ. ನಮ್ಮಲ್ಲಿ ಸೀತಾ, ಸಾವಿತ್ರಿಯರೂ ಇದ್ದಾರೆ. ರಂಭೆ, ಊರ್ವಶಿ, ಮೇನಕೆಯರೂ ಇದ್ದಾರೆ. ಆಂಜನೇಯನಂತೆ ಕಟ್ಟುನಿಟ್ಟಾದ ಬ್ರಹ್ಮಚರ್ಯ ಹಾಗೂ ಶ್ರೀರಾಮಚಂದ್ರನಂತೆ ಏಕಪತ್ನಿ ವ್ರತಸ್ಥನಾಗಿರುವಿಕೆಗಳು ಪ್ರಖ್ಯಾತಿಗೊಂಡಿರುವಂತೆ ವೇಶ್ಯೆಯರಲ್ಲಿನ ಒನಪು ಒಯ್ಯಾರ, ಬೆಡಗು, ಬಿನ್ನಾಣ, ಮೋಜು ಮೊದಲಾದವು ಜನಜನಿತವಾಗಿವೆ. ಪ್ರಾಚೀನ ಭಾರತದಲ್ಲಿ ವೇಶ್ಯಾವೃತ್ತಿಯು ವಿಶೇಷ ಸಾಮಾಜಿಕ ಸಂಸ್ಥೆಯಾಗಿ ಬೆಳೆದು ಬಂದಿರುವುದನ್ನು ಗುರುತಿಸಬಹುದಾಗಿದೆ. ಇಂದ್ರದೇವನ ಆಸ್ಥಾನದಲ್ಲಿ ರಂಭೆ, ಊರ್ವಶಿ ಮೊದಲಾದ ಸುರಸುಂದರಿಯರು ನೃತ್ಯ ಮಾಡಿ ದೇವತೆಗೆ ಹಾಗೂ ಅತಿಥಿಗಳ ಮನಸ್ಸನ್ನು ಸಂತೋಷಪಡಿಸುತ್ತಿದ್ದರು. ತಪಸ್ವಿಗಳ ತಪಸ್ಸಿನ ಶಕ್ತಿಯನ್ನು ಭಂಗಗೊಳಿಸಲು, ಅವರ ಏಕಾಗ್ರತೆಯನ್ನು ಒರೆ ಹಚ್ಚಲು ದೇವಲೋಕದ ಕನ್ಯಾಮಣಿಗಳನ್ನು ಕಳುಹಿಸಿ ಕೊಡಲಾಗುತ್ತಿತ್ತು.

ಉದಾಹರಣೆಗೆ ವಿಶ್ವಾಮಿತ್ರನ ತಪಸ್ಸನ್ನು ಮೇನಕೆಯು ಭಂಗಗೊಳಿಸಿದಳೆಂಬುದು ಲೋಕವಿಖ್ಯಾತ ಸಂಗತಿಯಾಗಿರುವುದು. ಹಿಂದೆ ಚಕ್ರವರ್ತಿಗಳಿಗೆ, ಸಾರ್ವಭೌಮರಿಗೆ, ರಾಜಮಹಾರಾಜರುಗಳಿಗೆ ವಿಶೇಷ ಸಂದರ್ಭಗಳಲ್ಲಿ ಹಾಗೂ ಯುದ್ಧದಲ್ಲಿ ವಿಜಯಿಗಳಾದಾಗ ಸುಂದರ ಕನ್ಯಾಮಣಿಗಳನ್ನು ಕೊಡಲಾಗುತ್ತಿತ್ತು. ಕೆಲವಾರು ಸಂದರ್ಭಗಳಲ್ಲಿ ಆಕರ್ಷಕ ಮೈಮಾಟವಿರುವ ವಿಷ ಕನ್ಯೆಯರನ್ನು ಉಪಯೋಗಿಸಿ ಶತ್ರುಗಳನ್ನು ಸುಲಭವಾಗಿ ಕೊಲ್ಲುವ ಪರಿಪಾಟವಿತ್ತು. ಬೌದ್ಧರ ಕಾಲದಲ್ಲಿ ಮೌರ್ಯ ಚಕ್ರಾಧಿಪತ್ಯದ ಅವಧಿಯಲ್ಲಿಯೂ ವೇಶ್ಯಾವೃತ್ತಿ ವ್ಯಾಪಕವಾಗಿ ಅಸ್ತಿತ್ವದಲ್ಲಿತ್ತು ಎಂದು ಕೆಲ ಆಕರಗಳು ವಿಶದೀಕರಿಸುತ್ತವೆ. ಅದೇ ರೀತಿ ಸಂಗಂ ಯುಗದಲ್ಲಿ ಈ ಪದ್ಧತಿ ಅಸ್ತಿತ್ವದಲ್ಲಿತ್ತು. ಅಂದು ಮಧುಮೇಖಲೆ, ಮಣಿಮೇಖಲೆಯರು ಪ್ರಸಿದ್ಧ ವೇಶ್ಯೆಯರಾಗಿದ್ದರೆಂದು ಸಮಕಾಲೀನ ಕವಿಗಳು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ.

ಭಾರತದಲ್ಲಿ ಹಿಂದೆ ವೇಶ್ಯಾವೃತ್ತಿಗೆ ಧಾರ್ಮಿಕ ಮನ್ನಣೆಯನ್ನು ಕೊಡಲಾಗಿತ್ತು. ಕೆಲವು ಜಾತಿ ಉಪಜಾತಿಗಳ ಕೆಲವಾರು ಕುಟುಂಬಗಳಲ್ಲಿ ತಮ್ಮ ಹೆಣ್ಣುಮಕ್ಕಳನ್ನು ದೇವರು/ದೇವತೆಗಳಿಗೆ ಅರ್ಪಿಸುತ್ತಿದ್ದರು. ಅವರನ್ನು ದೇವದಾಸಿಯರು ಅಥವಾ ಬಸವಿಯರು ಎಂದು ಕರೆಯಲಾಗುತ್ತಿತ್ತು. ಅವರಿಗೆ ನಿರ್ದಿಷ್ಟ ದೇವರು/ದೇವತೆ ಪೂಜೆ, ಉತ್ಸವ, ಜಾತ್ರೆ ಮೊದಲಾದ ಸಂದರ್ಭಗಳಲ್ಲಿ ಪ್ರಾರ್ಥನಾಸಭೆ ಸಮಾರಂಭಗಳಲ್ಲಿ ಹೆಚ್ಚಿನ ಸ್ಥಾನಮಾನ ಹಾಗೂ ಪ್ರಾಮುಖ್ಯತೆಯನ್ನು ಕೊಡಲಾಗುತ್ತಿತ್ತು. ಅವರನ್ನು ಕಾಲಕ್ರಮೇಣ ಶ್ರೀಮಂತರು, ಪ್ರತಿಷ್ಠಿತರು, ಅರ್ಚಕರು ತಮ್ಮ ಕಾಮಕೇಳಿಗಾಗಿ ಉಪಯೋಗಿಸಿಕೊಂಡು ಇಡೀ ಜೀವನಪರ್ಯಂತ ಅವರು ವೇಶ್ಯೆಯರಾಗಿಯೇ ಬದುಕಬೇಕಾಗಿರುವ ಕಟ್ಟುಕಟ್ಟಳೆಗಳನ್ನು ವ್ಯವಸ್ಥಿತವಾಗಿ ವಿಧಿಸಿರುವುದನ್ನು ಗುರುತಿಸಬಹುದಾಗಿದೆ. ಕೆಲವರು ಅನೂಚಾನವಾಗಿ ಅನುಸರಿಸಿಕೊಂಡು ಬರುತ್ತಿರುವ ದೇವದಾಸಿ ಪದ್ಧತಿಯನ್ನು ಶಾಸ್ತ್ರೀಯವಾಗಿ ಶೋಧನೆ ಮಾಡಿದಾಗ ಅಮಾಯಕ, ಮುಗ್ಧ ಜನರನ್ನು ದೇವರು ಹಾಗೂ ಧರ್ಮದ ಹೆಸರಿನಲ್ಲಿ ಹೇಗೆ ದಾರಿ ತಪ್ಪಿಸಿ ದುರುಪಯೋಗಪಡಿಸಿಕೊಳ್ಳಲಾಗಿದೆ ಎಂಬುದು ವೇದ್ಯವಾಗುತ್ತದೆ. ಮಧ್ಯಯುಗದಲ್ಲಂತೂ ಮಹಿಳೆ ಹಾಗೂ ಮದ್ಯಗಳಿಗೆ ಹೆಚ್ಚಿನ ಆದ್ಯತೆ ದೊರಕಿದೆ. "ರಾಜ ಮಹಾರಾಜರುಗಳ ರಾಣಿವಾಸಗಳಲ್ಲಿ ಆಕರ್ಷಕ ಮೈಮಾಟವಿರುವ ಸುಂದರ ಸ್ತ್ರೀಯರಿಗೆ ವಿಶೇಷ ಅವಕಾಶಗಳು ಪ್ರಾಪ್ತವಾಗಿವೆ. ವೇಶ್ಯೆಯರಿಗೂ ರಾಜಾಶ್ರಯ ಸಿಕ್ಕಿದೆ. ರಾಜ ಮಹಾರಾಜರು, ನವಾಬರು, ನಿಜಾಮರು ಹತ್ತಾರು ಪತ್ನಿಯರು ಹಾಗೂ ಉಪಪತ್ನಿಯರನ್ನು ಪಡೆದಿದ್ದಕ್ಕೆ ಹಾಗೂ ಇರಿಸಿಕೊಂಡಿದ್ದಕ್ಕೆ ನಿದರ್ಶನಗಳಿವೆ."[೨೫] ವಿಶ್ವದ ಇತರೆಡೆಯಂತೆ ಆರಂಭಿಕ ಕಾಲಘಟ್ಟಗಳಲ್ಲಿ ಭಾರತದ ದೇವಾಲಯಗಳಲ್ಲಿ ವೇಶ್ಯಾಗಾರಿಕೆ ಇದ್ದುದಕ್ಕೆ ನಮಗೆ ಹೆಚ್ಚು ಸಾಕ್ಷ್ಯಾಧಾರಗಳಿಲ್ಲ. ಆದರೆ ಎಂದು ಆರಂಭವಾಯಿತು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟಕರ. ಭಾರತದ ಪ್ರಾಗೈತಿಹಾಸಿಕ ನಗರಗಳಲ್ಲಿ ವಾಸಿಸುತ್ತಿದ್ದ ಜನರಿಗೆ ವೇಶ್ಯಾಪದ್ಧತಿ ಪರೋಕ್ಷ ಪರಿಚಯವಿತ್ತೆಂದು ಕೆಲ ವಿದ್ವಾಂಸರು ಚರ್ಚಿಸಿದ್ದಾರೆ. ಲಭ್ಯ ಆಕರಗಳ ಸಹಾಯದಿಂದ ಇಲ್ಲಿದ್ದ ವೃಷಭ ಮತ್ತು ಮಾತೃ ಆರಾಧನೆಗಳೇ ವೇಶ್ಯಾ ಪದ್ಧತಿ ಆರಂಭವಾಗಲು ಕಾರಣವಾಗಿರುವ ಸಾಧ್ಯತೆ ಇದೆ ಎನ್ನಬಹುದು. ಮೆಡಿಟರೇನಿಯನ್ ಪ್ರದೇಶ ಮತ್ತು ಮಧ್ಯ ಪ್ರಾಚ್ಯ ಪ್ರದೇಶಗಳ ಬೇಸಾಯ ಪ್ರಧಾನ ನಾಗರಿಕತೆಗಳಲ್ಲಿದ್ದಂತೆ

ಭಾರತದ ಪ್ರಾಚೀನ ನಾಗರಿಕತೆಯಾದ ಸಿಂಧೂ ಬಯಲಿನ ನಾಗರೀಕತೆಯಲ್ಲಿಯೂ ಮಾತೃದೇವತೆಯ ಉಪಾಸನೆಯನ್ನು ಫಲವತ್ತತೆಯ ಹೆಸರಿನಲ್ಲಿ ಆರಾಧಿಸುತ್ತಿದ್ದರು. "ಹರಪ್ಪ ಮತ್ತು ಮಹೆಂಜೊದಾರೊಗಳ ಸುತ್ತುಮುತ್ತಲಿನ ಕ್ವೆಟ್ಟಾ, ಉತ್ತರದ ಜಯೋಬ್ ನಿವೇಶನಗಳಲ್ಲಿ ದೊರೆತಿರುವ ಅನೇಕ ಪ್ರತಿಮೆಗಳು ಮತ್ತು ಚಿತ್ರಗಳೇ ಇದಕ್ಕೆ ಸಾಕ್ಷಿಯಾಗಿವೆ. ಈ ನಾಗರಿಕತೆಯಲ್ಲಿಯೂ ಬೇರೆಡೆಯಂತೆಯೇ ಮಾತೃದೇವತೆಯ ಉಪಾಸನೆಯು ಅಲ್ಲಿ ದೊರೆತ ವೃಷಭ ರೂಪಗಳೊಂದಿಗೆ ಸಂಬಂಧ ಹೊಂದಿತ್ತು ಎಂದು ಕೆಲ ವಿದ್ವಾಂಸರು ಹೇಳುತ್ತಾರೆ"[೧೬] ಪ್ರಾಚೀನ ನಾಗರಿಕತೆಗಳಲ್ಲಿ ವೃಷಭವನ್ನು ಚಂದ್ರನಲ್ಲಿ ಅವಾಸ ಸ್ಥಾನ ಹೊಂದಿತ್ತು ಮತ್ತು ಅದು ಉತ್ಪತ್ತಿ ಸಾಮರ್ಥ್ಯವನ್ನು ಹೊಂದಿದ 'ಜಗತ್ತಿನ ಆತ್ಮವೆಂದು' ಎಂದು ಭಾವಿಸಿ ಜನರು ಆರಾಧಿಸುತ್ತಿದ್ದರು. ಇದೇ ಕಾರಣಕ್ಕೆ 'ಚಂದ್ರಮಾನ ವೃಷಭ'ವನ್ನು ಪ್ರಾಚೀನ ಪರ್ಶಿಯನ್ ಧರ್ಮದಲ್ಲಿ ಪರಿಗಣಿಸಲಾಗಿತ್ತು.

ಜಗತ್ತಿನಾದ್ಯಂತ ವೃಷಭ ಉಪಾಸನೆ ಇತ್ತೆಂಬುದನ್ನು ಅನೇಕರು ಧೃಡಪಡಿಸಿದ್ದಾರೆ. ಈ ತಿಳುವಳಿಕೆ ಜೊರೊಷ್ಟ್ರೀಯನ್ ಧರ್ಮಕ್ಕಿಂತಲೂ ಖಂಡಿತವಾಗಿಯೂ ಹಿಂದಿನದು. ಎಲ್ಲಾ ಜೀವಿಗಳಿಗಿಂತಲೂ ಮೊದಲನೆಯದಾದ ವೃಷಭ, ಚಂದ್ರ ಪ್ರಧಾನ ದೇವತೆಯ ಸ್ವರೂಪವೇ ಆಗಿತ್ತೆಂಬುದರಲ್ಲಿ ಸಂದೇಹವೇ ಇಲ್ಲ ಎಂದು ವಿದ್ವಾಂಸರಾದ ಬ್ರಿಫಾಲ್ಟ್ ಅಭಿಪ್ರಾಯ ಪಡುತ್ತಾರೆ. ಧಾರ್ಮಿಕ ಗ್ರಂಥವಾದ 'ಜೆಂಡ್-ಅವೆಸ್ತಾ'ದಲ್ಲಿ ಆದಿ ವೃಷಭವನ್ನು ಸ್ತುತಿಸುವ ಮಂತ್ರಗಳಿವೆ. "ನೆಲದ ಮೇಲೆ ಸಮೃದ್ಧಿಯಾಗಿ ಹುಲ್ಲು ಬೆಳೆಯಲು ಕಾರಣವಾದ ಪ್ರಧಾನ ವೃಷಭವೇ, ನಾನು ನಿನ್ನನ್ನು ಅವಾಹನೆ ಮತ್ತು ಸ್ತುತಿಸುತ್ತೇನೆ".[೧೭] 'ಜೆಂಡ್-ಅವೆಸ್ತಾ'ದಲ್ಲಿರುವ ಇತರೆ ಕೆಲವು ಮಂತ್ರಗಳು ವೃಷಭ ಒಂದು ಫಲವತ್ತತೆಯ ಪ್ರಾಚೀನ ದೇವತೆ ಎಂಬುದನ್ನು ಸಂಕೇತಿಸುತ್ತವೆ. ವೃಷಭ ಮತ್ತು ಇಂದ್ರನನ್ನು ಅಂದು ಶಿವನ ಅವತಾರವೆಂದು ಭಾವಿಸಿ ಆರಾಧಿಸಲಾಗುತ್ತಿತ್ತು. ಆದರೆ ಕೆಲವು ಧಾರ್ಮಿಕ ಸಮಾರಂಭಗಳಲ್ಲಿ ವೃಷಭವನ್ನು ಬಲಿಕೊಡಲಾಗುತ್ತಿತ್ತೆಂಬುದು ಕೆಲ ವಿದ್ವಾಂಸರ ಅಭಿಮತ. "ಸೋಮದ ಸಹಯೋಗದೊಂದಿಗೆ ಹಿಂದೆ ನಡೆಯುತ್ತಿದ್ದ 'ಅಗ್ನಿ ಶೋಮಿಯ' ಎನ್ನುವ ಧಾರ್ಮಿಕ ಸಮಾರಂಭಗಳಲ್ಲಿ ವೃಷಭಗಳನ್ನು ಬಲಿ ಕೊಡಲಾಗುತ್ತಿತ್ತು"[೧೮] ಎಂದು ವಿದ್ವಾಂಸರಾದ ಡುಬಾಯ್ಸ್ ಹೇಳುತ್ತಾರೆ". ಸಿಂಧೂ ಬಯಲಿನ ನಾಗರಿಕತೆಯಲ್ಲಿನ ಮುದ್ರೆ ಮತ್ತು ಮಡಿಕೆಗಳ ಮೇಲೆ ವೃಷಭಗಳನ್ನು ಚಿತ್ರಿಸಲಾಗಿದೆ. ಅದೇ ರೀತಿ ಜಯೋಬ್ ಪ್ರದೇಶದ ರಣಗುಂಡೈ ಮತ್ತು ಕೊಲ್ಲಿಯ ಮಡಕೆಗಳಲ್ಲಿ ಮುಖ್ಯ ಆಶಯವಾಗಿ ವೃಷಭವನ್ನು ಚಿತ್ರಿಸಿರುವುದನ್ನು ಕಾಣಬಹುದು. ಪ್ರಾಚೀನ ಭಾರತದಲ್ಲಿದ್ದ ವೃಷಭನ ಆರಾಧನೆಯೊಂದಿಗೆ ಸಮೀಕರಿಸಲ್ಪಟ್ಟ ಮಾತೃ ಆರಾಧನೆಯೇ ಮುಂದೆ ವೇಶ್ಯೆ ಪದ್ಧತಿಯಂತಹ ಆಚರಣೆಗಳು ಹುಟ್ಟಿಕೊಳ್ಳಲು ಕಾರಣವಾಯಿತು.

"ಸಿಂಧೂ ನಾಗರಿಕತೆಯಲ್ಲಿ ದೊರೆತ ವಿಗ್ರಹಗಳನ್ನು ವಿದ್ವಾಂಸರಾದ ಮುರ್ರೆಯವರು ಮೂರು ರೀತಿಯಲ್ಲಿ ವಿಂಗಡಿಸಿದ್ದಾರೆ. ಮೊದಲನೆಯದಾಗಿ ಪೂಜನೀಯ ಸ್ತ್ರೀ, ಎರಡನೆಯದಾಗಿ ಪೂಜನೀಯ ತಾಯಿ, ನಂತರ ಯೋನಿ"[೧೯] ಮುರ್ರೆ ಅವರು ಹೇಳಿದಂತೆ ಆ ಕಾಲದಲ್ಲಿ ಯೋನಿ ಆರಾಧನೆ ಇತ್ತು.

ಮಾತೃದೇವತಾ ಆರಾಧನೆಯಲ್ಲಿ ಯೋನಿ ಆರಾಧನೆ ಒಂದು ವಿಶೇಷ ಆರಾಧನಾ ಪದ್ಧತಿಯಾಗಿದೆ. ಹೆಣ್ಣು ಮತ್ತು ಭೂಮಿಯನ್ನು ಸಮಾನವಾಗಿ ಪರಿಭಾವಿಸುವ ಮನೋಭಾವನೆ ಉಂಟಾಗಿ, ಸ್ತ್ರೀಯಷ್ಟೇ ಅಲ್ಲದೆ ಅವಳ ಗರ್ಭದಿಂದ ಹೊರಬರುವ ಅವಳ ದೇಹದ ಭಾಗವನ್ನು ಶೇಷವಾಗಿ ಕಂಡಿರಬೇಕು. ಭೂಮಿ ಮತ್ತು ಹೆಣ್ಣಿಗೆ ಸಾಮ್ಯವನ್ನು ಗುರುತಿಸಿ ಹೆಣ್ಣಿನ ಪ್ರಜನನದ ಅಂಗ, ಯೋನಿ ಪೂಜೆ ಮಾನ್ಯತೆಯನ್ನು ಹೊಂದಿತ್ತು. ಇಂದಿಗೂ ಕೂಡ ಹದಿನೆಂಟು ಶಕ್ತಿಪೀಠಗಳಿದ್ದು, ಅಲ್ಲಿ ಶಕ್ತಿ ದೇವತಾ ಆರಾಧನೆ ಮುಂದುವರಿದುಕೊಂಡು ಬಂದಿದೆ. "ಅಸ್ಸಾಂನ ಗೌಹಾಟಿ ಕಾಮಾಖ್ಯ ಯೋನಿ ಪೀಠ ಹದಿಮೂರನೇ ಪೀಠವಾಗಿದೆ. ಇದೇ ನಾಗರೀಕತೆಯಲ್ಲಿ ದೊರೆತ ಹಲವು ನಗ್ನ ಶಿಲ್ಪಗಳು ಮತ್ತು ನೃತ್ಯಗಾತಿಯ ಶಿಲ್ಪಗಳು ಮತ್ತು ಭಾರತದಾದ್ಯಂತ ದೊರೆಯುವ ಲಜ್ಜಾಗೌರಿ ಶಿಲ್ಪಗಳು ಮಾತೃ ಪೂಜೆಯ ಪ್ರತೀಕಗಳಾಗಿವೆ. ಇವು ಇಲ್ಲಿ ವೇಶ್ಯಾಪದ್ಧತಿ ಆಸ್ತಿತ್ವದಲ್ಲಿದ್ದುದ್ದಕ್ಕೆ ಕುರುಹುಗಳಾಗಿವೆ"[೨೦] ಭಾರತದ ಕೆಲವು ಸಾಹಿತ್ಯ ಕೃತಿಗಳು ಮತ್ತು ಪುರಾತತ್ವ ಆಕರಗಳಲ್ಲಿ ಭಾರತದಲ್ಲಿ ಮಾತೃದೇವತಾ ಆರಾಧನೆಯ ಹಿನ್ನೆಲೆಯಲ್ಲಿ ವೇಶ್ಯಾ ಪದ್ಧತಿ ಆಸ್ತಿತ್ವದಲ್ಲಿದ್ದ ಕುರಿತು ಪುರಾವೆಗಳನ್ನು ಒದಗಿಸುವವು.

"ಕ್ರಿ.ಶ.ಏಳನೆಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ ದೇವಾಲಯಗಳ ನಿರ್ಮಾಣದ ಕಾರ್ಯಗಳು ಹೆಚ್ಚಾಗತೊಡಗಿದವು. ಇದರಿಂದಾಗಿ ಈ ದೇವದಾಸಿ ಪದ್ಧತಿಯು ಭಾರತೀಯ ಸಂಸ್ಕೃತಿಯಲ್ಲಿ ಅಷ್ಟೊಂದು ಆಳವಾಗಿ ಬೇರು ಬಿಡಲು ಕಾರಣವಾಯಿತು. ಸೂರ್ಯ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದೆ. ಈ ದೇವಾಲಯದಲ್ಲಿ ದೇವದಾಸಿಯರ ಸಂಖ್ಯೆ ಹೆಚ್ಚಾಗಿ ಕಾಣಲಾಗುವುದು. ಹೀಗೆ ಹತ್ತನೆಯ ಶತಮಾನದ ಅಂತ್ಯದ ವೇಳೆಗೆಲ್ಲಾ ದೇವದಾಸಿಯರ ಸಂಖ್ಯೆ ಹೆಚ್ಚುತ್ತಾ ಹೋಯಿತು. ಭಾರತದಲ್ಲಿ ಮುಸ್ಲಿಮರ ಆಕ್ರಮಣದ ಕಾಲದಿಂದಲೇ ದೇವದಾಸಿ ಪದ್ಧತಿ ಉತ್ತರ ಭಾರತದಲ್ಲಿ ಕಡಿಮೆಯಾಗುತ್ತಾ ಬಂತು. ಸೋಮನಾಥ ದೇವಾಲಯಗಳಂಥ ಅನೇಕ ದೇವಾಲಯಗಳನ್ನು, ವಿಗ್ರಹಗಳನ್ನು ನಾಶಗೊಳಿಸಿ ಹಿಂದೂಗಳನ್ನು ಇಸ್ಲಾಂಧರ್ಮಕ್ಕೆ ಮತಾಂತರಿಸಿ ದೇವಾಲಯಗಳ ಸ್ಥಳದಲ್ಲಿ ಮಸೀದಿಗಳನ್ನು ಕಟ್ಟಿಸಿದಾಗ ಸಂಪೂರ್ಣವಾಗಿ ಈ ಪದ್ಧತಿ ಕೊನೆಗೊಂಡಿತು. ಆದರೆ ದಕ್ಷಿಣ ಭಾರತದಲ್ಲಿ ಹಿಂದೂ ರಾಜರುಗಳ ಆಳ್ವಿಕೆಯೆ ಇತ್ತು. ಹಾಗಾಗಿ ಈ ಪದ್ಧತಿ ಇಲ್ಲಿ ಬೆಳೆದು ಇಪ್ಪತ್ತನೆಯ ಶತಮಾನದ ವೇಳೆಗೆ ವ್ಯಾಪಾರೀಕರಣಗೊಂಡಿತು. ಹೀಗಾಗಿ ಪವಿತ್ರ ಸ್ಥಾನದಲ್ಲಿದ್ದ ದೇವದಾಸಿ ಪದ್ಧತಿ ಅವನತಿಗೊಂಡು ಧಾರ್ಮಿಕ ವೇಶ್ಯಾವೃತ್ತಿಯಾಗಿ ಪರಿವರ್ತನೆಗೊಂಡಿದೆ"[೨೧]

ದೇವದಾಸಿಯರು, ವೇಶ್ಯೆಯರು, ಬಸವಿಯರು, ನೃತ್ಯದವರು, ಕನ್ಯೆಯರು, ತೊತ್ತುಗಳು, ಮಾತಂಗಿಯರು, ಲಂಜಿಯರು, ಗಣಿಕೆಯರು, ಪಾತ್ರದವರು, ವಾರಾಂಗನೆಯರು, ಸೇವಕಿಯರ ಮಕ್ಕಳು, ಮದುವೆಯಾಗದ ಹುಡುಗಿಯರು, ಎಂದೆಲ್ಲಾ ಇವರನ್ನು ಕರೆಯಲಾಗುತ್ತಿತ್ತು. ಧಾರ್ಮಿಕ ಫಲವಂತಿಕೆಯ ಹೆಸರಿನಲ್ಲಿ ಆಸ್ತಿತ್ವಕ್ಕೆ ಬಂದ ಈ ಪದ್ಧತಿ ಬಹು ಪ್ರಾಚೀನ ಕಾಲದಿಂದ ಇಂದಿನವರೆಗೆ ಆಸ್ತಿತ್ವದಲ್ಲಿದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಮಹಾರಾಷ್ಟ್ರದ ಅಂಬಾಜೋಗಾಯಿ, ಅಂಬಾಭವಾನಿ, ಕರ್ನಾಟಕದ ಸೌದತ್ತಿ ಎಲ್ಲಮ್ಮ, ಉಚ್ಚಂಗಿದುರ್ಗದ ಉಚ್ಚಂಗೆಲ್ಲಮ್ಮ, ಹುಲಿಗಿಯ

ಹುಲಿಗೆಮ್ಮ, ಚಂದ್ರಗುತ್ತಿಯ ಗುತ್ಯಮ್ಮ ಮುಂತಾದವುಗಳನ್ನು ಹೆಸರಿಸಬಹುದು. ತುಂಬಾ ಪ್ರಾಚೀನ ಕಾಲದಿಂದಲೂ ಈ ಪರಿಸರದಲ್ಲಿ ದೇವಿಯ ಆಚರಣೆ ಹಿನ್ನೆಲೆಯಲ್ಲಿ ಫಲವಂತಿಕೆಯ ಸಂಕೇತವಾದ ದೇವದಾಸಿ ಆಚರಣೆ ಚಾಲ್ತಿಯಲ್ಲಿದ್ದಿತು ಹಾಗೂ ಪ್ರಸ್ತುತವೂ ಚಾಲ್ತಿಯಲ್ಲಿದೆ.

### ೨.೫ ಸಾಹಿತ್ಯ ಕೃತಿಗಳಲ್ಲಿ ವೇಶ್ಯಾವಾಟಿಕೆ

ಭಾರತದ ಆರಂಭಿಕ ಕಾಲಘಟ್ಟದಿಂದ ಮಧ್ಯಯುಗದವರೆಗೆ ವೇಶ್ಯಾ ಪದ್ಧತಿಯ ಕುರಿತಂತೆ ವಿಶ್ಲೇಷಿಸುವುದು ತುಸು ಕಷ್ಟಕರ. ಏಕೆಂದರೆ ಪ್ರಾಗೈತಿಹಾಸಿಕ ಮತ್ತು ಸಿಂಧೂ ನಾಗರೀಕತೆಯಲ್ಲಿ ನಮಗೆ ಯಾವುದೇ ಸಾಹಿತ್ಯ ಕೃತಿಗಳು ಇಲ್ಲಿಯವರೆಗೆ ದೊರೆತಿಲ್ಲ. ಹಾಗಾಗಿ ಆ ಕಾಲದಲ್ಲಿದ್ದಿರಬಹುದಾದ ವೇಶ್ಯಾ ಪದ್ಧತಿಯನ್ನು ನಾವು ಅರ್ಥೈಸುವುದು ಕಷ್ಟಸಾಧ್ಯ ಎನ್ನಬಹುದು. ಆದ್ದರಿಂದ ನಾವು ಅಂದಿನ ಈ ಪದ್ಧತಿಯನ್ನು ವಿಶ್ಲೇಷಿಸಲು ಅನಿವಾರ್ಯವಾಗಿ ಉಳಿದ ಆಕರಗಳ ಸಹಾಯವನ್ನು ಪಡೆದು ಕೊಳ್ಳಬೇಕಾಗುತ್ತದೆ. ವಿದ್ವಾಂಸರಾದ ಅಲ್ಟೇಕರ್ ಸಹಾ ಇದೇ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಜಾತಕ ಸಾಹಿತ್ಯದಲ್ಲಿ ದೇವಾಲಯಗಳೊಂದಿಗೆ ನೃತ್ಯ ಮಾಡುವ ಮಹಿಳೆಯರು ಸಂಬಂಧ ಹೊಂದಿರುವ ಪದ್ಧತಿ ಕಾಣಬರುವುದಿಲ್ಲ. ಗ್ರೀಕ್ ಇತಿಹಾಸಕಾರರ ಲೇಖನಗಳಲ್ಲಿ ಇದರ ಸೂಚನೆಗಳಿಲ್ಲ. ಚಾಣಕ್ಯನಿಂದ ಕ್ರಿ.ಪೂ.೩೦೦ರಲ್ಲಿ ಬರೆಯಲ್ಪಟ್ಟ ಐತಿಹಾಸಿಕ ಸಾಹಿತ್ಯಕೃತಿ 'ಅರ್ಥಶಾಸ್ತ್ರ'ವು ಮೌರ್ಯರ ಕಾಲದ ಸಾಮಾಜಿಕ, ಆಡಳಿತಾತ್ಮಕ, ಆರ್ಥಿಕ ಮತ್ತು ಭೂವ್ಯವಸ್ಥೆಗಳನ್ನು ವಿವರವಾಗಿ ನೀಡುತ್ತದೆ. ಈ ಪುಸ್ತಕದ ಎರಡನೆಯ ಭಾಗದ ೨೭ನೆಯ ಅಧ್ಯಾಯದಲ್ಲಿ 'ಗಣಿತಾಧ್ಯಕ್ಷ'ನ ಕರ್ತವ್ಯಗಳು ಮತ್ತು ಅವನ ಸವಲತ್ತುಗಳ ಬಗ್ಗೆ ವಿವರಿಸಲಾಗಿದೆ. ಕೌಟಿಲ್ಯ ಹೀಗೆ ಹೇಳುತ್ತಾನೆ. "ಗಣಿಕೆಯರು ಅರವತ್ನಾಲ್ಕು ಕಲೆಗಳನ್ನು ಕಲಿಯಬೇಕಿತ್ತು. ಅದರಲ್ಲಿ ಮತ್ತೊಬ್ಬನನ್ನು ವಶಪಡಿಸಿಕೊಳ್ಳುವುದು ಒಳಗೊಂಡಿತ್ತು. ಈ ಕೃತಿಯಿಂದ ಗಣಿಕೆಯರು ಒಂದು ಕುಲಕ್ಕೆ ಸೇರಿದವರು ಎಂಬುದು ಸ್ಪಷ್ಟವಾಗುತ್ತದೆ, 'ಗಣಿಕಾಧ್ಯಕ್ಷನು ಗಣಿಕೆ ಕುಲದಲ್ಲಿಯೋ, ಬೇರೆಯ ಕುಲದಲ್ಲಿಯೋ ಹುಟ್ಟಿದ ರೂಪ ಯೌವನ ಸಂಪನ್ನಳೂ, ಕಲಾಪ್ರೌಢಳೂ, ಎನಿಸಿದ ಸ್ತ್ರೀಯನ್ನು ಒಂದು ಸಾವಿರ ಪಣಗಳ ವರ್ಷಾಶಾಸನದ ಮೇಲೆ ಗಣಿಕಾ ಸ್ಥಾನದಲ್ಲಿ ನಿಯಮಿಸಿಕೊಳ್ಳಬೇಕು"[೨೨]. 'ಗಣಿಕ' ಕುಲ ಎಂದು ಪ್ರಯೋಗಿಸಿದ್ದಾನೆ. ಗಣಿಕ ಕುಲದ ಸ್ತ್ರೀಯನ್ನು ಗಣಿಕಾ ಸ್ಥಾನಕ್ಕೆ ಸೇರಿಸಿಕೊಳ್ಳಬೇಕು. ಒಂದು ವೇಳೆ ಕಲಾಪ್ರೌಢಿಮೆ, ರೂಪ, ಯೌವನ ಇರುವ ಬೇರೆ ಕುಲದ ಸ್ತ್ರೀಯಿದ್ದರೂ ನೇಮಿಸಿಕೊಳ್ಳಬಹುದು. "ನೃತ್ಯ ಮಾಡುವ ವೃತ್ತಿ ಮೂಲದ ಗಣಿಕ ಎನ್ನುವ ಒಂದು ಕುಲವಿದ್ದು, ಬೇರೆ ಸ್ತ್ರೀಯರು ಆ ವೃತ್ತಿಗೆ ಸೇರಿದ ಮೇಲೆ ಗಣಿಕೆಯರಾದರು. ಗಣಿಕೆಯರನ್ನು ಕಾಲಾನಂತರದಲ್ಲಿ ವೇಶ್ಯೆಯರೆಂದು ಉಲ್ಲೇಖಿಸಲಾಗಿದೆ"[೨೩] ಚಂದ್ರಗುಪ್ತನ ಆಳ್ವಿಕೆಯಲ್ಲಿ 'ಗಣಿತಾಧ್ಯಕ್ಷ' ದೊಡ್ಡ ಸಂಬಳದ ಉನ್ನತ ಅಧಿಕಾರವನ್ನು ಹೊಂದಿದ್ದ. ಆ ಕಾಲದಲ್ಲಿ ಕಛೇರಿಯ ನಿಯಮಗಳ ಬಿಗಿ ಹಿಡಿತದಲ್ಲಿ ಗಣಿಕೆಯರಿದ್ದರು. ನಿಯಮಗಳ ಉಲ್ಲಂಘನೆ ಮಾಡಿದವರಿಗೆ ದಂಡ ವಿಧಿಸುವ ಪಟ್ಟಿಯನ್ನು ಕೌಟಿಲ್ಯ ನೀಡುತ್ತಾನೆ. ಉದಾ: ರಾಜ ಹೇಳಿದ ವ್ಯಕ್ತಿಯೊಂದಿಗೆ ಗಣಿಕೆಯು ಸಹಕರಿಸದೆ ಹೋದ ಪಕ್ಷದಲ್ಲಿ ಛಡಿಯಿಂದ ಒಂದು ಸಾವಿರ ಏಟುಗಳನ್ನು ತಿನ್ನಬೇಕಾಗಿತ್ತು. ಇಲ್ಲವೆ ಐದು

ಸಾವಿರ 'ಪಣ'ಗಳನ್ನು ದಂಡ ತೆರಬೇಕಾಗಿತ್ತು. ಗಣಿಕೆಯರಿಗೆ ವಿಧಿಸುವ ಎಲ್ಲಾ ನಿಯಮಗಳು ನೃತ್ಯಕಾರರು, ನಟರು, ಹಾಡುಗಾರರು, ಸಂಗೀತಗಾರರು ಮತ್ತು ದಲ್ಲಾಳಿಗಳಿಗೂ ಅನ್ವಯವಾಗುತ್ತಿತ್ತು ಎಂಬುದನ್ನು ದಾಖಲಿಸಿದೆ. ಈ ಕೃತಿಯ ಸಹಾಯದಿಂದ ಅಂದಿನ ಸಮಾಜದಲ್ಲಿದ್ದ ನೃತ್ಯಗಾರರು, ಸಂಗೀತಗಾರರು ಮತ್ತು ವೇಶ್ಯೆಯರ ಸ್ಥಿತಿಗತಿಗಳನ್ನು ಅರಿಯಬಹುದಾಗಿದೆ.

ಆರ್ಯರ ಕಾಲದಲ್ಲಿ ದೇವಾಲಯಗಳಲ್ಲಿ ನರ್ತಕಿಯರು ಇದ್ದುದಕ್ಕೆ ನಮಗೆ ತೀರ ಕಡಿಮೆ ಆಧಾರಗಳು ದೊರೆಯುತ್ತವೆ. ಆದರೂ "ಋಗ್ವೇದದಲ್ಲಿ ಸಾಮಾನ್ಯ ವೇಶ್ಯಾಗಾರಿಕೆಗೆ ಸಂಬಂಧಿಸಿದ 'ವಾರಾಂಗನೆ', 'ಸೇವಕಿಯ ಮಗ' 'ಮದುವೆಯಾಗದ ಹುಡುಗಿಯ ಮಗ' ಎಂಬ ಅರ್ಥದ ಕೆಲವು ಪದಗಳಿವೆ ಇವು ಅಂದು ಪ್ರಾಯಶಃ ಸಾಮಾನ್ಯ ವೇಶ್ಯಾಗಾರಿಕೆ ಆಸ್ತಿತ್ವದಲ್ಲಿದ್ದನ್ನು ಸೂಚಿಸುತ್ತದೆ"[೨೪] ಪ್ರಾರಂಭದ ಸಾಹಿತ್ಯದಲ್ಲಿ ಸಾಮಾನ್ಯ ವೇಶ್ಯಾಗಾರಿಕೆ, ನರ್ತಕಿಯರು ಮತ್ತು ವಾರಾಂಗನೆಯರ ಬಗ್ಗೆ ಹೇರಳವಾಗಿ ಉಲ್ಲೇಖಗಳು ದೊರೆಯುತ್ತವೆ. ಆದರೆ, ದೇವಾಲಯದ ನರ್ತಕಿಯರು ಮತ್ತು ಪವಿತ್ರ ವೇಶ್ಯಾಗಾರಿಕೆ ಬಗ್ಗೆ ಸ್ವಲ್ಪ ಕಡಿಮೆ ಉಲ್ಲೇಖಗಳಿವೆ. ವಾತ್ಸಾಯನ ತನ್ನ 'ಕಾಮಸೂತ್ರ'ದಲ್ಲಿ (ಕ್ರಿ.ಶ.೨೫೦) ವಾರಾಂಗನೆಯರನ್ನು ಕುರಿತು ಹೆಚ್ಚು ವಿವರಗಳನ್ನು ಕೊಡುತ್ತಾ ವೇಶ್ಯೆಯರಲ್ಲಿ ಅವನು ಒಂಭತ್ತು ಬಗೆಗಳನ್ನು ಗುರುತಿಸುತ್ತಾನೆ. ಅವರಲ್ಲಿ ಹೆಚ್ಚು ಗೌರವಕ್ಕೆ ಪಾತ್ರಳಾದವಳು 'ಗಣಿಕಾ'. "ಆ ಬಗೆಯ ಮಹಿಳೆಗೆ ರಾಜರುಗಳಿಂದ ರಾಜಮನ್ನಣೆಯಿತ್ತು. ಗಣ್ಯ ವ್ಯಕ್ತಿಗಳಿಂದ ಹೊಗಳಿಕೆಗೆ ಪಾತ್ರವಾಗುತ್ತಿದ್ದಳು. ಮತ್ತು ಅವಳ ಸಂಬಂಧಕ್ಕಾಗಿ ಅನೇಕ ಜನರು ಹಾತೊರೆಯುತ್ತಿದ್ದರು"[೨೫.] ಕ್ರಿ.ಶ.ಆರನೇ ಶತಮಾನದ ಭಾರತದ ಬಹು ಮುಖ್ಯ ಸಂಸ್ಕೃತ ಗದ್ಯ ಬರಹಗಾರನಾದ ದಂಡಿ ತನ್ನ ಕೃತಿಯಾದ 'ದಶಕುಮಾರ ಚರಿತ್ರೆ'ಯಲ್ಲಿ ವಾರಾಂಗನೆಯರಲ್ಲಿ ಮಹಿಳೆಯ ಎಲ್ಲಾ ಲಕ್ಷಣಗಳು ಹೇಗೆ ಒಳಗೊಂಡಿರುತ್ತವೆ ಮತ್ತು ಸಂಭಾಷಣೆಯ ಚಾತುರ್ಯದಲ್ಲಿ ಹೇಗೆ ಪಳಗಿದವರಾಗಿರುತ್ತಾರೆ ಎಂದು ವಿಶ್ಲೇಷಿಸಿದ್ದಾನೆ. ಅಲ್ಲದೇ ಶೂದ್ರಕನ 'ಮೃಚ್ಛಕಟಿಕ' ನಾಟಕದ ಕೇಂದ್ರ ಪಾತ್ರವು ವೇಶ್ಯೆ ವಸಂತಸೇನೆಯಾಗಿರುವಳು. ಬಡ ಬ್ರಾಹ್ಮಣ ವ್ಯಕ್ತಿಯೊಂದಿಗೆ ಶ್ರೀಮಂತ ವೇಶ್ಯೆಯಾದ ವಸಂತಸೇನೆಯು ಅನುರಕ್ತಳಾದ ಕಥೆಯನ್ನು ಈ ನಾಟಕ ಹೊಂದಿದೆ. ವಾರಾಂಗನೆಯರ ಮತ್ತು ನರ್ತಕಿಯರ ಬಗ್ಗೆ ಕಾಳಿದಾಸನ 'ಮೇಘಧೂತ'ದಲ್ಲೂ ಕೆಲವು ಉಲ್ಲೇಖಗಳಿವೆ. "ಸಾಯಂಕಾಲದ ಪೂಜಾ ಸಮಯದಲ್ಲಿ ಉಜ್ಜಯಿನಿಯ 'ಮಹಾಕಾಳಿ' ದೇವಾಲಯದಲ್ಲಿ ನರ್ತಕಿಯರು ಹಾಜರಿರಬೇಕೆಂದು ನಿರೀಕ್ಷಿಸಲಾಗುತ್ತಿತ್ತು".[೨೬] ಎಂದು ಆತ ತನ್ನ 'ಮೇಘಧೂತ'ದಲ್ಲಿ ವಿವರಿಸಿದ್ದಾನೆ.

ಬಹುಶಃ ಕ್ರಿ.ಶ.ಆರನೇ ಶತಮಾನದಿಂದ ಸಾಮಾನ್ಯ ಧಾರ್ಮಿಕ ವೇಶ್ಯಾಗಾರಿಕೆ ಪದ್ಧತಿಯೊಂದಿಗೆ ದೇವಾಲಯಗಳಿಗೆ ಹುಡುಗಿಯರನ್ನು ಅರ್ಪಿಸುವ ರೂಢಿ ಆರಂಭವಾಗಿರುವುದನ್ನು ಸಮಕಾಲೀನ ಆಕರಗಳಿಂದ ಗುರುತಿಸಬಹುದಾಗಿದೆ. ಆ ಕಾಲದಲ್ಲಿ ರಚಿತವಾದ ಅನೇಕ ಪುರಾಣಗಳು ಕೆಲವು ವಿವರಗಳನ್ನು ನೀಡುತ್ತವೆ. ಅವು ದೇವಾಲಯಗಳಲ್ಲಿ ಪೂಜೆ ಮಾಡುವ ಸಮಯದಲ್ಲಿ ಹಾಡುವ ಮಹಿಳೆಯರನ್ನು ದಾನವಾಗಿ ನೀಡಲಾಗುತ್ತಿತ್ತು. ಅದಕ್ಕಾಗಿ ಸುಂದರ ಹುಡುಗಿಯರನ್ನು ಕೊಂಡುಕೊಂಡು

ಅವರನ್ನು ದೇವಾಲಯಗಳಿಗೆ ಅರ್ಪಿಸಲಾಗುತ್ತಿದ್ದಿತು ಎಂಬ ವಿವರಗಳು ದೊರೆಯುತ್ತವೆ. ಭವಿಷ್ಯ ಪುರಾಣವು "ಸೂರ್ಯ ಲೋಕವನ್ನು ಗೆಲ್ಲುವ ಅತ್ಯುತ್ತಮ ವಿಧಾನ ಎಂದರೆ, ವೇಶ್ಯೆಯರ ಹಿಂಡನ್ನು ಸೂರ್ಯ ದೇವಾಲಯಕ್ಕೆ ಅರ್ಪಿಸುವುದಾಗಿತ್ತು" ಎಂದು ಹೇಳುತ್ತದೆ".[೨೭] "ಬುದ್ಧಘೋಷನ ಕಾಲದಲ್ಲಿ ಮಹಿಳೆಯರನ್ನು ದೇವದಾಸಿಯಾಗಿ ಅರ್ಪಿಸುವ ಪದ್ಧತಿ ಜಾರಿಯಲ್ಲಿತ್ತು".[೨೮]

ಸಂಗಂ ಯುಗದಲ್ಲಿ(ಕ್ರಿ.ಪೂ.೩೦೦–ಕ್ರಿ.ಶ.೩೦೦) ಇಳಂಗೋಅಡಿಗಳ್ ಎನ್ನುವ ಬೌದ್ಧ ಕವಿಯಿಂದ ರಚಿತವಾದ "ಶಿಲಪ್ಪದಿಕಾರಂ" ಮತ್ತು ಚಾತ್ತನಾರ್ ಕವಿಯಿಂದ ರಚಿತವಾದ "ಮಣಿಮೇಖಲೈ" ಕೃತಿಗಳಲ್ಲಿ ವೇಶ್ಯೆಯರ ಉಲ್ಲೇಖಗಳಿವೆ. ಹನ್ನೆರಡನೆಯ ಶತಮಾನದ ನಂತರ ನಮಗೆ ಅನೇಕ ಐತಿಹಾಸಿಕ ಮತ್ತು ಸಾಹಿತ್ಯದ ಸಾಕ್ಷ್ಯಾಧಾರಗಳು ಹೇರಳವಾಗಿ ಲಭ್ಯವಾಗುತ್ತವೆ. ಮೊಗಲರ ಪ್ರಸಿದ್ಧ ದೊರೆಯಾದ ಅಕ್ಬರನ ಆಡಳಿತ ಕಾಲದಲ್ಲಿ (೧೫೫೬–೧೬೦೫) ಪವಿತ್ರ ಹಾಗೂ ಸಾಮಾನ್ಯ ವೇಶ್ಯೆಯರ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಅಬುಲ್–ಫಜಲ್ ತನ್ನ ಕೃತಿಯಾದ ಐನ್–ಐ–ಅಕ್ಬರಿಯಲ್ಲಿ ದಾಖಲಿಸಿದ್ದಾನೆ. "ರಾಜ್ಯದಲ್ಲಿ ವೇಶ್ಯೆಯರು 'ಸೈತಾನ್‌ಪುರ್' (ದೆವ್ವದ ವಾಸಸ್ಥಳ)ದಲ್ಲಿ ಅವರಿಗಾಗಿಯೇ ಪ್ರತ್ಯೇಕವಾಗಿ ಗೊತ್ತುಪಡಿಸಿದ ಪ್ರದೇಶದಲ್ಲಿ ಪ್ರತ್ಯೇಕವಾದ ಮನೆಗಳನ್ನು ಹೊಂದಿದ್ದರು. ಒಬ್ಬ ದರೋಘಾ ಎಂಬ ಮೇಲ್ವಿಚಾರಕ (ಪೋಲಿಸ್ ಅಧಿಕಾರಿ) ಮತ್ತು ಒಬ್ಬ ಗುಮಾಸ್ತೆಯನ್ನು ಅದಕ್ಕಾಗಿ ನೇಮಿಸಲಾಗಿತ್ತು. ಅವರು ವೇಶ್ಯೆಯರಾಗಿ ಬಂದವರ ಹೆಸರುಗಳನ್ನು ಮತ್ತು ಮನೆಗಳಿಗೆ ಕರೆದುಕೊಂಡು ಹೋಗುತ್ತಿದ್ದವರ ಹೆಸರುಗಳನ್ನು ನೊಂದಾಯಿಸಿಕೊಳ್ಳುತ್ತಿದ್ದರು. ಸುಂಕದ ಅಧಿಕಾರಿಗಳಿಗೆ ತಿಳಿಸಿ, ಜನರು ಈ ಸಂಬಂಧದಲ್ಲಿ ತೊಡಗಬಹುದಿತ್ತು. ಆದರೆ, ಅನುಮತಿಯಿಲ್ಲದೆ ನೃತ್ಯದ ಹುಡುಗಿಯರನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಲು ಅವಕಾಶವಿರಲಿಲ್ಲ. ಅಕ್ಬರನ ಆಸ್ಥಾನದಲ್ಲಿದ್ದ ಸುಪ್ರಸಿದ್ಧ ಸಂಗೀತಗಾರ ತಾನ್‌ಸೇನ್‌ನು ಈ ನೃತ್ಯದ ಹುಡುಗಿಯರ ಸ್ವಂತ ಪೋಷಕನಾಗಿದ್ದನು".[೨೯] ಅಕ್ಬರನ ನಂತರ ಅಧಿಕಾರಕ್ಕೆ ಬಂದ ಜಹಾಂಗೀರ್ (ಕ್ರಿ.ಶ.೧೬೦೫–೧೬೨೭) ಮತ್ತು ಷಹಜಾನ್ (ಕ್ರಿ.ಶ.೧೬೨೮–೧೬೫೮) ಚಕ್ರವರ್ತಿಗಳ ಕಾಲದಲ್ಲಿ ಇದೇ ಪದ್ಧತಿ ಮುಂದುವರೆಯಿತು. ಇದರೊಂದಿಗೆ ರಾಜ್ಯದ ವೈಭವ, ಆಡಂಬರ, ದುಂದುವೆಚ್ಚ ಮತ್ತು ಭ್ರಷ್ಟತೆಗಳು ಹೆಚ್ಚಾದ ಪರಿಣಾಮ ದೇಶದ ಅಂದಿನ ಅಪವ್ಯಯಗಳನ್ನು ತಡೆ ಹಿಡಿಯಲು ಮುಂದೆ ಅಧಿಕಾರಕ್ಕೆ ಬಂದ ಔರಂಗಜೇಬ್ ಹಲವು ಪ್ರಯತ್ನಗಳನ್ನು ನಡೆಸಿದ. ಒಬ್ಬ ಸಂತನಂತೆ ಜೀವನ ನಡೆಸಿದ ಅವನು ಒಬ್ಬ ನಿಷ್ಠಾವಂತ ಮಹಮ್ಮದೀಯನಾಗಿದ್ದನು. "ಅವನು ತನ್ನ ಆಡಳಿತದ ಕಾಲಾವಧಿಯಲ್ಲಿ ಸಾವಿರಾರು ಹಿಂದೂ ದೇವಾಲಯಗಳನ್ನು ನಾಶಪಡಿಸಿ, ಅವುಗಳೊಂದಿಗೆ ಸಂಬಂಧ ಹೊಂದಿದ್ದ ಎಲ್ಲಾ ವೇಶ್ಯೆಯರನ್ನು ಮತ್ತು ಅವರಿಗೆ ಸಂಬಂಧಿಸಿದ ಎಲ್ಲವನ್ನೂ ನಾಶಮಾಡಲು ಪ್ರಯತ್ನಗಳನ್ನು ನಡೆಸಿದನು. ಹಾಡುವುದು ಮತ್ತು ನೃತ್ಯ ಮಾಡುವುದರ ವಿರುದ್ಧ ಅವನು ಆಜ್ಞೆಯನ್ನು ಜಾರಿ ಮಾಡಿ ಎಲ್ಲಾ ನಾಚ್‌ವಾಲಿ (ನೃತ್ಯದ ಹುಡುಗಿ)ಯರಿಗೆ ಮದುವೆ ಮಾಡಿಕೊಳ್ಳಲು ಆಜ್ಞೆ ಮಾಡಿದ. ಒಪ್ಪದಿದ್ದವರನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿದನು ಎನ್ನುವ ಉಲ್ಲೇಖ ದೊರೆಯುತ್ತದೆ".[೩೦]

ಔರಂಬಜೇಬನ ಸಾವಿನ ನಂತರ ಬ್ರಿಟೀಷರ ಕಾಲದವರೆಗೂ ಅರಾಜಕತೆಯು ಮುಂದುವರೆಯಿತು. ರಾಜಕುಮಾರರ ಮತ್ತು ಸಾರ್ವಜನಿಕ ವ್ಯಕ್ತಿಗಳ ನೈತಿಕ ಮಟ್ಟ ಅತ್ಯಂತ ಕೆಳಹಂತಕ್ಕೆ ತಲುಪಿತು. ಆ ಕಾಲದಲ್ಲಿ ಮನುಷ್ಯ ಸಂಬಂಧಗಳು ವ್ಯವಹಾರಿಕವಾದ ಪರಿಣಾಮವಾಗಿ ವೇಶ್ಯಾಗಾರಿಕೆ ದೊಡ್ಡ ಪ್ರಮಾಣಗಳಲ್ಲಿ ಭಾರತದಲ್ಲಿ ವ್ಯಾಪಿಸಿತು. "ಪಾಶ್ಚಾತ್ಯ ಅಕ್ರಮಣಗಳಿಂದಾಗಿ ಭಾಗಶಃ ಮತ್ತು ಅನೈತಿಕತೆ ಹೆಚ್ಚಳದಿಂದಾಗಿ ದೇವಾಲಯದ ನೃತ್ಯಗಾತಿಯರ 'ಧಾರ್ಮಿಕ' ಅಂಶಗಳು ನಾಪತ್ತೆಯಾದವು. ಅವರು ಸಂದರ್ಭಕ್ಕನುಸಾರವಾಗಿ ನೃತ್ಯ ಮಾಡುವ ಸಾಮಾನ್ಯ ವೇಶ್ಯೆಯರಾದರು. ಅವರನ್ನು ಮದುವೆ ಸಂದರ್ಭದಲ್ಲಿ ಇಲ್ಲವೆ ಖಾಸಗಿ ಮನರಂಜನೆಗಾಗಿ ನೃತ್ಯ ಮಾಡಲು ಅಹ್ವಾನಿಸಲಾಯಿತು"[೩೦] ಡಬ್ಲ್ಯೂ ಕ್ರೂಕ್ ಅವರು ಉತ್ತರ ಭಾರತದ ಬುಡಕಟ್ಟು ಮತ್ತು ಜಾತಿಗಳನ್ನು ಕುರಿತು ವಿವರಿಸುತ್ತಾ "ತವಾಯಿಫ್, ಗಂಧರ್ಭ್ ಮತ್ತು ಪತೂರ ಎನ್ನುವ ಮೂರು ಜಾತಿಗಳಿವೆ. ಇವು ಕ್ರಮವಾಗಿ ನೃತ್ಯಗಾತಿ, ಹಾಡುಗಾರತಿ, ಮತ್ತು ವೇಶ್ಯೆಯರಿಗೆ ಸಂಬಂಧಿಸಿದ ಜಾತಿಗಳಾಗಿದ್ದವು. ತವಾಯಿಫ್ ಎಂಬ ಪದವನ್ನು ಸಾಮಾನ್ಯ ಅರ್ಥದಲ್ಲಿ ಬಳಸುವುದಾದರೂ, ನಿರ್ದಿಷ್ಟವಾಗಿ ಮಹಮ್ಮದೀಯ ಹುಡುಗಿಯರಿಗೆ ಪ್ರಮುಖವಾಗಿ ಬಳಸಲಾಗುತ್ತದೆ. ಇದರ ಸಮಾನಾರ್ಥ ಪದವಾಗಿ ಪತರ್, ಪತುರ್, ಪತುರಿಯ (ಸಂಸ್ಕೃತದ ಪಾತ್ರ ಎಂದರೆ ನಟ ಎಂಬುದರಿಂದ ಬಂದಿದೆ) ಎಂದಾಗಿದೆ. ಈ ಸಮುದಾಯದ ಹುಡುಗಿ ಮದುವೆ ವಯಸ್ಸಿಗೆ ಬಂದಾಗ ಒಂದು ಅರಳಿ ಮರವನ್ನು ಮದುವೆಯಾಗಬೇಕಾಗಿತ್ತು. ಅರಳಿ ಮರವನ್ನು ಮದುವೆಯಾದ ತರುವಾಯ ಅವಳು ಯಾವುದೇ ಗಂಡಿನ ಜೊತೆ ದೈಹಿಕ ಸಂಪರ್ಕ ಹೊಂದಬಹುದಾಗಿತ್ತು. 'ರಾಜಕನ್ಯಾ' ಎನ್ನುವ ಸಮುದಾಯದ ಮಹಿಳೆಯರು ದೇವಾಲಯಗಳಲ್ಲಿ ನೃತ್ಯ ಮಾಡುತ್ತಾರೆ. ಈ ಜಾತಿಗಳಲ್ಲಿ ವೇಶ್ಯಾವೃತ್ತಿ ಅಪರೂಪ. ಪತರುಗಳ ಕೃಷ್ಣನನ್ನು ತಮ್ಮ ವೈಯಕ್ತಿಕ ದೇವರಾಗಿಯೂ, ಮಹಾದೇವನ ರೂಪದಲ್ಲಿರುವ ಶಿವನನ್ನು ತಮ್ಮ ರಕ್ಷಣೆ ನೋಡಿಕೊಳ್ಳುವ ದೇವತೆಯಾಗಿಯೂ ಪರಿಗಣಿಸುತ್ತಾರೆ. ತವಾಯಿಫ್‌ಗಳ ಆಚರಣೆಗಳು ಕುತೂಹಲಕಾರಿಯಾಗಿವೆ. ಹುಡುಗಿಯರಿಗೆ ಏಳು ಅಥವಾ ಎಂಟು ವರ್ಷಗಳಿದ್ದಾಗಲೇ ನೃತ್ಯ ಮತ್ತು ಸಂಗೀತವನ್ನು ಕಲಿಸಲಾಗುತ್ತದೆ. ಹುಡುಗಿ ತರಬೇತಿಯ ಪ್ರಾರಂಭಿಸುವ ಪೂರ್ವದಲ್ಲಿ ಮಸೀದಿಯಲ್ಲಿರುವ ಫಕೀರರಿಗೆ ಸಿಹಿಯನ್ನು ಹಂಚಲಾಗುವುದು. ಮೊದಲನೆಯ ದಿನ ಪಾಠ ಪ್ರಾರಂಭಿಸುವಾಗಲೇ ಅಧ್ಯಾಪಕರು ತನ್ನ ವೇತನದ ಜೊತೆಗೆ ಸಿಹಿ ಪೊಟ್ಟಣವನ್ನು ಸ್ವೀಕರಿಸುತ್ತಾರೆ. ಹುಡುಗಿ ಋತುಮತಿಯಾಗಿ ದೇಹದಲ್ಲಿ ಮಾರ್ಪಾಡಾಗತೊಡಗಿದಾಗ 'ಅಂಗಿಯ' ಎಂಬ ಆಚರಣೆಯನ್ನು ಮಾಡಲಾಗುತ್ತದೆ. ಈ ಆಚರಣೆಯಲ್ಲಿ ಹುಡುಗಿಯ ಸಂಬಂಧಿಕರಿಗೆ ಹಬ್ಬದೂಟವನ್ನು ನೀಡಲಾಗುತ್ತದೆ. ಈ ಆಚರಣೆಯು ಹುಡುಗಿ ದೈಹಿಕವಾಗಿ ಬೆಳೆದು ಬೇರೊಬ್ಬನೊಂದಿಗೆ ದೈಹಿಕ ಸಂಪರ್ಕಕ್ಕೆ ಸಿದ್ಧಳಾಗಿರುವಳು ಎಂಬುದನ್ನು ಸೂಚಿಸುತ್ತದೆ. ಹುಡುಗಿಯನ್ನು ಸೇರಬಯಸುವ ಗಂಡು ಅವಳ ದೇಹಕ್ಕೆ ಬೆಲೆ ಕಟ್ಟುತ್ತಾನೆ. ಹುಡುಗಿಯ ಪಾಲಕರು ಹುಡುಗಿಯ ಬೆಲೆಯನ್ನು ನಿಗದಿಗೊಳಿಸುವರು. ಹುಡುಗಿಯ ಬೆಲೆಯು ನಿಗದಿತವಾದ ಮೇಲೆ 'ಸರ್ ಢಂಖಾಯ್' ಅಥವಾ 'ತಲೆಗೆ ಮುಸುಕು ಹಾಕಿಕೊಳ್ಳುವುದು ಎಂಬ ಆಚರಣೆ ಮಾಡಲಾಗುವುದು. ಈ ಆಚರಣೆಯ ನಂತರ ಅವಳಿಗೆ ಬೆಲೆ ನಿಗದಿಗೊಳಿಸಿದ ವ್ಯಕ್ತಿಯು ಅವಳೊಂದಿಗೆ ದೈಹಿಕ ಸಂಪರ್ಕ

ಮಾಡುವನು. ಈ ಕ್ರಿಯೆ ನಡೆದ ತರುವಾಯ ಹುಡುಗಿಯೊಂದಿಗೆ ದೈಹಿಕ ಸಂಪರ್ಕ ಹೊಂದಿದವನು ಅವಳ ಕುಟುಂಬದ ಸದಸ್ಯರಿಗೆ, ಬಂಧುಬಳಗಕ್ಕೆ ಸಿಹಿ ಊಟವನ್ನು ಕೊಡಬೇಕು. ಸಿಹಿ ಊಟ ಕೊಟ್ಟನಂತರ ಹುಡುಗಿಯ ಹಲ್ಲುಗಳನ್ನು ಕಪ್ಪಾಗಿಸುವ 'ಮಿಸ್ಸಿ' ಆಚರಣೆ ನಡೆಯುತ್ತದೆ. ತರುವಾಯ ವಧುವಿನಂತೆ ಹುಡುಗಿಯನ್ನು ಶೃಂಗರಿಸಿ ಮೆರವಣಿಗೆಯೊಂದಿಗೆ ಅವಳನ್ನು ರಸ್ತೆಯುದ್ದಕ್ಕೂ ಪ್ರದರ್ಶಿಸಲಾಗುತ್ತದೆ. ಹಬ್ಬ ಮುಗಿಯುವವರೆಗೆ ಹಲ್ಲಿನ ರಂಗನ್ನು ತೆಗೆಯುವಂತಿಲ್ಲ. ಮಿಸ್ಸಿ ಆದ ನಂತರ, ಹುಡುಗಿಯ ಮೂಗುತಿ ಇಡುವುದು ನಿಂತು ಹೋಗುತ್ತದೆ. ಆದುದರಿಂದಲೇ ಈ ಸಮಾರಂಭವನ್ನು ಕೆಲವು ಸಲ 'ನತ್ನಿ ಉತ್ರಾನ' ಅಥವಾ ಮೂಗುತಿ ತೆಗೆಯುವುದು ಎಂದು ಕರೆಯಲಾಗುವುದು".[೨೨]

ಈ ಬಗೆಯ ಆಚರಣೆ ಮತ್ತು ರೂಢಿಗಳು "ಉತ್ತರ ಭಾರತದ ಗಂದರ್ಭಗಳಲ್ಲಿ ಹೆಚ್ಚಾಗಿ ಅಸ್ತಿತ್ವದಲ್ಲಿವೆ. ಈ ಸಮುದಾಯಗಳು ಬನಾರಸ್, ಫಜಿಯಾಬಾದ್ ಮತ್ತು ಅಲಹಬಾದ್ ಈ ಸ್ಥಳಗಳಲ್ಲಿ ಕಂಡುಬಂದಿದೆ. ಅವರು ವೈಷ್ಣವ ಪಂಥೀಯರು. ಸಂಗೀತದ ಕರ್ತೃವೆಂದು ಅವರಿಂದ ಪರಿಗಣಿಸಲ್ಪಟ್ಟ ಗಣೇಶ ಅವರ ಆರಾಧ್ಯ ದೇವ. ಅವರು ಪ್ರತಿ ಬುಧವಾರ ಹೂವಿನ ಗೊಂಚಲುಗಳನ್ನು ಮತ್ತು ಎಳ್ಳು ಮತ್ತು ಸಕ್ಕರೆಯಿಂದ ಮಾಡಿದ ಸಿಹಿಯನ್ನು ಅರ್ಪಿಸುತ್ತಾರೆ".[೨೨] ಬಂಗಾಳದಲ್ಲಿಯೂ 'ಬೇಡಿಯರು' ಮತ್ತು 'ನಟರು' ಎನ್ನುವ ಹೆಸರಿನ ಕೆಲವು ಅಲೆಮಾರಿ ಸಮುದಾಯಗಳಿವೆ. ಅವರು ನೃತ್ಯಗಾರರು, ದೊಂಬರಾಟ ಮಾಡುವವರು, ವೇಶ್ಯೆಯರೂ ಆಗಿದ್ದಾರೆಂದು ಕೆಲವರು ಹೇಳುತ್ತಾರೆ."[೩೩] 'ಭವಾನಿಗಳು ಮತ್ತು ದೇವಲಿಯರು' (೧೯೦೯) ಬೊಂಬಾಯಿಯಲ್ಲಿ ಪ್ರಕಟಗೊಂಡ ಕೃತಿಯಲ್ಲಿ ಅಂದು ದೇವದಾಸಿಯರ ಸಾಮಾಜಿಕ ಜೀವನದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಸಾವಂತವಾಡಿ ರಾಜ್ಯದ ರತ್ನಗಿರಿ ಮತ್ತು ಕೆನರಾ ಜಿಲ್ಲೆಗಳಲ್ಲಿ ಶೂದ್ರ ಜಾತಿಗೆ ಸೇರಿದ ದೇವಾಲಿ ಅಥವಾ ನಾಯಿಕ್ ಎಂಬ ಸಮುದಾಯವೊಂದಿದೆ. ಈ ಸಮುದಾಯಕ್ಕೆ ಸೇರಿದ ಪುರುಷರನ್ನು 'ದೇವಲಿಗಳು' ಅಥವಾ 'ನಾಯಿಕರು' ಎಂದೂ, ಮಹಿಳೆಯರನ್ನು 'ಭವಾನಿಗಳು' ಅಥವಾ 'ನಾಯಿಕಿನ್'ರು ಎಂದು ಕರೆಯಲಾಗುತ್ತದೆ.

ಮಧ್ಯ ಭಾರತದಲ್ಲಿ 'ಕಸ್ಬಿ'ಗಳು ಎಂದು ಕರೆಯಲ್ಪಡುವ ದೇವದಾಸಿಯರ ಆಚರಣೆ, ಉಡುಗೆ ತೊಡುಗೆ, ನೃತ್ಯದ ಕುರಿತು ಆರ್.ವಿ.ರಸಲ್ ವಿವರವಾದ ಮಾಹಿತಿಯನ್ನು ನೀಡಿದ್ದಾನೆ. ನರ್ತಕಿ ಯಾವಾಗ ಹದಿಹರಿಯಕ್ಕೆ ಕಾಲಿರಿಸುವಳೋ, ಅಗ ಅವಳ ತಾಯಿ ಯಾರಾದರೊಬ್ಬ ಸಾಹುಕಾರನ ಬಳಿ ಹೋಗಿ, ಮೊದಲು ಮಗಳನ್ನು ಅವನಿಗೆ ಒಪ್ಪಿಸುವುದಾಗಿ ಮಾತು ಕೊಟ್ಟು, ಸಾಲ ಪಡೆಯುತ್ತಾಳೆ. ವಧುವಿನ ಶರೀರಕ್ಕೆ ಐದು ದಿನಗಳ ಕಾಲ ಎಣ್ಣೆ ಮತ್ತು ಅರಿಶಿಣವನ್ನು ಹಚ್ಚುತ್ತಾರೆ. ತಮ್ಮ ಸಮುದಾಯಕ್ಕೆ ಸೇರಿದ ಜನರಿಗೆ ಊಟವನ್ನು ನೀಡಲಾಗುತ್ತದೆ. ಹುಡುಗಿಗೆ ಕಠಾರಿಯೊಂದಿಗೆ ಕೂರಿಸಿ ಕಠಾರಿಗೆ ಮದುವೆ ಮಾಡುವರು. ಕಠಾರಿಯನ್ನು ಮದುವೆಯಾದ ಹುಡುಗಿಯು ಕಠಾರಿಯ ಸುತ್ತ ಏಳು ಸುತ್ತು ಸುತ್ತುತ್ತಾಳೆ. ಅವಳ ದೈಹಿಕ ಸಂಪರ್ಕಹೊಂದಲು ನಿಗದಿಯಾದ ವ್ಯಕ್ತಿಯು ಹುಡುಗಿಯ

ಹಣೆಗೆ ಕುಂಕುಮ ಹಚ್ಚಿ ಅವಳ ತಲೆಯನ್ನು ಸೆರಗಿನಿಂದ ಏಳು ಬಾರಿ ಮುಚ್ಚುತ್ತಾನೆ. ಅಂದು ರಾತ್ರಿ ಅವನೊಂದಿಗೆ ಹಾಸಿಗೆ ಹಂಚಿಕೊಳ್ಳುವಳು. ಅವನಿಗೆ ಇಷ್ಟವಾಗುವಷ್ಟು ದಿನ ಅವನೊಂದಿಗಿದ್ದು ತರುವಾಯ ಸ್ವತಂತ್ರವಾಗಿ ತನ್ನ ವೇಶ್ಯಾವೃತ್ತಿಯನ್ನು ಕೈಗೊಳ್ಳುತ್ತಾಳೆ.

ಮಧ್ಯಭಾರತದ ಪೂರ್ವದ ಪುರಿಜಗನ್ನಾಥ ದೇವಾಲಯದಲ್ಲಿ ಇಂದಿಗೂ ದೇವಸ್ಥಾನದೊಂದಿಗೆ ಅನೇಕ ದೇವದಾಸಿಯರು ಸಂಬಂಧ ಹೊಂದಿದ್ದಾರೆ. ೧೯೮೫ರಲ್ಲಿ ಬ್ರಿಟಿಷ್ ಕೊಲಂಬಿಯಾ ವಿಶ್ವವಿದ್ಯಾನಿಲಯದ ಮಾರ್ಗ್ಲಿನ್ ಎನ್ನುವ ಹಿರಿಯ ಪ್ರಾಧ್ಯಾಪಕರು ಈ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಿದ್ದಾರೆ. ಕ್ರಿ.ಶ. ೧೮೧೫ರಲ್ಲಿ ಬ್ರಿಟಿಷ್ ಪಾದ್ರಿ ವಾರ್ಡ್‌ನು ಪುರಿಯಲ್ಲಿದ್ದ ಈ ವ್ಯವಸ್ಥೆಯ ಕುರಿತು ಹೀಗೆ ತಿಳಿಸುರುವನು. "ಪುರಿಯ ಜಗನ್ನಾಥ ದೇವಾಲಯದೊಳಗೆ ದೇವರಸೇವೆ ಮಾಡಲೆಂದು ಇರುವ ಹಲವು ಹೆಣ್ಣುಮಕ್ಕಳಿರುವರು. ಪೂಜಾ ಸಂದರ್ಭದಲ್ಲಿ ದೇವರ ಮುಂಭಾಗದಲ್ಲಿ ನರ್ತನ ಮಾಡುವ, ಹಾಡುವ ಸೇವೆಗಳನ್ನು ಮಾಡುವರು. ಈ ಮಹಿಳೆಯರನ್ನು ಕೀಳಾಗಿ ಕಾಣಲಾಗುವುದು. ಇವರು ದೇವಾಲಯದಲ್ಲಿ ವಾಸಿಸದೆ ದೇವಾಲಯದ ಹೊರಗೆ ಬೇರೆ ಬೇರೆ ಮನೆಗಳಲ್ಲಿ ವಾಸಿಸುತ್ತಾರೆ. ಜಗನ್ನಾಥನ ಪೂಜಾರಿ (ಪುರೋಹಿತ ವರ್ಗ) ಹಾಗೂ ಭಕ್ತಾದಿಗಳು ಇಂತಹ ಹೆಂಗಸರೊಂದಿಗೆ ಅನೈತಿಕವಾಗಿ ನಡೆದುಕೊಳ್ಳುವರು. ಹಾಡು, ನರ್ತನ ಮಾಡುವ ಮಹಿಳೆಯರು ದೇವದಾಸಿಯರಾಗಿರುವರು".[೩೪] ಯುರೋಪಿನ ಒಬ್ಬ ವೈದ್ಯ ಮುರ್ಡೊಕ್, ಪುರಿಯ ಜಗನ್ನಾಥ ದೇವಾಲಯಕ್ಕೆ ಸಂಬಂಧಿಸಿದ ಹಾಗೆ ಈ ಕೆಳಗಿನ ಮಾತುಗಳನ್ನು ಹೇಳುತ್ತಾನೆ. "ಖಾಲಿ ಬಿದ್ದಿರುವ ಹುದ್ದೆಗಳನ್ನು ತುಂಬಲು ಸುಮಾರು ಆರುನೂರಾನಲವತ್ತು ಜನರು ಬೇಕಾಗುತ್ತಾರೆ. ಆ ಪೈಕಿ ಕೆಲವು ಹುದ್ದೆಗಳನ್ನು ಇಲ್ಲಿ ಹೆಸರಿಸಲಾಗಿದೆ. ಜಗನ್ನಾಥನನ್ನು ಮಲಗಿಸಲು ಒಬ್ಬ ಅಧಿಕಾರಿ ಇರುವನು. ಮತ್ತೊಬ್ಬ ಅವನನ್ನು ಏಳಿಸಲು, ಒಬ್ಬನು ಅವನ ಮುಖ ತೊಳೆಯಲು, ನೀರು ಕೊಟ್ಟರೆ, ಮತ್ತೊಬ್ಬನು ಬಾಯಿ ತೊಳೆಯಲು, ಹಲ್ಲುಕಡ್ಡಿ ಕೊಡುವನು ಈ ಎಲ್ಲದರ ಜೊತೆಗೆ ಸುಮಾರು ನಾಲ್ಕು ನೂರು ಅಡಿಗೆ ಮಾಡುವ ಕುಟುಂಬಗಳು ಮತ್ತು ನೂರಾಇಪ್ಪತ್ತು ನರ್ತಕಿಯರು"[೩೫] ಜಗನ್ನಾಥ ದೇವರಿಗೆ ಸೇವೆ ಮಾಡಲು ಅನೇಕ ದೇವದಾಸಿಯರಿದ್ದರು ಎಂಬುದನ್ನು ಮುರ್ಡೊಕ್ ಬಹಳ ಸ್ಪಷ್ಟವಾಗಿ ಸೂಚಿಸುತ್ತಾನೆ. ಅವರೆಲ್ಲಾ ನೂರಾರು ಸಣ್ಣ ಪುಟ್ಟ ದೇವಾಲಯಗಳಿಗೆ ನಡೆದುಕೊಳ್ಳುವವರಾಗಿದ್ದರು. ಮತ್ತು ಈ ದೇವಾಲಯಗಳ ಪೂಜಾರಿಗಳು, ಯಾತ್ರಾರ್ಥಿಗಳು ಮತ್ತು ಸಾಧುಗಳೊಂದಿಗೆ ಅನೈತಿಕ ಸಂಬಂಧಗಳನ್ನು ಹೊಂದಿದ್ದರು.

ಹೈದ್ರಾಬಾದಿನ ನಿಜಾಮರ ಕಾಲಾವಧಿಯಲ್ಲಿ ಸಾಮಾನ್ಯವಾಗಿ ತೆಲುಗು ನರ್ತಕಿಯರನ್ನು 'ಬೋಗಮ್'ಗಳೆಂದು ಹೆಸರಿಸುತ್ತಾರೆ. ಹಿಂದೂ ಮತ್ತು ಮಹಮ್ಮದೀಯ ವರ್ಗಗಳಿಗೆ ಅವರು ಸೇರಿದವರಾಗಿದ್ದರು. 'ನಾಯಕಸಾನಿ' ಎಂದು ಹಿಂದೂ ಬೋಗಮ್‌ಗಳನ್ನು ಹೆಸರಿಸಿದರೆ 'ಜಾನ' ಅಥವಾ 'ನಾಯಕನ್' ಎಂದು ಮಹಮ್ಮದೀಯ ಬೋಗಮ್‌ಗಳನ್ನು ಹೆಸರಿಸುತ್ತಾರೆ. "ಬೋಗಮ್ ಮೂಲದಲ್ಲಿ ವಿಷ್ಣು ಮತ್ತು ಶಿವ ದೇವಾಲಯಗಳಿಗೆ ಸಂಬಂಧವನ್ನು ಹೊಂದಿದವರು. 'ದೇವರ

ಸೇವಕಿಯರು' ಎಂದು ಸೂಚಿಸಲ್ಪಡುತ್ತಿದ್ದರು. ಅವರಲ್ಲಿ ಬಹಳಷ್ಟು ಜನ ನರ್ತನ ಮಾಡುವುದು, ಹಾಡುವುದು ಮತ್ತು ವೇಶ್ಯಾವೃತ್ತಿಯಿಂದ ಜೀವನ ಸಾಗಿಸುತ್ತಿದ್ದರು. ಕೃಷ್ಣನ ಪ್ರತಿಮೆಯೊಡನೆ ಹುಡುಗಿಯ ಮದುವೆ ಆಗುವುದರೊಂದಿಗೆ ಹೊಸ ಜೀವನ ಪ್ರಾರಂಭಿಸುತ್ತಿದ್ದಳು. ಹುಡುಗಿಯ ಮನೆಯಲ್ಲಿ ಹದಿನಾರು ಕಂಬಗಳ ಒಂದು ಮಂಟಪವನ್ನು ನಿರ್ಮಿಸಿ, ಒಂದು ಮಂಗಳಕರ ದಿನದಂದು ಕೃಷ್ಣನ ಪ್ರತಿಮೆಯನ್ನು ತಂದಿಡಲಾಗುತ್ತಿತ್ತು. ಹುಡುಗಿಯನ್ನು ಪ್ರತಿಮೆಯ ಎದುರು ನಿಲ್ಲಿಸಿ, ಒಂದು ತೆರೆಯನ್ನು ಮಧ್ಯೆ ಹಿಡಿಯಲಾಗುತ್ತಿತ್ತು. ಬ್ರಾಹ್ಮಣ ಪುರೋಹಿತನು ಮದುವೆಯ ಮಂತ್ರಗಳನ್ನು ಹೇಳಿ, ಸಾಂಪ್ರದಾಯಿಕ ರೀತಿಯಲ್ಲಿ ಮದುವೆ ಮಾಡಿಸುತ್ತಿದ್ದ, ಕಾಪು ಅಥವಾ ಮುನ್ನೂರ್‌ಗಳ ಮದುವೆಯ ಹಾಗೆಯೇ ಎಲ್ಲಾ ವಿಧದಲ್ಲೂ ಸಮಾರಂಭ ನಡೆಯುತ್ತಿತ್ತು. ನಾಗೋಲೆ ದಿವಸ ಶಿವನ ಪ್ರಿಯತಮೆಯಾದ ಗೌರಿಯ ಪೂಜೆಯನ್ನು ಮಾಡುತ್ತಿದ್ದಳು. ಎಲೆ, ಅಡಿಕೆ ಮತ್ತು ಕುಂಕುಮವನ್ನು ಅಲ್ಲಿ ಸೇರಿರುವ ನರ್ತಕಿಯರಿಗೆ ಹಂಚುತ್ತಿದ್ದಳು. ಅವರು ಹಾಡು ಹಾಡಿ, ನವವಧುವನ್ನು ಆಶೀರ್ವಾದಿಸಿ, ತಮ್ಮ ತಮ್ಮ ಮನೆಗಳಿಗೆ ತೆರಳುತ್ತಿದ್ದರು. ತಮ್ಮ "ಏಳು ಅಥವಾ ಎಂಟನೆಯ ವಯಸ್ಸಿನಲ್ಲಿಯೇ ನೃತ್ಯದ ತರಬೇತಿ ಪ್ರಾರಂಭಿಸಿ ಹನ್ನೆರಡು ಅಥವಾ ಹದಿಮೂರನೆಯ ವಯಸ್ಸಿನಲ್ಲಿ ಪ್ರದರ್ಶನವನ್ನು ನೀಡುತ್ತಿದ್ದಳು. ಮೂವತ್ತು ಅಥವಾ ನಲವತ್ತನೆಯ ವಯಸ್ಸಿನವರೆಗೆ ನೃತ್ಯವನ್ನು ಮುಂದುವರೆಸುತ್ತಿದ್ದರು. ಪುರೋಹಿತರು ಪೂಜಾ ಕಾರ್ಯವನ್ನು ನಿರ್ವಹಿಸಿದರೆ, ದೇವಾಲಯದಲ್ಲಿರುವ ನರ್ತಕಿಯರು ದೇವರ ಎದುರು ನೃತ್ಯ ಮಾಡಬೇಕಾಗುತ್ತಿತ್ತು. ಚಿನ್ನದ ಒಡವೆಗಳನ್ನು ಹೇರಳವಾಗಿ ಹಾಕಿಕೊಂಡು, ರೇಷ್ಮೆ ಮತ್ತು ಮಸ್ಲಿನ್‌ಗಳ ಆಡಂಬರದ ಬಟ್ಟೆಗಳನ್ನು ಧರಿಸಿಕೊಂಡು ಅವರಲ್ಲಿ ಬಹಳಷ್ಟು ಮಂದಿ ಸಾರ್ವಜನಿಕವಾಗಿ ಪ್ರದರ್ಶನ ನೀಡಲು ತರಬೇತಿ ಹೊಂದಿರುತ್ತಿದ್ದರು. ಭಗವಾನ್ ಕೃಷ್ಣನ ಪ್ರಣಯ ಜೀವನಕ್ಕೆ ಸಂಬಂಧಿಸಿದಂತೆ ಈ ಬೋಗಮ್‌ಗಳು ಅಶ್ಲೀಲ ಹಾಡುಗಳನ್ನು ಹಾಡುವುದರಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದರು".[೩೭] ೧೮೯೯ರ ಮಾರ್ಕಸ್ ಫುಲ್ಲರ್ ಎಂಬ ಧರ್ಮ ಪ್ರಚಾರಕಿ ಕೊಂಕಣ ಮತ್ತು ಗೋವಾ (ಪಶ್ಚಿಮ ಭಾರತ)ಗಳಲ್ಲಿ ಸಂಚರಿಸಿದಳು. ಅವಳು 'ಭವಿನ್'ಗಳು ಎಂಬ ಮಹಿಳೆಯರ ಕುರಿತು ವಿವರಗಳನ್ನು ನೀಡುವಳು. ಗೋವಾದಲ್ಲಿರುವ ಭಗವಾನ್ ಮಂಗೇಶ್ ದೇವಾಲಯ ಮತ್ತು ಅದರ ಸುತ್ತ–ಮುತ್ತ ಹಾಗೂ ಕೊಂಕಣದ ಕೆಲವು ಭಾಗಗಳಲ್ಲಿ ಪ್ರತಿಮೆಗಳನ್ನು ಪೂಜಿಸುತ್ತಿದ್ದರು. ಈ ಮಹಿಳೆಯರಲ್ಲಿ ಕೆಲವರು ದೇವರುಗಳಿಗೆ ತಮ್ಮ ತಂದೆ ತಾಯಿಗಳಿಂದ ಬಳುವಳಿ ನೀಡಲ್ಪಟ್ಟವರಾಗಿದ್ದರು. ದೇವಾಲಯದ ಜ್ಯೋತಿಗಳನ್ನು ಬೆಳಗಿಸುವುದು ಮತ್ತು ಅವುಗಳನ್ನು ಶುದ್ಧವಾಗಿಡುವುದು, ನೆಲವನ್ನು ಗುಡಿಸಿ, ಸಾರಿಸುವುದು, ಪ್ರತಿಮೆಗೆ 'ಚೌರಿಯಿಂದ' ಗಾಳಿ ಹಾಕುವುದು ಮತ್ತು ಗುಂಪಿಗೆ 'ಹುಕ್ಕ' ಸರಬರಾಜು ಮಾಡುವುದು ಅವರ ಕರ್ತವ್ಯವಾಗಿತ್ತು. ಬೇರೆ ಹಿಂದೂಗಳು ಮಾಡುವ ಹಾಗೆ ಸಣ್ಣ ಕಡ್ಡಿಗಳಿಂದ ಜ್ಯೋತಿಯನ್ನು ತಳ್ಳುತ್ತಿರಲಿಲ್ಲ. ಬದಲಾಗಿ ತಮ್ಮ ಕೈಬೆರಳುಗಳಿಂದಲೇ ಅದನ್ನು ತಳ್ಳುತ್ತಿದ್ದರು. ಭವಿನ್‌ಗಳಲ್ಲದೆ ಬೇರೆ ಯಾರಾದರೂ ಜ್ಯೋತಿಯನ್ನು ತಳ್ಳಿದರೆ ಅವರಿಗೆ ಬಡತನ ಪ್ರಾಪ್ತವಾಗುತ್ತದೆ ಎಂದು ಭಾವಿಸಲಾಗುತ್ತಿತ್ತು. ಮತ್ತೆ ಈ ಕ್ರಮವನ್ನು ಹಿಂದೂಗಳ ಮನೆಗಳಲ್ಲೂ ವಸ್ತುಶಃ ಆಚರಿಸುತ್ತಿದ್ದರು. ಈ ಮಹಿಳೆಯರ ಅಚ್ಚ ಮರಾಠ ಪರಂಪರೆಗೆ ಸೇರಿದವರು. ಈ

ವರ್ಗಗಳಲ್ಲಿರುವ ಮಹಿಳೆಯರ ಪೈಕಿ ಇವರು ಬಹಳ ಕೆಳಮಟ್ಟದವರು. ಅವರನ್ನು ತೀರಾ ತಿರಸ್ಕಾರದಿಂದ ಕಾಣಲಾಗುತ್ತಿತ್ತು. ಆ ಸ್ಥಿತಿಯೇ ಒಂದು ಗಾದೆಯೊಳಗೆ ಸೇರಿ ಹೋಯಿತು. 'ಅವರು ತಮ್ಮನ್ನು ತೀರಾ ಕೆಳಮಟ್ಟಕ್ಕೆ ಇಳಿಸಿಕೊಂಡು ದೇವಾಲಯದ ಬೆಕ್ಕುಗಳು ಎಂಬ ಹೆಸರಿಗೆ ತಕ್ಕವರಾದರು'. ಅವರು ದೇವಾಲಯಗಳ ಹಿಂದುಗಡೆ ತಮ್ಮ ಸ್ಥಳಗಳನ್ನು ಕಾದಿರಿಸಿಕೊಂಡರು. ಆದರೆ, ನಾಯಿಕಿನ್ ಅಥವಾ ನಾಚ್ ಹುಡುಗಿ ದೇವರುಗಳ ಎದುರಿನಲ್ಲಿ ಮತ್ತು ದೊಡ್ಡ ಸಭೆಗಳಲ್ಲಿ ನೃತ್ಯ ಮಾಡುತ್ತಿದ್ದಳು ಹಾಗೂ ದೇವರುಗಳ ಮುಂಭಾಗದಲ್ಲಿ ಅವರಿಗೆ ಸ್ಥಳ ಕಾದಿರಿಸಲಾಗಿತ್ತು. ದೇವದಾಸಿಯರು ಅಥವಾ ನಾಚ್ ಹುಡುಗಿಯರಿಗಿಂತ ಭವಿನ್‌ಗಳು, ಮುರಳಿಗಳು ಮತ್ತು ಜೋಗ್‌ತಿನ್‌ಗಳು ಮತ್ತಿತರರು ಕೆಳಮಟ್ಟದವರೆಂದು ಅಂದು ಪರಿಗಣಿಸಲಾಗಿತ್ತು. ಆದರೆ, "ಯಾವುದೇ ಹೆಸರಿನಿಂದ ಈ ಮಹಿಳೆಯರನ್ನು ಕರೆಯಲಿ, ಅವರುಗಳ ನಡುವೆ ಪದ್ಧತಿಗಳಲ್ಲಿ ಎಷ್ಟೇ ವ್ಯತ್ಯಾಸವಿರಲಿ, ಧರ್ಮ ಮತ್ತು ಪದ್ಧತಿಯ ಹೆಸರಿನಲ್ಲಿ ಅವರು ಅನೈತಿಕ ಬದುಕನ್ನು ತತ್ವಶಃ ನಡೆಸುತ್ತಿದ್ದರು".[೩೮] "ಕರ್ನಾಟಕದ ಮೈಲಾರ ಹಾಗೂ ಮಹಾರಾಷ್ಟ್ರದ 'ಖಂಡೋಬ', ಒಂದೇ ದೇವತೆ. ಪೂನಾ ಜಿಲ್ಲೆಯ ಜೆಜುರಿ ಖಂಡೋಬನ ಪ್ರಧಾನ ಸ್ಥಳ. ಸತಾರ ಜಿಲ್ಲೆಯಲ್ಲಿ ಪಾಳಿ ಎಂಬಲ್ಲೂ ಒಂದು ಪೂಜಾ ಸ್ಥಳವಿದೆ. ಬಾಲ್ಯದ ದಿನಗಳಲ್ಲೇ ತಮ್ಮ ತಂದೆ ತಾಯಿಗಳಿಂದ ಖಂಡೋಬನಿಗೆ ಅರ್ಪಿಸಲ್ಪಟ್ಟ ಹುಡುಗಿಯರಿಗೆ 'ಮುರಳಿಯರು' ಎಂದು ಹೆಸರು. "ಮೋಸ ಹೋದ ಬಡ ಹೆಂಗಸರು, ಖಂಡೋಬನು ತಮಗೆ ಹೆಚ್ಚು ಮಕ್ಕಳನ್ನು ಕರುಣಿಸುವುದಾದರೆ, ಮೊದಲು ಹುಟ್ಟಿದ ಮಗಳನ್ನು ಅವನಿಗೆ ಅರ್ಪಿಸುವುದಾಗಿ ಪ್ರಮಾಣ ಮಾಡುತ್ತಿದ್ದರು. ಅದರಂತೆ, ಮೊದಲು ಹುಟ್ಟಿದ ಮಗಳನ್ನು ಖಂಡೋಬನಿಗೆ ಅರ್ಪಿಸುತ್ತಿದ್ದರು. ಅವಳ ಕತ್ತಿಗೆ ಏಳು ಕವಡೆಗಳ ಒಂದು ಸರವನ್ನು ಹಾಕಿ, ಸಣ್ಣ ಹೆಣ್ಣು ಮಗಳನ್ನು ಖಂಡೋಬನಿಗೆ ಅಥವಾ ಕಠಾರಿಗೆ ಅವಳನ್ನು ಮದುವೆ ಮಾಡುತ್ತಿದ್ದರು. ಹಾಗಾಗಿ ಅವಳು ಖಂಡೋಬನ ಹೆಂಡತಿಯಾಗುತ್ತಿದ್ದಳು. ಅವಳು ಲೌಕಿಕವಾಗಿ ಯಾವ ವ್ಯಕ್ತಿಯನ್ನೂ ಮದುವೆ ಆಗುವ ಹಾಗಿಲ್ಲ. ದೇವರ ಹೆಸರಿನಲ್ಲಿ ಪರಪುರುಷರ ಸಂಪರ್ಕ ಹೊಂದಬಹುದಾಗಿತ್ತು. ಈ ಪೈಕಿ ಕೆಲವು ಹುಡುಗಿಯರು ಸುತ್ತಾಡುವ ಮುರುಳಿಯರಾಗುತ್ತಿದ್ದರು. ಇನ್ನು ಕೆಲವರು ಪಟ್ಟಣ ಅಥವಾ ನಗರಗಳಲ್ಲಿ ಸಾಮಾನ್ಯ ವೇಶ್ಯೆಯರಾಗಿ ಬದುಕತೊಡಗುತ್ತಿದ್ದರು. ಕೆಲವರು ಯಾರಾದರೂ ಒಬ್ಬನೊಂದಿಗೆ ಹಲವು ವರ್ಷಗಳ ಕಾಲ ಇರುತ್ತಿದ್ದರೆಂದು ಹೇಳಲಾಗಿದೆ. ಅವರ ತಂದೆ–ತಾಯಿಗಳು ಅವರು ಹಾಕಿಕೊಂಡಿರುವ ಓಲೆಗಳನ್ನು ಕಳಚಿ ಕೊಳ್ಳಲು ನಾಚುವುದಿಲ್ಲ. ಏಕೆಂದರೆ, ಅವು ಖಂಡೋಬನದು. ಅವರು ಹಾಗೆ ಮಾಡುವುದು ಪಾಪ ಕೃತ್ಯವೆಂದು ಯಾವ ಭಕ್ತಳಿಗೂ ಅನ್ನಿಸುತ್ತಿರಲಿಲ್ಲ. ಕುಣಬಿಗಳು, ಮಹರ್‌ಗಳು, ಮಾಂಗ್‌ಗಳು ಮತ್ತಿತ್ತರ ಕೆಳಜಾತಿಗೆ ಸೇರಿದವರು ಈ ಬಗೆಯಲ್ಲಿ ತಮ್ಮ ಮಕ್ಕಳನ್ನು ಮುರುಳಿಗಳನ್ನಾಗಿ ಮಾಡುತ್ತಿದ್ದರು."[೩೯] ಕರ್ನಾಟಕದಲ್ಲಿಯೂ ಈ ಪದ್ಧತಿ ಇದ್ದು ಇಲ್ಲಿ ಆ ರೀತಿಯ ಹೆಣ್ಣುಗಳನ್ನು ಗೊರವಿಯರು ಎಂದು ಕರೆಯುವರು.

ಕರ್ನಾಟಕದಲ್ಲಿಯೂ ಅನಾದಿ ಕಾಲಗಳಿಂದಲೂ ವೇಶ್ಯಾವೃತ್ತಿ ಅಸ್ತಿತ್ವದಲ್ಲಿದೆ. ದೇವದಾಸಿಯರು ಈ ವೃತ್ತಿಯ ಒಂದು ಭಾಗವಾಗಿದ್ದಾರೆ. ಇದರ ಅರ್ಥ ದೇವದಾಸಿಯರೆಲ್ಲ ವೇಶ್ಯೆಯರು ಎಂದಲ್ಲ.

ಒಂದು ಸಾವಿರ ವರ್ಷಕ್ಕಿಂತಲೂ ಅಧಿಕ ಇತಿಹಾಸವುಳ್ಳ ಕನ್ನಡ ಸಾಹಿತ್ಯದಲ್ಲಿಯೂ ವೇಶ್ಯೆ ಮತ್ತು ಅದರ ಪರ್ಯಾಯ ಪದಗಳು ಹೇರಳವಾಗಿ ಬಳಕೆಯಾಗಿದ್ದು, ಆ ಮೂಲಕ ಅವರ ಬದುಕಿನ ವಿವಿಧ ಆಯಾಮಗಳನ್ನು ಅರಿಯಲು ಅವು ಸಹಾಯಕವಾಗಿವೆ. ಪ್ರಾಚೀನ ಮಹಾಕಾವ್ಯಗಳಲ್ಲಿ ಅಷ್ಟಾದಶರ್ಣನೆಗಳು ಕಡ್ಡಾಯವಾಗಿರುತ್ತಿದ್ದವು. ಅಷ್ಟಾದಶರ್ಣನೆಗಳಲ್ಲಿ ವೇಶ್ಯಾವಾಟಿಕೆಯ ವರ್ಣನೆಯೂ ಒಂದು. ಪ್ರಾಚೀನ ಸಮಾಜದಲ್ಲಿ ವೇಶ್ಯಾವಾಟಿಕೆಯು ಒಪ್ಪಿತ ಮೌಲ್ಯವಾಗಿದ್ದಿತು. ಇ.ಪಿ.ರೈಸರು ಕನ್ನಡ ಕಾವ್ಯಗಳ ದೌರ್ಬಲ್ಯಗಳನ್ನು ಪಟ್ಟಿಮಾಡುತ್ತ ಅವುಗಳಲ್ಲಿ ವೇಶ್ಯಾವಾಟಿಕೆಯ ವರ್ಣನೆಯೂ ಒಂದೆಂದು ತಿಳಿಸುತ್ತಾನೆ.

ಪಂಪನ ವಿಕ್ರಮಾರ್ಜುನ ವಿಜಯದ ನಾಲ್ಕನೇ ಆಶ್ವಾಸದಲ್ಲಿ ವೇಶ್ಯಾವಾಟಿಕಾ ವಿಹಾರವನ್ನು ಪರಿಶೀಲಿಸಬಹುದು. "ಸುಭದ್ರೆಯನ್ನು ಕೂಡಲಾಗದ ಅರ್ಜುನನು ದ್ವಾರಕಾನಗರದ ಸೂಳೆಯಗೇರಿಯತ್ತ ಸಾಗುತ್ತಾನೆ. ಮೊದಲಿಗೆ ಹೂವಿನ ಮಾರುಕಟ್ಟೆಯನ್ನು ಪ್ರವೇಶಿಸಿದ ಅರ್ಜುನನು ಕೊನೆಗೆ ಇಷ್ಟಬಂದ ಸ್ಥಳಕ್ಕೆ ತೆರಳಿ ಬಯಸಿದ ಇಚ್ಛೆಯನ್ನು ಬಯಸಿದಂತೆಯೇ ತೀರಿಸಿಹೋಗುವ ಜಾರೆಯರನ್ನು ಕಂಡನು" (ವಿ ವಿ. ೪, ವಚನ ೮೧) ಪಂಪನಂತೆ ನೇಮಿಚಂದ್ರನು ತನ್ನ ಲೀಲಾವತಿ ಕಾವ್ಯದ ಎರಡನೇ ಆಶ್ವಾಸಪೂರ್ತಿ ಸೂಳೆಗೇರಿಯ ವರ್ಣನೆಗೆ ಮೀಸಲಿರಿಸಿರುವನು.

**ಕಾವ್ಯದ ಕೆಲವು ಒಂದು ಸತ್ಯವನ್ನು ಉಲ್ಲೇಖಿಸಿದೆ**

“ಜಾತಿ ಸೂಳೆಗೆ ರಣಭೀತನ ಮುಸಿನುಡಿ

ವಾತನ ಖಳನ ಕೆಳೆಯನ ಬದಗನ

ಬೂತಿನ ಮಾತು ದಿಟವಲ್ತು

ಪತ್ತಿದ ಗಂಡರ ಚಿತ್ತವ ಕಿಡಲೀಯ

ದಿತ್ತುದೇ ಕೋಟಿ ತನಗೆಂಬ ಸೂಳೆಯ

ಹಿತ್ತಲಲ್ಲಿರದೆ ಸುರಭೂಜ”[೮೦]

ಮಧ್ಯಕಾಲೀನ ಪ್ರಸಿದ್ಧ ಕನ್ನಡದ ಕವಿ ರಾಘವಾಂಕನು ತನ್ನ ಕಾಲದ ವೇಶ್ಯೆಯರ ಜೀವನದ ನೈಜ ಚಿತ್ರಣವನ್ನು ಹರಿಶ್ಚಂದ್ರ ಕಾವ್ಯದಲ್ಲಿ ಕೊಟ್ಟಿರುವನು. ಅವನ ಪ್ರಕಾರ “ಸೂಳೆಗೇರಿಯಂದರೆ ಜಾಣಿನ ಜನ್ಮಭೂಮಿ, ಸಿಂಗರದ ಮಡು, ಮೋಹನದ ಬೀಡು, ಸೊಬಗಿನ ಸೀಮೆ, ಚದುರಿನ ಚಾವಡಿ, ಪುರುಡಿನ ಎಡೆ, ಉಪಚಾರದ ಇಕ್ಕೆ, ವೈಸಿಕದ ಹರವರಿ, ಹುಸಿಯಹಸರ, ಕೃತಕದ ಕೇರಿ, ಅರ್ಥದ ಆಗರ, ಅಳುಪಿನ ಆವಾಸವೇ ಸರಿ”[೮೧]

ವೇಶ್ಯೆಯರ ಬಗೆಗೆ ಕವಿಗಳ ಪ್ರತಿಕ್ರಿಯೆಯನ್ನು ತಿಳಿಯಲು ನಾವು ಆದಿ ಕವಿ ಪಂಪನಿಂದ ಹಿಡಿದು ಇಂದಿನ ಆಧುನಿಕ ಕವಿಗಳವರೆಗೆ ರಚಿತವಾದ ಎಲ್ಲಾ ಸಾಹಿತ್ಯವನ್ನು ಅಧ್ಯಯನ

ಮಾಡಬೇಕಾಗುತ್ತದೆ. ಕನ್ನಡ ಸಾಹಿತ್ಯದಲ್ಲಿ ವೇಶ್ಯೆ ಎಂಬ ಪದ ಕೂಡ ಬಹಳ ವಿರಳವಾಗಿ ದೊರೆತು, ಅದರ ಪರ್ಯಾಯ ಪದಗಳಾದ ಸೂಳೆ, ಪಾತರಿ, ಬೆಲೆವೆಣ್ಣು, ಗಣಿಕೆ, ಜಾರೆ–ಎಂಬ ಪದಗಳು ಹೆಚ್ಚಾಗಿ ಕಂಡು ಬರುವುವು. ಕೆಲ ಕವಿಗಳು ವೇಶ್ಯೆಯರ ಜೀವನ ಶೈಲಿಯನ್ನು ಟೀಕಿಸಿದ್ದರೆ, ಇನ್ನು ಕೆಲವರು ಅವರ ಸೌಂಧರ್ಯ, ಒನಪು, ವೈಯಾರ, ಅವರು ಗಿರಾಕಿಗಳನ್ನು ಆಕರ್ಷಿಸುತ್ತಿದ್ದ ವಿವರಗಳನ್ನು ವರ್ಣಿಸಿದ್ದಾರೆ. ಇವು ಆಯಾ ಕಾಲದಲ್ಲಿ ಜನಮಾನಸದಲ್ಲಿ ಬೇರೂರಿದ್ದ ಭಾವನೆಗಳಾಗಿರಲೂಬಹುದು, ಇಲ್ಲವೇ ವೈಯಕ್ತಿಕ ಕಲ್ಪನೆ ಅಥವಾ ಅನುಭವಗಳಾಗಿರುವ ಸಾಧ್ಯತೆಯಿದೆ. ಅದಕ್ಕಾಗಿಯೇ 'ಸಾಹಿತ್ಯವು ಜನಜೀವನದ ಪ್ರತಿಬಿಂಬವಾದರೆ, ಕವಿ ಅದನ್ನು ಪ್ರತಿಬಿಂಬಿಸುವ ಬಿಂಬಗ್ರಾಹಿ' ಎಂದು ಕರೆದಿರುವುದು. ಬೇರೆ ಬೇರೆ ಕಾಲದಲ್ಲಿ ಜೀವಿಸಿದ್ದ ಕವಿಗಳು ವೇಶ್ಯೆಯರ ಬಗೆಗೆ ಯಾವ ದೃಷ್ಟೀಕೋನ ಹೊಂದಿದ್ದರೆಂಬುದನ್ನು ಇಲ್ಲಿ ವಿವರಿಸಲಾಗಿದೆ.

ಕನ್ನಡ ಸಾಹಿತ್ಯ ಕೃತಿಗಳಲ್ಲಿ ವೇಶ್ಯೆಯರ ಬಗೆಗೆ ವಿಸ್ತಾರವಾದ ವರ್ಣನೆಗಳು ದೊರೆಯುತ್ತವೆ. ರಾಜಸಭೆ ಶೋಭಿಸಬೇಕಾದರೆ ಅದರಲ್ಲಿ ಇರಬೇಕಾದ ನಾನಾವೃತ್ತಿಯ ಜನರಲ್ಲಿ ವೇಶ್ಯೆಯರು ಒಬ್ಬರು ಎಂದು ಕವಿ ಸೋಮನಾಥ ಹೇಳುತ್ತಾನೆ. ಈತನೇ ಶುಭ ಶಕುನ ಸೂಚಕಗಳನ್ನು ಹೇಳುತ್ತಾ 'ವೇಶ್ಯೆಯರು' ಶುಭ ಶಕುನಗಳಲ್ಲಿ ಒಬ್ಬರು ಎಂದು ಹೇಳುತ್ತಾನೆ. ಕವಿಗಳ ರಾಜಸಭೆಯ ವರ್ಣನೆಗಳಲ್ಲಿ ನಾನಾವೃತ್ತಿಯ ಜನರ ವಿಶ್ಲೇಷಣೆಗಳೊಂದಿಗೆ ಅನೇಕ ವೇಶ್ಯೆಯರ ಪ್ರಸ್ತಾಪವನ್ನು ಮಾಡಿರುವುದನ್ನು ಗಮನಿಸಬಹುದು. ರಾಜಸಭೆ ಸಮಾರಂಭಗಳನ್ನು ಗಮನಿಸಿ ವಿದೇಶೀ ಪ್ರವಾಸಿಗರು ಕೊಟ್ಟಿರುವ ವರದಿಗಳ ಆಧಾರವನ್ನು ಪರಿಶೀಲಿಸಿ ಡಾ. ಸಾಲೆತೊರೆ ಅವರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "The Public women was entiteled to be present on certain occasions-at the time of feasts, when festivals were held, and during a campaagine"[೪೨] ಪ್ರಾಚೀನ ಕವಿಗಳಲ್ಲಿ ಒಬ್ಬನಾದ ಸೋಮನಾಥ ಕವಿ ಸೂಳೆಯರು ಎಂಥವರನ್ನೇ ಆಗಲಿ, ಹಣಕೊಟ್ಟ ಮಾತ್ರಕ್ಕೆ ಒಲಿಯುವರು ಎಂದು ಸೋಮನಾಥ ಹೇಳಿ, ಹೇಗೆ ಅವರು ಹಣದಾಸೆಗಾಗಿ ಯಾವುದನ್ನು ಲೆಕ್ಕಿಸುವುದಿಲ್ಲ ಎಂಬುದನ್ನು ಬಹಳ ಅರ್ಥವತ್ತಾಗಿ ವರ್ಣಿಸಿದ್ದಾನೆ: ಮುದುಕ, ಕುಂಟ, ಕುರುಡ, ಮೂಗ, ಮೂರ್ಖ, ಹೇಡಿ, ಕಿವುಡ, ಚಂಡಾಲ, ಕುಷ್ಟರೋಗವುಳ್ಳವನು ಇವರನ್ನೆಲ್ಲ ಸೂಳೆ ಹಣಕ್ಕಾಗಿ ಒಲಿಯುವಳು. ಸೂಳೆಯರ "ಹಣದಾಸೆಯ ಪ್ರಭಾವವನ್ನು ಕುರಿತು ಸೋಮನಾಥನು ಕೊಡುವ ಮತ್ತೊಂದು ವಿವರ ಇಂತಿದೆ. ಹಣವಿರುವವನು ಹೆಣದಂತೆ ಅವಲಕ್ಷಣವಾಗಿದ್ದರು ಸೂಳೆ ಅವನನ್ನು ಯಾವಾಗಲು ಬಿಟ್ಟಿರದೆ ಪ್ರೀತಿಯನ್ನು ತೋರಿಸುತ್ತಿರುವಳು; ಬೂಟಾಟಿಕೆಯ ಮಾತುಗಳನ್ನಾಡಿ ಅವನ ಮನಸ್ಸನ್ನು ಸಂತೋಷಗೊಳಿಸಿ ಹಾಲ ಮುಂದಣ ಬೆಕ್ಕು ಆಡುವಂತೆ ವಿನೋದಿಸುತ್ತಿರುವಳು. ಅವನಲ್ಲಿ ಹಣವು ಮುಗಿದ ಕೂಡಲೇ ಮಾತನ್ನೂ ಆಡಳು. ಸೂಳೆಯ ಗುಣವು ಇಂತಹುದು ಎಂದು ಹೇಳುತ್ತಾನೆ. ಸೂಳೆಗೊಬ್ಬಳು ಮಗಳು ಹುಟ್ಟಿದರೆ ಪ್ರಯೋಜನವೇನು? ಆ ಹೆಣ್ಣು ಮತ್ತೊಂದು ಬೆಲೆವೆಣ್ಣು ಎಂಬುದನ್ನು ಆತನೇ ಹೀಗೇ ವರ್ಣಿಸುತ್ತಾನೆ. "ಬೆಲೆವೆಣ್ ಪೆಣ್ಣಂ ಪೆತ್ತಂತೆ ಸೂಳೆಯೊಡನೆನಿತು ಕಾಲಮಿರ್ದೊಡಂ ಮಿಂಡರೆಂಬರಲ್ಲದೆ ಪೆಅರಿಲ್ಲ" 'ಬಿಟ್ಟಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದೆರಣ್ಣಾ....ಅಣ್ಣಾ

ನಾನುಸೂಳೆಯಲ್ಲ' 'ಸೂಳೆತನುಮುಟ್ಟ ಅಪ್ಪುವಳಲ್ಲದೆಮನ ಮುಟ್ಟ ಅಪ್ಪಳು' ಸೂಳೆಯ ಮಗ ಮಹಳವ(ಶ್ರಾದ್ಧ) ಮಾಡಿದಡೆ ತಾಯ ಹೆಸರಾಯ್ತು. ತಂದೆಯ ಹೆಸರಿಲ್ಲ. ಕೂಸುಳ್ಳ ಸೂಳೆ ಧನ ದಾಸೆಗೆ ಒತ್ತೆಯಕೊಂಡರೆ ಕೂಸಿಂಗಲ್ಲ ಬೊಜಗಂಗಲ್ಲ. ಬೆಲೆವೆಣ್ಣೆಂದೊಡೆ ಬೇಟವೆತ್ತಣದೊ! ಎಂದು ವಿಳೆಯೊಳು ಬಿಟ್ಟಿಯುಂಟೆ ಸೂಳೆಮಿಂಡರಿಗೆ' ಕೊಡುಗೈ ವೇಶ್ಯೆಯ ವಶವೈ"ಎನ್ನುತ್ತಾನೆ. ಅದೇ ರೀತಿ "ಭಾಸ್ಕರ ಕವಿಯು ತನ್ನ 'ಜೀವಂಧರ ಚರಿತೆ'ಯಲ್ಲಿ ಹೊನ್ನಿನಾಸೆಗೆ ಬಧಿರ, ಅಂಧಕ, ತೊನ್ನ, ಚೋರ, ಕೃತಜ್ಞ, ಖಳರಿಗೆ ತನ್ನನ್ನು ಎತ್ತು ಎದೆ ಗೊಯ್ಸಿಕೊಂಡು ಅನುಭವಿಸಿ, ನಾಚಿಕೆಗೆಟ್ಟು, ನನ್ನಿಗೆಟ್ಟು, ನಾನಾ ವರ್ಣದ ಎಂಜಲ ತಿಂದು ಬಾಳುವ ಗನ್ನಗತಕದ ವೇಶ್ಯಯರ ಬಾಳ ಸುಡಲಿ ಎಂದು ಅವರ ಬಾಳಿಗೆ ಹೇಸಿ ನುಡಿಯುತ್ತಾನೆ. ಹಗೆಯನ್ನು ಉರುಗನನ್ನು ಜಾರವನಿತೆಯನು ನಂಬಿದ ಮೂಢರಿಗೆ ವಿಗಢವೆಂದಿದ್ದರೂ ತಪ್ಪದು ಎಂದು ಮತ್ತೊಬ್ಬ ಸಮಕಾಲೀನ ಕವಿ ಜನರನ್ನು ಎಚ್ಚರಿಸುತ್ತಾನೆ."[೬೩] ಸೂಳೆಯರು ಉದರಮಿತ್ತವಾಗಿ ಬಹುವಿಧ ನಾಟಕವನ್ನಾಡುತ್ತಾರೆ. ಒಬ್ಬನ ಕೈವಿಡಿದು ಒಬ್ಬನಿಗೆ ಮಾತುಕೊಟ್ಟು, ಒಬ್ಬನಿಗೆ ಸನ್ನೆಯಮಾಡಿ, ಮತ್ತೊಬ್ಬನ ಸಂಗ ಮಾಡುವ ಹಾದರಗಿತ್ತಿಯರು ಅವರು. ಮಹಿಳೆಗೆ ಹೇಗೆ ಸತಿಯೆನಿಸುವುದಿಲ್ಲವೋ, ಹಾಗೆಯೇ ಸೂಳೆಯರು ಏಕ ಪುರುಷನಲ್ಲಿ ವಿಹರಿಸುವುದು ಸಾಧ್ಯವಿಲ್ಲ. ಹಾದರಕ್ಕೆ ಮತ್ತೊಂದು ಹೆಸರಾಗಿ, ಹಣದಾಸೆಗೆ ಬದುಕು ಮಾರಿದ ಬಾಳು ಈ ಗಣಿಕೆಯರದು. ಹಣವೇ ಇವರಿಗೆ ಸರ್ವಸ್ವ ಎಣಿಸುವರೆ ಧನಹೀನರನ್ನು ದಿಟಗಣಿಕೆಯರು? ರೊಕ್ಕವಿದ್ದರೆ ಸೂಳೆಯರು ರೊಕ್ಕ ತೀರಲು ಸೂಳೆ ಹೋಹಳು. ಹಣ ಹರೆಯುವ ತನಕ ಗಣಿಕೆ ಗಣಗಣಿಸುತ್ತಿರುವಳು, ಹಣವುಹರೆ ಹೋದ ಬಳಿಕಾ ಸೂಳೆ ಶುನಕನಂತಿರುವಳು. ಸಸಿಗೆ ನೀರೆರೆಯುವಂತೆ ರಸಿಕರಾದವರು, ಪ್ರೀತಿಯಿಂದ ದಿನವು ಧನವನ್ನು ಬೆಲೆವೆಣ್ಗೆ ನೀಡಿತಿದ್ದರೆ ಆಗ ಅವಳಿಂದ ಅವನಿಗೆ ಅಸದಳ ಬೇಂಟವು ಒದಗುವುದು. ವಂಶಪಾರಂಪರ್ಯವಾಗಿ ಈ ವೇಶ್ಯೆ ವೃತ್ತಿ ನಡೆದು ಬರುತ್ತಿದೆ ಎಂಬ ಒಂದು ಅಭಿಪ್ರಾಯವನ್ನು ಒಪ್ಪಬಹುದಾದರೂ, ಆರ್ಥಿಕ ದುಃಸ್ಥಿತಿ, ಕೆಲವು ಸಾಮಾಜಿಕ ಸಮಸ್ಯೆಗಳೂ ಇದಕ್ಕೆ ಕಾರಣವಾಗಿವೆ ಎಂದು ಕೆಲವು ಕವಿಗಳು ಚಿಂತನೆ ಮಾಡಿದ್ದಾರೆ.

"ಬಡವನ ಸ್ತ್ರೀ, ವೃದ್ಧನ ವಧು, ಷಂಡನ ಮಡದಿ, ರೋಗಿಯ ಪೆಂಡತಿಯು, ಮೊಡವಿಯೊಳಿವರಾದಿ ಸೃಷ್ಠಿ ಹಾದರಕೆ" ಎಂದು ಒಬ್ಬ ಕವಿ ಪ್ರಪಂಚದಲ್ಲಿ ಹಾದರಕ್ಕೆ ಈ ಸಂಧರ್ಭಗಳು ಸನ್ನೀವೇಶಗಳು ಕಾರಣವಾಗುತ್ತವೆ ಎಂದು ಹೇಳಿದ್ದಾನೆ. 'ಬಡವನ ಹೆಂಡತಿಯು ಕಡು ಚೆಲ್ವೆಯಾದರೆ ನಡುಬೀದಿಯೊಳಗೆ ದವನವ ಬಿತ್ತಲು ಮುಡಿಯದವರಾರು' ಎಂದು ಸರ್ವಜ್ಞನು ಹೇಳಿರುವುದು ಬಹುಷಃ ಇದೇ ದೃಷ್ಟೀಕೋನದಿಂದ ಇರಬೇಕು ಎನಿಸುತ್ತದೆ.

ವೇಶ್ಯೆಯರು ವಾಸಮಾಡುತ್ತಿದ್ದ ಜಾಗಗಳು, ಅಲ್ಲಿ ಅವರು ವಿಟರನ್ನು ಆಕರ್ಷಿಸುತ್ತಿದ್ದ ರೀತಿ ಇವುಗಳನ್ನು ಕುರಿತ ಸ್ವಾರಸ್ಯವಾದ ವಿವರಣೆಯನ್ನು ಕವಿಗಳು ಕೊಡುತ್ತಾರೆ. ಅಬ್ದುಲ್ ರಜಾಕ್ ಮತ್ತು ಪಾಯೆಸ್ ಅವರುಗಳು ಹೇಳುವಂತೆ ವಿಜಯನಗರದ ರಾಜಧಾನಿಯಲ್ಲಿ ಅವರದೇ ಕೇರಿಗಳಿದ್ದವು.

ಈ ವಿವರಗಳನ್ನು ಕನ್ನಡ ಕವಿಗಳು ದಾಖಲಿಸಿದ್ದಾರೆ. ನಾನಾ ವೃತ್ತಿಯರ ಮನೆಗಳಿದ್ದಂತೆ, ದ್ವಾರವತಿಯ ಬೀದಿಯಲ್ಲಿ ವಾರಂಗನೆಯರ ಮನೆಗಳೊಪ್ಪಿದವು ಎಂದು ಕನಕದಾಸರು ಹೇಳಿದರೆ, "...ರಸಿಕರ ಬೇಟದ ಬೆಳೆವೊಲ ನೆನಲ್ಲಲ್ಲಿ ವೇಶ್ಯೇವಾಟ ವಿಡಾಯವೆತ್ತಬಹುದು...."ಎಂದು ನಂಜುಂಡಕವಿ ಹೇಳುತ್ತಾನೆ. ಆ ಮನೆಗಳ ಸೊಬಗನ್ನು ಏನು ಹೇಳುವುದು: 'ಪಾರಿವವಿಲ್ಲದುಯ್ಯಲೆಗಳಿಲ್ಲದ ರಾಜಕೀರಮಿಲ್ಲದ ಸೌಮಿಲ್ಲದ ತೋರಣ ಕನಕ ಘಂಟೆಗಳಿಲ್ಲದ ಸೂಳೆಗೇರಿಗಳಿಲ್ಲ ತತ್ಪುರದೊಳು' ನವಿಲ ಉಯ್ಯಾಲೆ, ಮಕರ ತೋರಣ, ಮೀನ ಧ್ವಜ, ಸಂಜ್ಞಾ ಘಂಟೆ ಇವುಗಳಿಂದ ಶೋಭಿಸುವ ಮೊಗಸಾಲೆ ಪೊಂಗಳಸಗಳುಳ್ಳ ಉಪ್ಪರಿಗೆಯ ಸಾಲು ಸಾಲುಗಳುಳ್ಳ ವೇಶ್ಯಾವಾಟವು ಮನಮೋಹಕವಾಗಿದ್ದಿತು. "ವೇಶ್ಯೆಯರ ಮನೆಯಲ್ಲಿ 'ಸಂಜ್ಞಾ ಘಂಟೆ' ಇರುವ ವಿಚಾರವನ್ನು ಕೆಲ ಕವಿಗಳು ಉಲ್ಲೇಖಿಸಿದ್ದಾರೆ. ಬಹುಶಃ ವಿಟರ ಆಗಮನ ಸೂಚನೆಯನ್ನು ಕೊಡುವ ಸಲುವಾಗಿ ಇದು ಇದ್ದಿತೆಂದು ತೋರುತ್ತದೆ"[೪೩] ಎಂದು 'ಬಲಿದು.....ದೂರದಿ ಹೊಂದಿಸಿಹ ಹೊಂಗಟೆಂಯನುನಂದದಲಿ ದನಿಗೆಯ್ಯೆ ಚೇಟಯರಾಗಳೈತಂದು ಇಂದು ಮುಖಿಗೊತ್ತೆಯನು ಕೊಂಡು....'. ವೈದೂಷಿಕ ವಿಟಾನ್ವಿತ ಸೂಳೆಗೇರಿಗಳೆಸದವೊಗ್ಗಿನಲ್ಲಿ ಎಂಬ ಮಾತು ಸೂಳೆಗೇರಿಗೆ ಬರುತ್ತಿದ್ದ ವಿಟರು ಕೇವಲ ಕಾಮಕೇಳಿಯಲ್ಲಿ ಮಾತ್ರ ಆಸಕ್ತರಾಗಿರದೆ ಬುದ್ಧಿವಂತರು ಆಗಿದ್ದರೆಂಬುದನ್ನು ಸೂಚಿಸುತ್ತದೆ.

ಅಂದಿನ ಶ್ರೀಮಂತ ವಾರಾಂಗನೆ(ಸೂಳೆ)ಯರ ಕುರಿತಂತೆ ಚಂದ್ರಶೇಖರ ಕವಿ ಕೊಡುವ ವಿವರ ಇಂತಿದೆ 'ಪಂಪಾಪುರಿಯ ವಾರನಾರೀಕರ ಈ ಚಿತ್ರವು ಅವರ ವೈಭವ ವಿಲಾಸಗಳ ದ್ಯೋತಕವಾಗಿದೆ: "......ಮತ್ತಮೊತ್ತರದಿನೆಸೆವ ಮಿಸುನಿವೆಸುಗೆಯ ಕುಸುರಿಗೆಲಸದ ಮಣಿ ಮಾಡಂಗಳೊಳಿಯಿಂದೊಪ್ಪುವ ಸೂಳೆಗೆರಿಯೋಲಗದ ವೇಳೆಯನರಿತು ಕರವೆತ್ತಿಕರೆವ ಸೂಳಾಯುತದವರದನಿಗೇಳುತ್ತ ಕೈಯವೀಣೆಯಂ ಕೆಲದೊಳಿರಿಸಿ ಪಾಡುವರಂ ಪುರ್ವಿನಿಂಜರ್ವಿನೆತ್ತಮನೆತ್ತಿ ಜೂಜಿನೋಜೆಯಂ ತಿದ್ದಿ ಆಡುವ ನೃತ್ಯಮನರೆಯಾಗಿ ನಿಲಿಸಿ ಕೇಳಮೇಳದ ಕೆಳದಿಯರಂ ಕಳುಪಿ ಭಟ್ಟ ನಟ್ಟವಿಗ ಗೋಷ್ಠಿಗಾರ ನಗೆಗಾರ ನುಡಿಗಾರರಂ ಮನ್ನಿಸಿ ಬಿನ್ನಣ ಮಾಗಿ ಮುನ್ನವೆ ಕೈಗೈದಿರ್ಪ ಪಳಂಚಿನುಂಗುರದ ಪಾಯಪಟ್ಟದ ನೇವುರದ ಮುಕುತಿಯ ಮಾಣಿಕ್ಯದೋಲೆಯ ಪೆಂಠೆಯ ವೈಸಿಕತಿಲಕದ ಪಣೆಗಟ್ಟನ....ಸಿರಿಯ ಸೊಬಗಿನ ರೂಪುರೇಖೆಯ ಜಾತಿ ಜಾಣ್ಮೆಯ ಬಿಂಕ ಬಿನ್ನಣದ ಹಚ್ಚ ಹರೆಯದ ತಾರುತಮೆಯಿಂದೋರೆಯಾಗಿ ಬೇರೆ ಬೇರೆ ವರಸಿ ಪಂಪಾಪುರಿಯ ವಾರನಾರೀನಿಕರಂ ನಡೆತರುತಿರ್ದುದು....."; [೪೪] ಸೂಳೆಗೆರಿಯ ಮನೆಗಳಲ್ಲಿ ಶಾಸ್ತ್ರೀಯ ಸಂಗೀತ ಕೇಳಿ ಬರುತ್ತಿತ್ತು ಎಂದು ನಂಜುಂಡಕವಿ ಅವರ ಕಲಾಭಿಜ್ಞತೆಯನ್ನು ಈ ರೀತಿ ಕೊಂಡಾಡುತ್ತಾನೆ. "ಗೌಳ ವಸಂತ ವೇಳಾವಳಿ ಮಾರ್ಗಹಿಂದೋಳ ಗುಂಡಕ್ರಿಯೆಗಳನು ಆಳಾಪಿಸುವ ಬಲೆಯರು ಕಣ್ಗೆಸದರಾ ಸೂಳೆಗೇರಿಯ ವೀದಿಗಳೊಳು....".

ಅಂದು ಕೇವಲ ಶ್ರೀಮಂತ ವೇಶ್ಯೆಯರೊಂದಿಗೆ ಸಾಮಾನ್ಯ ವೇಶ್ಯೆಯರು ಸಹಾ ಇದ್ದರು ಎಂಬುದನ್ನು ಮುಂದಿನ ವಿವರದಿಂದ ತಿಳಿಯಬಹುದು. "ಬಟ್ಟತಾಗಿಯೆ ಹಣೆಗೆ ಸುಣ್ಣದ ಬೊಟ್ಟೆಸಗಿ, ಎಡಕ್ಕೆ ಬೈತಲೆಯನ್ನು ತಿದ್ದಿ, ಕವದ ಹೂಗಳನ್ನು ತುರುಬಿ, ಬಾಯೊಳಗೆ ಕೆಟ್ಟಡಕೆಗಳನಡಸಿಕೊಂಡು

ಮಹಾಟ್ಟಹಾಸದೊಳು ಒಲಿದು ದಾಸಿಯರು ಇಟ್ಟಣಿಸಿದರು ಸಂಜೆಯಲಿ ಪುರದ ಮಧ್ಯದಲಿ...."[೪೫] ವಿಟರನ್ನು ಇವರು ಆಕರ್ಷಿಸುವ ರೀತಿಯು ಮೋಹಕವಾಗಿತ್ತು: 'ಸೋಲ್ದನಂ ಕಂಡು ಕಣ್ಗೊನೆಗೊಲಿದು, ನೋಟಮಂ ಜೋಲ್ದುರುಬನೊಂದಿಸುವನೆವದಿಂದ ನಸುನಗೆಯಪಸರಿಸುತ್ತ, ಕಾಲ್ದೆಗೆಯದೆ ಒಯ್ಯನೊಯ್ಯನೆ ನಾಲ್ದೆಸೆಗೆ ಮೈಸಿರಿಯನ್ನು ಕಾಣಿಸುತ್ತ ನಡೆಯುವರು.' ವೇಶ್ಯೆಯರ ಮನೆಗೆ ವಿಟರ ದಾಳಿ ಅಹೋರಾತ್ರಿ ನಿರಂತರವಾಗಿ ಸಾಗಿರುತ್ತದೆ. ಹೊಟ್ಟೆಯ ಪಾಡಿಗಾಗಿ ಈ ವೃತ್ತಿಯನ್ನು ನಡೆಸುತ್ತಿರುವ ಅವರು, ಆ ವಿಟರು ಹೆಗೆ ಇರಲಿ, ಅವರನ್ನು ಸ್ವಲ್ಪವೂ ಬೇಜಾರು ಮಾಡದೆ, ಬರುವ ಒಬ್ಬೊಬ್ಬರನ್ನು, ಬೇಸರಪಡಿಸದೆ, ಅವರಲ್ಲಿ ತಮಗೆ ಅನುರಾಗವಿಲ್ಲ ಎಂಬ ಭಾವನೆಗಳಿಗೆ ಆಸ್ಪದಕೊಡದೆ ಮನೆಗೆ ಬಂದ ಎಲ್ಲರನ್ನೂ ತಮ್ಮ ಒಲವಿನ ಬಲೆಗೆ ಸಿಕ್ಕಿಸಿಕೊಳ್ಳುತ್ತಿದ್ದರು. ಕವಿ ಅಂತಹ ಚಾಣಾಕ್ಷತೆಯನ್ನು ವಿಟವಿದಗ್ಧೆಯರೆಂದು ಪ್ರಶಂಸಿದ್ದಾನೆ: "ಒಬ್ಬನೊಳು ಮಾತಾಡುತೊಬ್ಬಗೆ ಹುಬ್ಬುಹಾಯ್ಕುತ ಕಲೆಯುತೊಬ್ಬನನುಬ್ಬಸುತ ಮತ್ತೊಬ್ಬನೊಳು ನಗುತೊಬ್ಬಗೊಲವೆಸಗಿ ಒಬ್ಬರಲೊಬ್ಬರ ನಿರೀಕ್ಷಿಸಲೊಬ್ಬನಿವನಗೊಲಿದಳೆಂದುಬ್ಬುತಿರ್ದಳು ವಿಟವಿದಗ್ಧೆಯದೊರ್ವಳಿರುಳಿನೊಲು."[೪೬]

ವಯೋಧರ್ಮಕ್ಕೆ ಅನುಗುಣವಾಗಿ ಅವರ ಯೌವ್ವನವೆಲ್ಲ ಕರಗಿ ವೃದ್ಧಾಪ್ಯದ ಸೂಚನೆಗಳು ಇಣುಕುತ್ತಿವೆ. ಆದರೆ ವೇಶ್ಯೆಯರು ಮುದುಕಿಯರಾದರೆ ತಾನೆ ಏನು? ಹೊಟ್ಟೆಪಾಡು ನಡೆಯಬೇಕಲ್ಲ. ಆಗಲೂ ಅವರ ಜೀವನ ಎಂದಿನಂತೆಯೆ ನಡೆಯಲು ಸಾಧ್ಯವಿಲ್ಲವಾದರೂ ವಿಟರನ್ನು ಆಕರ್ಷಿಸಲು, ವೃದ್ಧಾಪ್ಯವನ್ನು ಮುಚ್ಚಲು ಅದೆಷ್ಟೋ ಬಗೆಯಲ್ಲಿ ಅಲಂಕಾರ ಮಾಡಿಕೊಳ್ಳುತ್ತಾರೆ. "ನೆರೆದಲೆಯ ಮಸಿದೊಡೆದು, ಮುಸುಕಿಟ್ಟೊವಸಿ, ಮಸಿಯಮವೆಯಲಿ ತುಂಬನುಧರಿಸಿ ಜಠರಕೆ ಜರಿದ ಮೊಲೆಗಳ ರವಕೆಯೊಳು ತುಂಬಿ, ನಸುಸೊಡರಿಟ್ಟು, ಕಣ್ಗೆವೆಯುರಳಲ್ ಅಂಜನವೂಡಿ ಸುಮವರ ಕರೆವ ಮುದಿವೇಸಿಯರ....' ಇಂತಹ ಮುದಿವೇಶಿಯರ ಮನೆಗೆ ಬರುತ್ತಿದ್ದ ವಿಟರೂ ಕೂಡ ಆಗಲೇ ವೇಶ್ಯೇವಾಟಿಕೆಗಳಲ್ಲಿ ಕಾಲಿಟ್ಟು ಅದರ ಪರಿಣಾಮವಾಗಿ ವಿನಾಶದ ಹಾದಿಯಲ್ಲಿ ಸಾಗುತ್ತಿರುವ ವೃದ್ಧವಿಟರು: ಹಂಜಿಗುಕ್ಕೆಯೊಳೆಸೆವ ಮೊಗದೊಳು, ಬಾಯಿಂಜೊಲ್ಲುಸುರಿಯೆ, ತಲೆನಡುಗೆ, ಮೆಯ್ಯೊಳಂಜಗುಳ್ದುಡುಪನೆತ್ತುತೆ, ಮುರುಡುಗೋಲ್ವಿಡಿದು, ನಡೆವ ಮುದುಪಂ, ಕಂಜಮುಖಿಯೋರ್ವಳ ಕಂಡು ಭ್ರಮೆಗೊಂಡು ತಾನುಂ ಜಗುಲಿಯೆಡೆಗೆ ನಡೆದು, ಒತ್ತೆಯಂ ಕೇಳುತಿರ್ದ.."[೪೭] ಇಂತಹ ಒಬ್ಬ ವೃದ್ಧ ವಿಟನನ್ನು ಕಂಡು ಕವಿ 'ಜಗದೊಳೆಂತಪ್ಪರಂ ಮನಸಿಜಂ ಮರುಳ್ಮಾಡದಲ್ಲದೆ ಮಾಣ್ಬನೆ' ಎಂದು ವಿಸ್ಮಯ ಪಡುತ್ತಾನೆ. ಈ ವೇಶ್ಯೆಯರಿಗೆ ಅವರ ತಾಯಿಯರು, ಅಥವಾ ಕುಂಟಣಿಯರು ಯಾವ ರೀತಿ ಸಹಕರಿಸುತ್ತಿದ್ದರು ಮತ್ತು ವಿಟರಿಂದ ಹಣವನ್ನು ನಾನಾ ರೀತಿಯ ಉಪಾಯಗಳನ್ನು ಮಾಡಿ ಪಡೆಯಬೇಕು ಎಂದು ವೇಶ್ಯೇಯರಿಗೆ ನೀಡುವ ಹಿತೋಕ್ತಿಗಳನ್ನು ನಮ್ಮ ಕನ್ನಡ ಕವಿಗಳು ಬಹಳ ಸ್ವಾರಸ್ಯಕರವಾಗಿ ಈ ಮುಂದಿನಂತೆ ವರ್ಣಿಸಿದ್ದಾರೆ. "ನಗುವುದಳುವುದು ಮನವನಾರ್ಜಿಸಿತೆಗೆವುದರ್ಥವ ನಾವ ಪರಿಯಲಿ ಬಗೆಯ ಬೇರಿರಿಸುವುದು ಬಾಹ್ಯದ ಮಮತೆಗಳ ಬಯಸು। ಉಗುಳದಂವನು ವಿಟರನು । ಜಗುಳಿಸಿಪ್ಪೆಯಮಾಡು ನೀನೇಮಗಳೆ ನಡೆವುದು." ವೇಶ್ಯೆಯರ ತಾಯಿಯರಿಗೆ ಯಾವಾಗಲೂ ದುಡ್ಡಿನ ಆಮಿಷ. ನೆರೆಮನೆಯ ವಿಟರುಗಳು ಏನೇನು ಮಾಡುತ್ತಿದ್ದಾರೆ,

ಯಾವ ರೀತಿ ಅವರು ತಮ್ಮ ಪ್ರೇಯಸಿಯರನ್ನು ಒಲಿಸಿಕೊಂಡಿದ್ದಾರೆ ಎಂಬುದನ್ನೆಲ್ಲಾ ಗಮನಿಸಿ, ಬರಿಗೈಲಿ ತಮ್ಮ ಮನೆಗೆ ಬಂದ ವಿಟನನ್ನು ಛೀಮಾರಿ ಹಾಕುತ್ತಾಳೆ: "ನೆರೆಮನೆಯೊಳಿಪ್ಪ ವೇಶಿಯರೆಲ್ಲ ತಮ್ಮ ವಿಟಪುರುಷರಿಂದ ನವೀನ ವಸನಾಭರಣಗಳಂ ತರಿತರಿಸಿ ತರತರದೊಳಿಟ್ಟು ಮರೆವುದ ನೋಡಿ ಮರುಗುತಿಹಳೆನ್ನ ಮಗಳು ಸುರಭೂಜದಂತೀವ ವಿಟರನೊಲ್ಲದೆ ನಿನ್ನ ನೆರೆನಂಬಿದವಳನೀತೆರನ ಮಾಡಿದೆನ್ನ ಸರಿಯವರನೋಡಿ ನಾಚದೆ ಲಜ್ಜೆಗೆಟ್ಟು ನೀಂಬರುವುದೇತರ ಬಾಳ್ವೆಯೋ. ಕಲ್ಪವೃಕ್ಷದಂತೆ ಕೇಳಿದ್ದನ್ನು ಕೊಟ್ಟು ಅವರನ್ನು ತಣಿಸುವ ವಿಟರೇ ಅವರಿಗೆ ಬೇಕು. ಹಾಗಲ್ಲದೆ ಕೇವಲ ಗುಣ ಚತುರತೆಗಳಿಗೆ ಅವರು ಮಾರು ಹೋಗರು ಅಂತಹವರು ಒಮ್ಮೆ ತಮ್ಮ ಮನೆಗೆ ಕಾಲಿಟ್ಟರೆ, ಅವರನ್ನು ತೇಜೋವಧೆ ಮಾಡಿ ಮನೆಯಿಂದ ನೂಕುವುದಕ್ಕೂ ಹೆಸರು. ಅಂತಹ ಒಬ್ಬ ಗಯ್ಯಾಳಿಯ, ನಿಷ್ಕರುಣಿಯ ಚಿತ್ರವನ್ನು ಕವಿ ಆದ್ರೀಶ ಹೃದಯಂಗಮವಾಗಿ ಚಿತ್ರಿಸಿದ್ದಾನೆ: "ನಿನ್ನ ಗುಣಾವವಳಿಗಾಭರಣವಪ್ಪುವುದೆ ಮರುಳೆ ನಿನ್ನ ಚತುರತ್ವವೆನ್ನೆಯಮನೆಯ ಬೀಯ್ಯವೇ ನಿನ್ನ ಕವಿತೆಗಳೆನಗೆ ಧನಕನಕಪ್ಪುವೇ ಘನ್ನಘಾತಕವೇತಕೆ ನಿನ್ನೊಡನೆ ಬೇಟ ನಿರ್ಧಣಿಕಳಾಗುವ ಮಾಟ ನಿನ್ನೊಡನೆ ಕೂಟ ಪತ್ತಿರ್ದನಾಗರಕಾಟ, ಇನ್ನು ನಮ್ಮಾಲಯಕೆ ಬರವೇಡವೆಂದನ ಜರೆದು ಝುಂಕಿಸಿ ನೂಕಲು......"[೪೮] ಒಮ್ಮೊಮ್ಮೆ ವೇಶ್ಯೆಯರ ಮನೆಗೆ ಬರುವ ವಿಟರು ಲೋಭಿಗಳಾಗಿ ಭಂಡರಂತೆ ವರ್ತಿಸುತ್ತಾರೆ. ಅಂತಹ ಭಂಡ ವಿಟರನ್ನು ಕಂಡು ರೋಸಿಹೋದ ಒಬ್ಬ ಮುದಿಕುಂಟಣಿ ಈ ರೀತಿ ಪ್ರಲೋಪಿಸುತ್ತದೆ. "ಇತ್ತುದೊಂದರೆ ಕಾಸು ಬಿಡದುದಯಾಸ್ತ ಮಾನವು ಕದಲನಿವನೇಂ ಸತ್ತನೋ ಮೇಣ್ ದೈವ ಸೋಕಿತೋ ಬ್ರಹ್ಮರಾಕ್ಷಸನು ತುತ್ತಿದನೊ ನೆಲಕಿಮದನೋ ಸುತೆಗೆತ್ತಬಂದುದು ಮಾರಿ ಕೆಟ್ಟೆನೆನುತ ಮೊರೆಯಿಡುತಿರ್ಪ ಮುದುಗುಂಟಣಿಯು"[೪೯]

ಪ್ರತಿಯೊಂದು ವೃತ್ತಿಯವರಿಗೂ ಹೇಗೆ ತಮ್ಮದೆಯಾದ ಒಂದೊಂದು ಕುಲಧರ್ಮದ ವೃತ್ತಿ ನಿಯಮಗಳಿರುತ್ತವೆಯೊ, ಅದೇ ರೀತಿಯಲ್ಲಿ ವೇಶ್ಯೇಯರಿಗೂ ಕುಲಧರ್ಮ ಉಂಟು. ವೇಶ್ಯಾವೃತ್ತಿಗೆ ಕಾಲಿಡುತ್ತಿರುವ ಮಗಳಿಗೆ ತಾಯಿ ವೇಶ್ಯಾಧರ್ಮವನ್ನು ಹೇಗೆ ಭೋಧಿಸುತ್ತಾಳೆ ಎನ್ನುವ ಸಂಗತಿಯನ್ನು ಕವಿಗಳು ಹೀಗೆ ಹೇಳುತ್ತಾರೆ. "ದುಂಬಿ ಹೂವುಗಳಿಂದ ನವಪರಿಮಳವನ್ನು ಕೊಂಬಂತೆ, ಧನಿಕರಿಗೆ ಒಲುಮೆಗಳನಲವಡಿಸಿ, ತನು ಹೊರತೆಲ್ಲವನು ಸೆಳೆದು, ಜಲಪತ್ರೋದಕವಲು ಮನನಿಲುಕಿ ನಿಲುಕದ ತೆರದಿ ನಿಲಬೇಕೆಲೆರಮಣಿ ಗಣಿಕೆಯರಿಗಿದು ಕುಲಧರ್ಮವವನಿಯಲಿ. ಮರುಳು ಮಗಳೇ, ರೂಪಗುಣವದು ಸರಕ ವಸ್ತುವೆ? ಬಾತೆ ಜವ್ವನ ಜರಿಯದೆಂದೆ ಗಳಿಸಬೇಕೀ ಪ್ರಾಯವದು ಹೋಗಿ ಮರವ ಬರಲುಯ್ಯಾಲೆಯಲ್ಲೀ ಹರೆಯದಲ್ಲಿಯೇ ಧನವನಾರ್ಜಿಸಬೇಕು, ನರೆತಮಕಾರ್ಗೇನು ಫಲ.... ಸ್ಮರಸಮಾನಾಕಾರನಾಗಲಿ, ಸರಸಸುಕಲಾ ಪ್ರೌಢನಾಗಲಿ, ಕರೆಯದಿರು ಕದಲದಿರು ನಿರ್ಧನಿಕರನು, ಧನವುಳ್ಳ ನರಮೃಗಾಧಮ ನಾಗಲವನೊಳು ನೆರೆದು ದೇಹಮಾಡಿ ವಸ್ತುವ ಹೇಳುವುದೇ ಕುಲಧರ್ಮವೆಮಗೆ...."[೫೦] ಆದ್ದರಿಂದ 'ಪರಿಮಳವಿಲ್ಲದರಳನಳಿ ಬಿಡುವಂತೆ, ಮರುಳಿಲ್ಲದವನ ನೀ ಬೇಗ ಪರಿಹರಿಸುವುದಿದು ಸೂಳೆಸಿದ್ಧಾಂತದ ಪರಮ ರಹಸ್ಯ ಕೇಳಬಲ್ಲೆ ಎನ್ನುವನು.

ಹನ್ನೆರಡನೆಯ ಶತಮಾನವು ಕರ್ನಾಟಕದ ಇತಿಹಾಸದ ಒಂದು ವಿಶಿಷ್ಟ ಘಟ್ಟವೆಂದೇ ಹೇಳಬಹುದು. ಏಕೆಂದರೆ ವರ್ಣಭೇದ, ಲಿಂಗಭೇದ, ಜಾತೀಯತೆ, ಅಸ್ಪೃಶ್ಯತೆ, ದೇವಾಲಯಗಳಲ್ಲಿ ನಡೆಯುತ್ತಿದ್ದ ಶೋಷಣೆ, ದೇವದಾಸಿ ಪದ್ಧತಿ, ಸೂಳೆಗಾರಿಕೆ, ಮೂಢನಂಬಿಕೆಗಳು, ಸಂಪ್ರದಾಯ ಇನ್ನೂ ಮುಂತಾದ ಅನಿಷ್ಟ ಪದ್ಧತಿಗಳ ವಿರುದ್ಧ ಬಹುದೊಡ್ಡ ಹೋರಾಟ ನಡೆಯಿತು. ಇದನ್ನು ಪ್ರಾರಂಭಿಸಿದ್ದು ಸಮಾಜ ಸುಧಾರಕ, ಕ್ರಾಂತಿಕಾರಿ ಬಸವಣ್ಣ. ಅವರೊಂದಿಗೆ ಹೋರಾಟದಲ್ಲಿ ಪಾಲ್ಗೊಂಡ ಸಹಸ್ರಾರು ಶರಣ, ಶರಣೆಯರು ನಮ್ಮ ಇಂದಿನ ಬಹತೇಕ ಹೋರಾಟಗಳಿಗೆ ಮಾದರಿಯಾಗಿದ್ದಾರೆ. ಅವರು ಪ್ರತಿಪಾದಿಸಿದ್ದು ಮಾನವ ಧರ್ಮವನ್ನು. ಸ್ತ್ರೀ–ಪುರುಷರ ಸಮಾನತೆ ಹಾಗೂ ಸಮಾನ ಧರ್ಮದ ಸಂಸ್ಕಾರ ನೀಡಬೇಕೆಂದು ಬಸವಣ್ಣನವರ ಕನಸಾಗಿತ್ತು. ಈ ಕಾರಣಕ್ಕಾಗಿಯೇ ಅವರು ಅನುಭವ ಮಂಟಪವನ್ನು ರೂಪಿಸಿ, ಹೊಸದಾದ ಧರ್ಮವನ್ನು ಸ್ಥಾಪಿಸಿದರು. ಅಲ್ಲದೆ ಶೂದ್ರರು, ಅಂತ್ಯಜರು, ಮಹಿಳೆಯರು ಧರ್ಮ ಸಂಸ್ಕಾರಗಳಿಂದ ವಂಚಿತರಾದುದನ್ನು ಮನಗಂಡು ಸರ್ವರಿಗೂ ಸಮಾನವಾದ ಅಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ, ನೈತಿಕ, ಶೈಕ್ಷಣಿಕ ಸಮಾನತೆಯ ಹೊಸ ಪಂಥವನ್ನೇ ಹಾಕಿಕೊಟ್ಟರು. ಅವರ ಆಶಯದಂತೆ ಕೆಳ ವರ್ಗದ ಹಲವಾರು ಶರಣ ಮತ್ತು ಶರಣೆಯರು ಕಾಯಕ ನಿಷ್ಠೆಯನ್ನು ಬೆಳಸಿಕೊಂಡು ಆರ್ಥಿಕವಾಗಿ ಸುಭದ್ರವಾಗಿ ಹಲವು ಸಂಕೋಲೆಗಳಿಂದ ಮುಕ್ತರಾದರು. ಇದಕ್ಕೆ ದೇವದಾಸಿಯರು ಹೊರತಾಗಿರಲಿಲ್ಲ. ಅವರು ಈ ಅನಿಷ್ಟ ಪದ್ಧತಿಯನ್ನು ಕಿತ್ತೊಗೆದು ಹೊರಬಂದರು. ಅಂಥವರಲ್ಲಿ ಸೂಳೆ ಸಂಕವ್ವೆಯೂ ಒಬ್ಬಳು. ಸೂಳೆ ಸಂಕವ್ವೆಯು ವೇಶ್ಯಾವೃತ್ತಿಯನ್ನು ತ್ಯಜಿಸಿ, ಸತ್ಯ ಶುದ್ಧಕಾಯಕ ಮಾಡುತ್ತಾ, ವಿದ್ಯಾವಂತಳಾಗಿ, ಧರ್ಮ ಸಂಸ್ಕಾರ ಹೊಂದಿ ಶರಣೆಯಾಗಿ ವಚನಕಾರ್ತಿಯಾಗಿ ಬಾಳಿ ಬೆಳಗಿದ್ದಾಳೆ. ಅವಳ ಒಂದು ವಚನ ಹೀಗಿದೆ:

"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದೆಡೆ ಬತ್ತಲೆ ನಿಲ್ಲಿಸಿ ಕೊಲುವರಯ್ಯ!
ವ್ರತಹೀನನರಿದು ಬೆರೆದೆಡೆ
ಕಾದಕತ್ತಿಯಲ್ಲಿ ಕೈ, ಕಿವಿ, ಮೂಗು ಕೊಯ್ವರಯ್ಯಾ!
ಒಲ್ಲೆಲ್ಲೊ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ!"[೫೧]

ಈ ರೀತಿಯಾಗಿ ಬದುಕನ್ನು ಪರಿವರ್ತನೆ ಮಾಡಿಕೊಂಡು ಸಾತ್ವಿಕ, ಸರಳ ಶುದ್ಧ ಜೀವನ ಬಾಳಿರುವುದನ್ನು ಕಾಣುತ್ತೇವೆ.

ಧರ್ಮ–ದೇವರ ಹೆಸರಿನಲ್ಲಿ ದೇವದಾಸಿಯರಾಗಿ, ವೇಶ್ಯೆಯರಾಗಿ, ಸೂಳೆಯರಾಗಿ, ಕಾಮಾಂಧರರ ನಿರಂತರ ಅತ್ಯಾಚಾರಕ್ಕೊಳಗಾದ ಮಹಿಳೆಯರ, ಮಕ್ಕಳ ಬಗ್ಗೆಯೂ ಕೂಡಾ ಬಸವಣ್ಣನವರು ಚಿಂತಿಸಿದ್ದಾರೆ. ಅವರ ಕಲ್ಯಾಣಕ್ಕಾಗಿ ದುಡಿದಿದ್ದಾರೆ. ಅವರೂ ಧರ್ಮ ಸಂಸ್ಕಾರಕ್ಕೆ ಅರ್ಹರೆಂದು ಸಾರಿದುದಲ್ಲದೆ, ಅವರು ಸಾಕ್ಷಾತ್ ಶಿವನ ರೂಪಿಗಳು, ಜಂಗಮರೆಂದೇ ಪರಿಗಣಿಸಿ, ಗೌರವಿಸಿದ್ದಾರೆ.

ಬಸವಣ್ಣನವರ ಕೆಳಗಿನ ವಚನದಲ್ಲಿ ಈ ಅಂಶವನ್ನು ಕಾಣಬಹುದು.

'ದಾಸಿ ಪುತ್ರನಾಗಲಿ, ವೇಶ್ಯಾ ಪುತ್ರನಾಗಲಿ,
ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು
ವಂದಿಸಿ, ಪೂಜಿಸಿ ಪಾದೋದಕ ಪ್ರಸಾದ ಕೊಂಬುದೆ ಯೋಗ್ಯ,
ಹೀಗಲ್ಲದೆ ಉದಾಸೀನವ ಮಾಡಿ ಬಿಡುವವರಿಗೆ
ಪಂಚಮಹಾಪಾತಕ ನರಕಕಾಣಾ–ಕೂಡಲ ಸಂಗಮದೇವಾ!'[೫೨]

ಒಟ್ಟಿನಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ ಚಳುವಳಿ ಭಾರತದ ಇತಿಹಾಸದಲ್ಲಿಯೇ ಮಹತ್ತರವಾದದ್ದು. ಮೇಲಿನ ವಿವರಗಳಿಂದ ವೇಶ್ಯೆಯರ ಪರಿಸ್ಥಿತಿ ತೀರಾ ಆಧೋಗತಿಯಲ್ಲಿತ್ತೆಂದೂ, ಅಂಥಹ ಸುಳಿಯಲ್ಲಿ ಸಿಲುಕಿದವರ ಉದ್ಧಾರಕ್ಕಾಗಿ ಬಸವಣ್ಣನವರು ಶ್ರಮಿಸಿದರೆಂಬದು ಇದರಿಂದ ವ್ಯಕ್ತವಾಗುತ್ತದೆ. ವಿಜಯನಗರ ಅರಸರ ಕಾಲಕ್ಕೆ ಇವರನ್ನು ವಾರಾಂಗನೆಯರೆಂದು ಕರೆಯಲಾಯಿತು. "ಮಹಾನವಮಿ ಮಹೋತ್ಸವದಲ್ಲಿ ನಡೆಯುವ ಮನರಂಜನಾ ಪ್ರದರ್ಶನಗಳಲ್ಲಿ, ಪ್ರಾತಃಕಾಲದಿಂದ ಮಧ್ಯರಾತ್ರಿಯವರೆಗೂ ದೇವಾಲಯ, ಮಂಟಪ, ದ್ವಾರ, ಅರಮನೆ, ರಸ್ತೆಯ ಚೌಕ..... ಎಲ್ಲ ಕೇಂದ್ರ ಸ್ಥಳಗಳಲ್ಲಿ ಗುಂಪುಕಟ್ಟಿ ಕುಣಿಯುತ್ತಿದ್ದರು."[೫೩] 'ಬೆಳಗಿನ ಪೂಜೆಯ ನಂತರ ಅರಸನ ಮುಂದೆ ಸಹಸ್ರ ಅಂಗನೆಯರು ನೃತ್ಯ ಮಾಡುತ್ತಿದ್ದರು. ಸಂಜೆ ಕಪ್ಪಕಾಣಿಕೆಯು ಮುಗಿದ ನಂತರ ವಿಜಯಸೌಧದ ಮುಂದೆ (ರಾಜರ) ನೃತ್ಯ ಮಾಡುತ್ತಿದ್ದರು ಎಂದು ನಾಗೇಗೌಡರು ದಾಖಲಿಸಿದ್ದಾರೆ. ಅದೇ ರೀತಿ ಮೈಸೂರು ಒಡೆಯರ ಕಾಲದಲ್ಲಿಯೂ ಈ ಪದ್ಧತಿ ಆಸ್ತಿತ್ವದಲ್ಲಿತ್ತು. ಶ್ರೀಮಂತ ಸಾಂಸ್ಕೃತಿಕ ಪರಂಪರೆಯನ್ನು ಮೈಸೂರು ಒಡೆಯರು ಹೊಂದಿದ್ದರು. ರಾಜಾಶ್ರಯದ ಮೂಲಕ ಲಲಿತ ಕಲೆಗಳು ಮತ್ತು ನೃತ್ಯ ಮುಂತಾದವುಗಳಿಗೆ ಅವರು ಪ್ರೋತ್ಸಾಹ ನೀಡಿದರು. ದೇವದಾಸಿಯರಿಂದ ಸಾಂಪ್ರದಾಯಿಕ ನೃತ್ಯ ಶೈಲಿಯು ಅವರ ಕಾಲದಲ್ಲಿ ಮುಂದುವರೆಯಿತು. ದೇವದಾಸಿಯರ ಗುರುಗಳಿಗೆ ನಟುವರ್‌ಗಳು ಎಂದು ಕರೆಯಲಾಗುತ್ತಿತ್ತು. ದೇವಾಲಯಗಳಿಗಷ್ಟೇ ತಮ್ಮ ನೃತ್ಯ ಪ್ರದರ್ಶನಗಳನ್ನು ಸೀಮಿತಿಗೊಳಿಸಿದ್ದ ಅವರು ತಮ್ಮ ಧೋರಣೆಗಳನ್ನು ಬದಲಾಯಿಸಿಕೊಂಡು ೧೯ ಮತ್ತು ೨೦ನೆಯ ಶತಮಾನದಲ್ಲಿ ವೃತ್ತಿನಿರತ ನರ್ತಕಿಯರಾಗಿ ಬೆಳಕಿಗೆ ಬರತೊಡಗಿದರು. ಮೈಸೂರು, ಬೆಂಗಳೂರು, ಮುಳಬಾಗಿಲು, ಕಡೂರು, ಟಿ.ನರಸೀಪುರ ಮತ್ತು ಇತರೆ ಸ್ಥಳಗಳು ದೇವಾಲಯಗಳ ನರ್ತಕಿಯರಿಗೆ ಹೆಸರಾಗಿದ್ದವು. ಅವರು ಭರತನಾಟ್ಯ ಪ್ರಕಾರದಲ್ಲಿ ಪಳಗಿದವರಾಗಿದ್ದರು. ದೊಡ್ಡ ವ್ಯಾಪಾರಿಗಳಿಂದ ಮತ್ತು ಶ್ರೀಮಂತ ಜಮೀನುದಾರರಿಂದ ಅವರಿಗೆ ಪೋಷಣೆ ದೊರೆಯುತ್ತಿತ್ತು. "ಶಾಸ್ತ್ರಗಳು, ಶಾಸ್ತ್ರೀಯ ಸಂಗೀತ, ಭರತನಾಟ್ಯಂ ಮತ್ತು ಕೆಲವೊಂದು ಅಪರೂಪದ ಜಾಣ್ಮೆಗಳಲ್ಲಿ ಆ ನರ್ತಕಿಯರು ಪಳಗಿದವರಾಗಿದ್ದರು"[೫೪] "ಮೈಸೂರು ಶೈಲಿಯ ಭರತನಾಟ್ಯಂ" ಎಂಬ ನೂತನ ಬಗೆಯ ಶೈಲಿಯನ್ನು ನಿಷ್ಠಾವಂತ ದೇವದಾಸಿಯರ ಕುಟುಂಬಗಳು ಮುಂದಿನ ಪೀಳಿಗೆಗೆ ತಲುಪಿಸುವ ಹೆಗ್ಗಳಿಕೆಯನ್ನು ಹೊತ್ತುಕೊಂಡಿವೆ.

ಮುಮ್ಮಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬರುವುದರೊಂದಿಗೆ ಈ ಕಲೆಗೆ ರಾಜಾಶ್ರಯ ಒದಗಿಬಂದು, ಆ ಕ್ಷೇತ್ರದಲ್ಲಿ ಹೊಸ ಸಂವತ್ಸರವನ್ನು ಹುಟ್ಟು ಹಾಕಿತು. ಈ ಕಲೆಯಲ್ಲಿ ತೊಡಗಿಕೊಂಡಿರುವವರಿಗೆ ಜಯಚಾಮರಾಜ ಒಡೆಯರು ತಮ್ಮ ಪೋಷಣೆಯನ್ನು ಮುಂದುವರೆಸಿದರು. ಅವರ ಕಾಲದಲ್ಲಿ ದೇವಾಲಯಗಳಿಗೆ ಸಂಬಂಧ ಹೊಂದಿದ್ದ ಅನೇಕ ದೇವದಾಸಿಯರು ಪ್ರಮುಖ ನಗರಗಳಲ್ಲೆಲ್ಲ ಹರಡಿಕೊಂಡಿದ್ದರು. ಮುಳಬಾಗಿಲು, ಟಿ.ನರಸೀಪುರ, ಚಿಂತಾಮಣಿ ಬಳಿಯ ಹೂವಾಡಿ ಇವು ಅಂತಹ ಕೆಲವು ಪ್ರಮುಖ ಸ್ಥಳಗಳು. ಅಲ್ಲಿ ನಟುವರರೊಂದಿಗೆ ಸುಮಾರು ೨೦೦ ನರ್ತಕಿಯರಿದ್ದರೆಂದು ಹೇಳಲಾಗಿದೆ. ನಟುವರುಗಳಲ್ಲಿ ಕೆಲವು ಪ್ರಮುಖವಾದ ಹೆಸರೆಂದರೆ ಪಣಶೇಖರಿ ವೆಂಕಟಸುಬ್ಬಾಭಟ್ಟ ಮತ್ತು ಭಾವನೆಗಳ ಸೂಕ್ಷ್ಮ ಅಭಿವ್ಯಕ್ತಿಗೆ ಮತ್ತು ಅಭಿನಯ ಕಲೆಗೆ ಹೆಸರಾದ ಬೈರ್‌ಕೂರ್ ವೆಂಕಟಲಕ್ಷ್ಮಿ, ಟಿ.ನರಸೀಪುರದ ತಿರುಮಕೂಡಲು ಸುಂದರಮ್ಮ ಮತ್ತೊಬ್ಬ ಭರತನಾಟ್ಯದಲ್ಲಿ ಪರಿಣಿತಿ ಪಡೆದ ನರ್ತಕಿ. ಜಟ್ಟಿತಾಯಮ್ಮ ಅಂದಿನ ಒಬ್ಬ ಪ್ರತಿಷ್ಠಿತ ನರ್ತಕಿ. ಆಕೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಪೋಷಣೆ ದೊರೆಯಿತು. ಅವಳು ಶಾಸ್ತ್ರೀಯ ನೃತ್ಯವನ್ನು ಸುಬ್ಬರಾಯಪ್ಪನಿಂದಲೂ, ಅಭಿನಯವನ್ನು ಕವೀಶ್ವರ ಗಿರಿಯಪ್ಪನಿಂದಲೂ ಮತ್ತು 'ಅಭಿನವ' ಕಾಳಿದಾಸ' ಎಂದು ಹೆಸರಾದ ಕರಿಬಸವಪ್ಪಶಾಸ್ತ್ರಿಯಿಂದಲೂ ಕಲಿತಳು. ಎಂಭತ್ತೆರಡನೇ ವಯಸ್ಸಿನವರೆಗೂ ಅವಳ ಕಲಾಪ್ರೇಮ ನಿರಂತರವಾಗಿ ಸಾಗಿತು. ಭಾರತದ ರಾಷ್ಟ್ರಪತಿಗಳಿಂದ 'ನಾಟ್ಯ ಸರಸ್ವತಿ' ಎಂಬ ಬಿರುದನ್ನು ಆಕೆ ಪಡೆದಿದ್ದಳು.

"ಆ ಕಾಲದಲ್ಲಿ ಬಸವಿಯರನ್ನು (ದೇವದಾಸಿಯರ ಮತ್ತೊಂದು ಹೆಸರು) ಅರ್ಪಿಸುವ ಪದ್ಧತಿ ಸಾಮಾನ್ಯವಾಗಿತ್ತು. ಇದನ್ನು ಅಂದು ಬಸವಿ ಪದ್ಧತಿ ಎನ್ನಲಾಗುತ್ತಿತ್ತು."[೫೫] ಶಿಳ್ಳೆಕ್ಯಾತ, ಮಾದಿಗ, ದೊಂಬ, ವಡ್ಡ, ಬೇಡ, ಕುರುಬ, ಮತ್ತು ಗೊಲ್ಲ ಇತ್ಯಾದಿ ಸಮುದಾಯಗಳು ಈ ಅನಿಷ್ಟ ಪದ್ಧತಿಗೆ ಅಂದು ಒಳಗಾಗಿದ್ದವು. ಮೈಸೂರಿನ ಮಾನವಶಾಸ್ತ್ರದ ಸಂದರ್ಭದಲ್ಲಿ ಒಂದು ಕರಪತ್ರದಲ್ಲಿ ಜಾತಿ ಆಧಾರಿತ ಅರ್ಪಣೆಯನ್ನು ಕುರಿತು ವಿವರವಾಗಿ ಅಂಕಿ–ಅಂಶಗಳನ್ನು ನೀಡಲಾಗಿದೆ. ಥರ್ಸ್ಟನ್ ಸಹ 'ದಕ್ಷಿಣ ಭಾರತದ ಜಾತಿಗಳು ಮತ್ತು ಬುಡಕಟ್ಟುಗಳು' ಎಂಬ ತನ್ನ ದೀರ್ಘ ಲೇಖನದಲ್ಲಿ ದೇವದಾಸಿಯರ ಕುರಿತು ವಿವರಿಸಿರುವನು. ಬಸವಿಯರಾಗಲಿರುವ ಹುಡುಗಿಯರು ಅಥವಾ ಅವರ ತಾಯಂದಿರು ಯುರೋಪಿನ ನ್ಯಾಯಾಧೀಶರಿಗೆ ಅಥವಾ ಪೋಲಿಸ್ ಸೂಪರಿಂಟೆಂಡ್‌ರವರಿಗೆ ಮನವಿಗಳನ್ನು ನೀಡಿರುವ ನಮೂನೆಗಳ ಕುರಿತು ಥರ್ಸ್ಟನ್ ಅವರ ಕೃತಿಯಲ್ಲಿ ದಾಖಲಾಗಿದೆ.

"ಕ್ರಮವಾಗಿ ಹದಿನೈದು ಮತ್ತು ಹನ್ನೆರಡನೆಯ ವಯಸ್ಸಿನ ಇಬ್ಬರು ಹೆಣ್ಣು ಮಕ್ಕಳನ್ನು ನಾನು ಹೊಂದಿದ್ದೇನೆ. ನಮ್ಮ ಜಾತಿಯ ಪದ್ಧತಿಗನುಗುಣವಾಗಿ ಗುರುವಿನ ಆಜ್ಞೆಗನುಸಾರವಾಗಿ ದೇವಾಲಯದಲ್ಲಿ ನಡೆಯಲಿರುವ ಸಮಾರಂಭದಲ್ಲಿ ದೇವತೆಯ 'ತಾಳಿ'ಯನ್ನು ನನ್ನ ಎರಡೂ ಹೆಣ್ಣು ಮಕ್ಕಳಿಗೆ ಕಟ್ಟುವ ಅವಶ್ಯಕತೆಯಿದೆ. ಸಂಬಂಧಪಟ್ಟ ಅಧಿಕಾರಿಗಳು ಏನಾದರೂ ತಕರಾರು ಎತ್ತಬಹುದೆಂದು ಭಾವಿಸಿ, ನಾನು ಈ ಮನವಿಯನ್ನು ಸಲ್ಲಿಸುತ್ತಿದ್ದೇನೆ. ಆದುದರಿಂದ ನನ್ನ ಹೆಣ್ಣು ಮಕ್ಕಳಿಗೆ ತಾಳಿ

ಕಟ್ಟಲು ಅನುಮತಿ ನೀಡಬೇಕೆಂದು ಗೌರವಾನ್ವಿತ ನ್ಯಾಯಾಧೀಶರನ್ನು ನಾನು ಪ್ರಾರ್ಥಿಸಿಕೊಳ್ಳುತ್ತಿದ್ದೇನೆ"[೫೬] ವಸಾಹತು ಕಾಲದ ರಾಜ್ಯ ಪತ್ರಗಳಲ್ಲಿ ಮತ್ತು ಮನುಕುಲ ಸಂಬಂಧಶಾಸ್ತ್ರದ ಸೂಚನಾ ಪುಸ್ತಕಗಳಲ್ಲಿ ದೇವರುಗಳಿಗೆ ಹುಡುಗಿಯರನ್ನು ಅರ್ಪಿಸುವುದರ ಬಗ್ಗೆ ಕೆಲವು ಉಲ್ಲೇಖಗಳು ಸಿಗುತ್ತವೆ.

೧೯೧೦ರಲ್ಲಿ ಬೊಂಬಾಯಿಯ 'ಆಂಥ್ರೋ ಪೊಲಾಜಿಕಲ್ ಸರ್ವೆ ಆಫ್ ಇಂಡಿಯಾ',ದಲ್ಲಿ 'ಭಾರತ ಪರ್ಯಾಯ ದ್ವೀಪದ ಬಸವಿಯರು' ಎಂಬ ತಲೆಬರಹದ ಒಂದು ಪ್ರಬಂಧವನ್ನು ಬೆಳಗಾಂನ ಉಪಕಲೆಕ್ಟರ್ ಆಗಿದ್ದ ಆರ್.ಸಿ.ಅರ್ತಾಳ್ ಮಂಡಿಸಿದ್ದಾರೆ. ಅವರು ವೀರಶೈವ ಧರ್ಮ ಮತ್ತು ಬಾಲಕಿಯರನ್ನು ಅರ್ಪಿಸುವುದರ ಬಗ್ಗೆ ಹೀಗೆ ಹೇಳಿದ್ದಾರೆ. ಸಮಾರಂಭವು ಸ್ಥಾನೀಯ ಬದಲಾವಣೆಯನ್ನು ಹೊಂದಿರುತ್ತದೆ. ಹಳ್ಳಿಯ ಮಠದ ಮುಖ್ಯಸ್ಥನಾದ ಲಿಂಗಾಯಿತ ಜಂಗಮ ಅಥವಾ ಅಯ್ಯಪಟ್ಟದಪ್ಪನವರು ಅಥವಾ ಹಿರೇಮಠದ ಚರಮೂರ್ತಿಗಳು ಹುಡುಗಿಯ ಕತ್ತಿಗೆ ಅದೃಷ್ಟದ ತಾಯಿತವನ್ನು ಕಟ್ಟುತ್ತಾನೆ. ಸಾಮಾನ್ಯವಾಗಿ ಹಿರೇಮಠದಯ್ಯವರ ಕನ್ಯತ್ವದ ಸೆರೆ ಬಿಡಿಸುವ ಹಕ್ಕನ್ನು ಹೊಂದಿರುತ್ತಾನೆ ಎಂಬ ಅಭಿಪ್ರಾಯದೊಂದಿಗೆ ಈ ರೂಢಿಯನ್ನು ಆಚರಿಸಲಾಗುತ್ತದೆ. "ಲಿಂಗಾಯಿತೇತರ ಹೆಣ್ಣನ್ನು ಮುಟ್ಟಲು ಅವಕಾಶವಿಲ್ಲದಿರುವ ಜಂಗಮರು ಅಥವಾ ಲಿಂಗಾಯಿತ ಪೂಜಾರಿಗಳ ಕಾಮನೆಗಳನ್ನು ಪೂರೈಸುವ ದೃಷ್ಟಿಯಿಂದಲೇ ಬಸವಿ ಪದ್ಧತಿ ಪ್ರಮುಖವಾಗಿ ಹುಟ್ಟಿಕೊಂಡಿತು ಎಂದು ನನಗೆ ತೋರುತ್ತದೆ. ಆದುದರಿಂದ "ಭಕ್ತರ ಮನೆ ಊಟ, ಬಸವಿ ಮನೆ ನಿದ್ರೆ', ಎಂದರೆ ಭಕ್ತರ ಮನೆಯಲ್ಲಿ ಜಂಗಮ ಊಟ ಮಾಡುತ್ತಾನೆ, ರಾತ್ರಿಯ ಹೊತ್ತು ಬಸವಿಯ ಮನೆಯಲ್ಲಿ ಮಲಗುತ್ತಾನೆ ಎಂಬ ಗಾದೆ ಹುಟ್ಟಿಕೊಂಡಿದೆ"[೫೭] ಅವರು ಅದೇ ಜಿಲ್ಲೆಯಲ್ಲಿ ಉಪಕಲೆಕ್ಟರ್ ಆಗಿ ಸೇವೆ ಸಲ್ಲಿಸಿದವರು. ಈ ಪದ್ಧತಿಯ ಪ್ರಾದೇಶಿಕ ವ್ಯತ್ಯಾಸಕ್ಕೆ ಸಂಬಂಧಿಸಿದ ಹಾಗೆ ನೀಡುವ ವಿವರಗಳು ಸಾಕಷ್ಟು ಒಳನೋಟದಿಂದ ಕೂಡಿದೆ. "ಹಿರೇಮಠದ ಜಂಗಮರನ್ನು ಒಳಗೊಂಡು ಹಳ್ಳಿಯ ವೀರಶೈವ ಸಮುದಾಯದ ಮುಂದಾಳುಗಳು ಅವಳನ್ನು ಅರ್ಪಣೆ ಮಾಡುವ ಸಂದರ್ಭದಲ್ಲಿ ಅವಳಿಗೆ ಲೋಹದ ಅರ್ಧ ಚಂದ್ರಾಕೃತಿಯ ಒಂದು ಬಟ್ಟಲನ್ನು ನೀಡುವುದರ ಮೂಲಕ ಭೀಕ್ಷೆಗೆ ಹೋಗಲು ಅನುಮತಿ ನೀಡುತ್ತಾರೆ. ಸಾಂಗ್ಲಿ ರಾಜ್ಯದ ತೇರದಾಳ್–ಜಮಖಂಡಿ ರಸ್ತೆಯಲ್ಲಿರುವ ರಬಕವಿಯಲ್ಲಿ ತಾಮ್ರದ ಬಟ್ಟಲನ್ನು ವೀರಶೈವ ಬಸವಿಗೆ ನೀಡಿದ್ದನ್ನು ನಾನು ನೋಡಿದ್ದೇನೆ. ಆ ಸ್ಥಳದ ಪಟ್ಟದಪ್ಪನವರಿಂದ ಆ ಬಸವಿಗೆ ಇದನ್ನು ನೀಡಲಾಯಿತು ಎಂದು ಅದರ ಮೇಲೆ ಅಕ್ಷರಗಳಿವೆ"[೫೮] ಎಂದು ತನ್ನ ವಾದಗಳಿಗೆ ಪುರಾವೆಗಳನ್ನು ನೀಡುತ್ತಾನೆ. ಈ ಹಿಂದೆ ಪ್ರಬಲವಾದ ಜಾತಿಯವರು ಮತ್ತು ಪುರೋಹಿತರು ಈ ಪದ್ಧತಿಯನ್ನು ಹುಟ್ಟುಹಾಕುತ್ತಿದ್ದರು ಎಂದು ಇದರಿಂದ ಸ್ಪಷ್ಟವಾಗುತ್ತದೆ. ಬಲಾಢ್ಯ ಸಮುದಾಯಗಳು ಬಲವಿಲ್ಲದ ಸಮುದಾಯಗಳಿಗೆ ಇಲ್ಲದ ತತ್ವ ಆದರ್ಶಗಳನ್ನು ಭೋದಿಸಿ ಅವರನ್ನು ವ್ಯವಸ್ಥಿತವಾಗಿ ವಂಚಿಸಿರುವುದನ್ನು ಇದರಿಂದ ಗುರುತಿಸಬಹುದಾಗಿದೆ. ವೇಶ್ಯೆಯರ ಕುರಿತಂತೆ ಕೇವಲ ಶಿಷ್ಟ ಸಾಹಿತ್ಯದಷ್ಟೇ ದೇಶೀಯವಾದ ಜನಪದ ಸಾಹಿತ್ಯವು ಸಹಾ ಅನೇಕ

ಮಹತ್ವದ ಆಕರಗಳನ್ನು ಒದಗಿಸುತ್ತದೆ. ಈ ಕುರಿತಂತೆ ಅನೇಕ ಜನಪದ ಕಥೆ, ಲಾವಣಿಗಳು, ಗೀತೆಗಳು ಲಭ್ಯವಿದ್ದು, ಅವು ಈ ಪದ್ಧತಿಯ ಸ್ವರೂಪವನ್ನು ಅನಾವರಣಗೊಳಿಸುತ್ತವೆ.

### ೨.೬ ಶಾಸನಗಳಲ್ಲಿ ವೇಶ್ಯೆಯರ ಉಲ್ಲೇಖ

ಭಾರತದ ವಿವಿಧೆಡೆ ಜೀವಿಸಿದ್ದ ಮಹಿಳಾ ವೇಶ್ಯೆಯರ ಕುರಿತು ವಿವಿಧ ಆಕರಗಳು ವಿವರಿಸುತ್ತವೆ. ಅದರಲ್ಲಿ ಶಾಸನ ಆಕರಗಳು ಕೂಡ ಒಂದು. ಇದನ್ನು ಆಧಾರವಾಗಿಟ್ಟುಕೊಂಡ ವಿದ್ವಾಂಸರು ಈ ಪದ್ಧತಿ ಬಹು ಪ್ರಾಚೀನ ಕಾಲದಿಂದಲೂ ಆಸ್ತಿತ್ವದಲ್ಲಿತ್ತು ಎಂಬುದನ್ನು ಬಹುತೇಕ ಖಚಿತಪಡಿಸಿದ್ದಾರೆ. ಕರ್ನಾಟಕದ ಅನೇಕ ಶಾಸನಗಳು ಇತರೆ ವಿವರಗಳನ್ನು ದಾಖಲಿಸಿರುವಂತೆ ವೇಶ್ಯೆಯರ ಕುರಿತಂತೆಯೂ ಉಲ್ಲೇಖಿಸಿದ ಉದಾಹರಣೆಗಳಿವೆ. ಬಹತೇಕ ಶಾಸನಗಳು ವೇಶ್ಯೆಯರನ್ನು 'ಸೂಳೆ' ನೃತ್ಯಗಾರತಿ, ಪಾತರದವರೆಂದೂ ಇಲ್ಲವೆ ದೇವದಾಸಿಯರೆಂದು ಉಲ್ಲೇಖಿಸಿವೆ.

"೮ನೇ ಶತಮಾನದ ಪಟ್ಟದಕಲ್ಲು ಶಾಸನೋಕ್ತ ಲೋಕಮಹಾದೇವಿ ನಿರ್ಮಿಸಿದ ಲೋಕೇಶ್ವರ ದೇಗುಲದ ಗೋಯಿನ್ದ ಪೊಡ್ಡಿ ಬಾದಿ(ಲಿ) ಪೊಡ್ಡಿಯರೇ ಕರ್ನಾಟಕದ ಪ್ರಥಮ ದೇವಾಲಯದ ಸೂಳೆಯರು. ಅಂದಿನಿಂದ ವಿಜಾಪುರ ಜಿಲ್ಲೆಯ ಪಟ್ಟದಕಲ್ಲು, ನಾಗಮಂಗಲ ತಾಲೂಕಿನ ಮಂಣೆ, ಹೊನ್ನಾಳಿ ತಾಲೂಕಿನ ನ್ಯಾಮತಿ, ರೋಣ ತಾಲೂಕಿನ ಸೂಡಿ, ಗದಗ ತಾಲೂಕಿನ ಲಕ್ಕುಂಡಿ, ಹರಪನಹಳ್ಳಿ ತಾಲೂಕಿನ ಬಾಗಳಿ, ಹಿರೇಮಂಗಳಗೇರಿ, ಹಡಗಲಿ ತಾಲೂಕಿನ ಮೋರಿಂಗೆರೆ, ಹೂವಿನಹಡಗಲಿ, ಹಳಗೊಂಡಿ, ಮುದ್ದೇಬಿಹಾಳ ತಾಲೂಕಿನ ನಾಲತವಾಡ, ಹುನಗುಂದ ತಾಲೂಕಿನ ಅರಸಿಬೀದಿ, ನಂದವಡಗಿ, ರಾಣೇಬೆನ್ನೂರು ತಾಲೂಕಿನ ಹೊಳೆ ಅನವೇರಿ, ಹೂಲಿಹಳ್ಳಿ, ಮುಂಡರಗಿ ತಾಲೂಕಿನ ಕೊರಲಹಳ್ಳಿ, ಶಿಗ್ಗಾಂವ ತಾಲೂಕಿನ ಬಂಕಾಪುರ, ದಾವಣಗೆರೆ ತಾಲೂಕಿನ ಬೇತೂರು, ಹರಿಹರ ತಾಲೂಕಿನ ವಾಸನ, ಹರಿಹರ, ಬಳ್ಳಾರಿ ತಾಲೂಕಿನ ಸಿರಿವಾಳ, ಸಿರುಗುಪ್ಪ ತಾಲೂಕಿನ ಕುರುಗೋಡು, ಹಡಗಲಿ ತಾಲೂಕಿನ ಹೀರೆಹಡಗಲಿ, ಕುರುವತ್ತಿ, ಮಾಗಳ, ಕೊಪ್ಪಳ ತಾಲೂಕಿನ ಕುಕನೂರು, ಕೌರೂರು, ಯಲಬುರ್ಗಾ ತಾಲೂಕಿನ ಇಟಗಿ, ಹಿರೇಕೆರೂರು ತಾಲೂಕಿನ ಕಾಗಿನೆಲೆ, ಸಿಂದಗಿ ತಾಲೂಕಿನ ದೇವರನಾವದಿಗಿ, ಶಿಕಾರಿಪುರ ತಾಲೂಕಿನ ಬಳ್ಳಿಗಾವೆ, ಬೇಲೂರು ತಾಲೂಕಿನ ಹಳೇಬೀಡು, ಬೆಂಗಳೂರು ತಾಲೂಕಿನ ಮಾಗಡಿ, ಸಾವನದುರ್ಗ, ಕುಣಿಗಲ್ ತಾಲೂಕಿನ ಉತ್ತರಿದುರ್ಗ, ಹುಲಿಯೂರು ದುರ್ಗ, ಚನ್ನರಾಯಪಟ್ಟಣ ತಾಲೂಕಿನ ಕೆಂಬಾಳು, ಮಂಡ್ಯ ತಾಲೂಕಿನ ಬಸರಾಳು, ಗುಬ್ಬಿ ತಾಲೂಕಿನ ಸಂಪಿಗೆ, ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ, ಕುಂದಾಪುರ ತಾಲೂಕಿನ ಕೋಟೇಶ್ವರ ಈ ಮುಂತಾದ ಗ್ರಾಮಗಳಲ್ಲಿ ದೊರೆತ ಶಾಸನಗಳು ಮತ್ತು ಇನ್ನೂ ಅನೇಕ ಸ್ಥಳಗಳಲ್ಲಿ ದೊರೆತ ಶಾಸನಗಳು ಅಲ್ಲಿನ ದೇವಾಲಯಗಳಲ್ಲಿ ಸೂಳೆಯರಿದ್ದ ಸಂಗತಿಯನ್ನು ಉಲ್ಲೇಖಿಸಿವೆ"[೫೯]

ಮಹಾಕೂಟದ ಮಹಾಕೂಟೇಶ್ವರ ದೇವಾಲಯವನ್ನು ಸೂಳೆಯೋರ್ವಳು ಕಟ್ಟಿಸಿದ ಕಾರಣಕ್ಕಾಗಿಯೇ ಆ ದೇವಾಲಯಕ್ಕೆ ಲಂಜಕೇಶ್ವರ (ಮಹಾಕೂಟೇಶ್ವರ) ಎನ್ನುವ ಹೆಸರು ಬಂದಿತೆಂಬ ಪ್ರತೀತಿ ಅಲ್ಲಿಯ ಸ್ಥಳೀಯರಲ್ಲಿದೆ. ಇದೇ ದೇವಾಲಯಕ್ಕೆ ಕ್ರಮೇಣ ಮೂಲತಃ ವೇಶ್ಯೆಯಾಗಿದ್ದ ಮತ್ತು ವಿನಯಾದಿತ್ಯನ

ಪ್ರಾಣವಲ್ಲಭೆಯಾಗಿದ್ದ 'ವಿನಾಪೋಟಿ' ಹಿರಣ್ಯಗರ್ಭದಾನ ಮಾಡಿ ಪೀಠಕ್ಕೆ ತಾಮ್ರದ ಹೊದಿಕೆ ಹಾಕಿಸಿ, ದೇವರಿಗೆ ಬೆಳ್ಳಿಕೊಡೆ ಮತ್ತು ಭೂದಾನ ಮಾಡಿದ ಸಂಗತಿಯನ್ನು ಅಲ್ಲಿನ ಶಾಸನ ಉಲ್ಲೇಖಿಸಿದೆ".[೬೦] "ಕರ್ನಾಟಕದಲ್ಲೇ ಮೊದಲ ಬಾರಿಗೆ ವೇಶ್ಯೆಯೊರ್ವಳು ದಾನ ನೀಡಿದ ಅತ್ಯಂತ ಪ್ರಾಚೀನ ಶಾಸನವು ಇಂದಿನ ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲಿನಲ್ಲಿ ದೊರೆತಿದೆ. ತಮಿಳು ಭಾಷೆಯಲ್ಲಿರುವ ಈ ಶಾಸನ ಕ್ರಿ.ಶ.೭೭೮–೭೭೯ರ ಕಾಲಕ್ಕೆ ಸೇರಿದ್ದು, ಅದು ಅಲ್ಲಿನ ವಿರೂಪಾಕ್ಷ ದೇವಾಲಯಕ್ಕೆ 'ಒಂದು ಕುದುರೆ ರಥ ಮತ್ತು ಒಂದು ಆನೆಯ ರಥವನ್ನು' ಅಲ್ಲಿದ್ದ 'ದೇಗುಲದ ಸೂಳೆ'ಯೊರ್ವಳು ದಾನ ನೀಡಿದ ಪ್ರಥಮ ಸಂಗತಿಯನ್ನು ದಾಖಲಿಸಿದೆ. ಇದರ ಕಾಲ ಕ್ರಿ.ಶ.೭೩೩ ಎನ್ನುವ ಮತ್ತೊಂದು ಅಭಿಪ್ರಾಯವಿದೆ"[೬೧] ಆಲನಹಳ್ಳಿಯಲ್ಲಿ ದೊರೆತ ಕ್ರಿ.ಶ.೧೧೧೩ನೆಯ ಇಸವಿಯ ಶಾಸನದಲ್ಲಿ 'ದೇವದಾಸಿ' ಎನ್ನುವ ಪದದ ಪ್ರಥಮ ಪ್ರಯೋಗವಿದೆ(ಎಪಿಗ್ರಾಫಿಯ ಕರ್ನಾಟಕ, ಸಂಖ್ಯೆ೯೭). ಕರ್ನಾಟಕದಲ್ಲಿ ಕ್ರಿ.ಶ. ೯ನೇ ಶತಮಾನದ ನಂತರ ದೊರೆಯುವ ಶಾಸನಗಳು ವೇಶ್ಯೆಯರ ಕುರಿತಂತೆ ಹೆಚ್ಚು ಮಾಹಿತಿಗಳನ್ನು ನಮಗೆ ಒದಗಿಸಿವೆ. ಅವುಗಳಲ್ಲಿ ಕ್ರಿ.ಶ.೯೭೫ರ ಶಾಸನವೊಂದರಲ್ಲಿ ಐವರು ಸೂಳೆಯರಿಗೆ ದಾನ ನೀಡಲ್ಪಟ್ಟ ವಿವರ ಮಾತ್ರವಿದ್ದು, ಅವರ ಹೆಸರುಗಳನ್ನು ಶಾಸನವು ಪ್ರಸ್ತಾಪಿಸುವುದಿಲ್ಲ.[೬೨] "ಗೊಂಕ' ಎಂಬ ಒಬ್ಬ ರಾಜ ತನ್ನ ಸಾಮ್ರಾಜ್ಯದ ದೇವಾಲಯದ ಒಬ್ಬ ವೇಶ್ಯೆಯನ್ನು ಮದುವೆಯಾದ್ದುದರ ಬಗ್ಗೆ ಕ್ರಿ.ಶ.ಒಂಭತ್ತನೆಯ ಶತಮಾನದ ಒಂದು ಶಾಸನದಲ್ಲಿ ಉಲ್ಲೇಖವಿದೆ".[೬೩] ಚಿತ್ರದುರ್ಗದ ಮಳಲಕೆರೆಯ ಒಂದು ಶಿಲಾಶಾಸನವು ಸೂಳೆಯರ ದಾನದ ಬಗೆಗಿನ ಪ್ರಕರಣವನ್ನು ದಾಖಲಿಸಿದೆ. ಅದರಲ್ಲಿ "ಹಿರಿಯ ಸಚಿವ ಮಣ್ಣಿ ಮತ್ತು ಅನೇಕ ಕರ್ಣಮ್‌ಗಳು ಮಣಳಕೆರೆ ಅಗ್ರಹಾರಕ್ಕೆ ಬಂದು, ಅಲ್ಲಿನ ಮೂಲಸ್ಥಾನ ದೇವಾಲಯಕ್ಕೆ ಅನೇಕ ವಸ್ತುಗಳ ಜೊತೆ ನಾಲ್ಕು ಸೂಳೆಯರನ್ನೂ ದಾನ ನೀಡಿದರು ಎನ್ನುವ ಮಹತ್ವದ ವಿವರವಿದೆ".[೬೪] ಶಿವಮೊಗ್ಗ ಜಿಲ್ಲೆಯ ಗೊಗ್ಗದ ಕ್ರಿ.ಶ.೧೦೭೧ರ ಶಾಸನವು ದೇವಾಲಯಕ್ಕೆ ಒಬ್ಬ ಕನ್ಯೆಯನ್ನು ದಾನವಾಗಿ ಅರ್ಪಿಸಿದ್ದನ್ನು ದಾಖಲಿಸಿದೆ. "ದೇವದಾಸಿ ವ್ಯವಸ್ಥೆಯು ಹಿಂದೂ ದೇವಾಲಯಗಳಿಗಷ್ಟೇ ಮೂಲಭೂತವಾಗಿ ಸೀಮಿತವಾಗಿದ್ದರೂ, ತನ್ನ ಜನಪ್ರಿಯತೆಯಿಂದಾಗಿ ಅದು ಜೈನ ಧರ್ಮದೊಳಕ್ಕೆ ಇಡಿಯಾಗಿ ಪ್ರವೇಶಿಸಿತು".[೬೫] ಎಂದು ಡಾ.ಚಿದಾನಂದಮೂರ್ತಿಯವರು ತಿಳಿಸುತ್ತಾರೆ. ಅಲ್ಲದೇ ಇತರೆ ಸೇವಕರಿಗೆ ನೀಡಿದ ಹಾಗೆಯೇ ದೇವಾಲಯದ ಐದು ಜನ ನರ್ತಕಿಯರಿಗೆ ಜಮೀನನ್ನು ಕೊಡುಗೆಯಾಗಿ ನೀಡಲಾಯಿತು ಎಂದು ಹೆಬ್ಬಾಳದ ಶಾಸನವು ಉಲ್ಲೇಖಿಸುತ್ತದೆ." (ಎ.ಕೆ.ಸಂ.೫೦, ಕ್ರಿ.ಶ.೯೭೫). ಪುಲಿಗೆರೆಯ ಸೋಮೇಶ್ವರ ದೇವಾಲಯದೊಂದಿಗೆ ಸಂಬಂಧವಿದ್ದ (ಪುಲಿಗೆರೆ, ಹಿಂದಿನ ಧಾರವಾಡ ಜಿಲ್ಲೆಯ ಇಂದಿನ ಗದಗ ಜಿಲ್ಲೆಯ ಲಕ್ಷ್ಮೇಶ್ವರ). "ಈ ಸೂಳೆಗೇರಿಯೊಂದರಲ್ಲಿ ತಾನು ಕಟ್ಟಿಸಿದ ನರ್ತಕಿಯರ ವಾಸದ ಮನೆಗಳ (ಸೂಳೆಗೇರಿ) ಉಸ್ತುವಾರಿ ನೋಡಿಕೊಳ್ಳಲು ಆರನೆಯ ವಿಕ್ರಮಾದಿತ್ಯನ ದಂಡಾಧಿಕಾರಿ ಅನಂತ್ರಾಮಯ್ಯ ಕೊಡುಗೆ ನೀಡಿದನು ಎಂದು ಮತ್ತೊಂದು ಶಾಸನವು ತಿಳಿಸುತ್ತದೆ." (ಎ.ಕೆ.ಪು:೮೭: ಕ್ರಿ.ಶ.೧೦೫೦) ನೃತ್ಯ ಮಾಡುವ ಹುಡುಗಿಯರ ಜೀವನಾಧಾರಕ್ಕೆಂದು ಜೈನ ಬಸ್ತಿಗೆ ಒಂದು ಹಳ್ಳಿಯನ್ನು ಕೊಡುಗೆಯಾಗಿ ನೀಡಲಾಯಿತೆಂದು ಬೆಂಗಳೂರು ಜಿಲ್ಲೆಯ ಮಣ್ಣೆ ತಾಮ್ರ

ಶಾಸನವು ದಾಖಲಿಸುತ್ತದೆ."ಕ್ರಿ.ಶ. ೧೦೪೪ರ ನಂದವಾಡಗಿ ಶಾಸನದಲ್ಲಿ ರಂಗಭೋಗಕ್ಕೆ ದಾನ ನೀಡುವುದರ ಜೊತೆಗೆ ಇಬ್ಬರು ಪಾತರದವರಿಗೆ ೪೮ ಮತ್ತರು ಭೂದಾನ ಮಾಡಿದ ಮಾಹಿತಿ ಮಾತ್ರ ಇದ್ದು, ಅವರ ಹೆಸರುಗಳು ಇಲ್ಲಿ ಉಲ್ಲೇಖಿತವಾಗಿಲ್ಲ. ಆದರೂ ಸಹಾ ಅಲ್ಲಿ ಪಾತರದವರಿದ್ದರೆಂಬುಂದನ್ನು ಈ ಶಾಸನದಿಂದ ಅರಿಯಬಹುದಾಗಿದೆ".[೬೬] "ನಾಡಗಾವುಂಡ ಸಿನ್ದಗೆಯ ಮೂಲಸ್ಥಾನ ದೇವರ ಪಾತ್ರ ಪಾವುಳಕ್ಕೆ ಊರಲ್ಲೊಂದು ಗದ್ಯಾಣ ನೀಡಿದ ಸಂಗತಿಯನ್ನು ಬಿಜಾಪುರದ ೩೭ನೇ ಶಾಸನವು ಉಲ್ಲೇಖಿಸುತ್ತದೆ".[೬೭] ಕಾಗಿನೆಲೆ ಶಾಸನದಲ್ಲಿಯೂ ಕೇವಲ ಪಾತ್ರ, ಪರೆಕಾರ ವರ್ಗದವರಿಗೆ ದಾನ ಬಿಟ್ಟ ಉಲ್ಲೇಖ ಮಾತ್ರವಿದ್ದೂ ಅವರ ಹೆಸರುಗಳು ಇಲ್ಲಿ ಪ್ರತ್ಯೇಕವಾಗಿ ದಾಖಲಿಸಲ್ಪಟ್ಟಿಲ್ಲ (SII.XVIII.53). "ಜಗದೇಕಮಲ್ಲನ ಆಳ್ವಿಕೆ ಕಾಲದಲ್ಲಿ ಪಾತ್ರಕ್ಕೆ ದಾನ ನೀಡಿದ ವಿವರವನ್ನು ಕ್ರಿ.ಶ. ೧೦೧೮ರ ಬಾಗಳಿ ಶಾಸನದಲ್ಲಿದೆ".[೬೮] ಅದೇ ರೀತಿ ಪಾತರದವರಿಗೆ ವರುಷಕ್ಕೆ ಇಂತಿಷ್ಟು ಎಂದು ಹಣವನ್ನು ನಿಗದಿ ಮಾಡಿ ನೇಮಕ ಮಾಡುತ್ತಿದ್ದರೆಂದು ಕ್ರಿ.ಶ. ೧೩೭೨ರ ಗುಂಡ್ಲುಪೇಟೆ ಶಾಸನದಲ್ಲಿ ವಿವರವಿದೆ. ಅದರಲ್ಲಿ 'ರಾಮನಾಥ ದೇವರ ಪಾತ್ರ ಭೋಗಕ್ಕೆ ವರುಷಕ್ಕೆ ಮೂವತ್ತಕ್ಕೆ ಮಾಡಿದ ನಿರ್ಣಯ' ಎಂದಿದೆ (E.C. III, ಗುಂಡ್ಲುಪೇಟೆ, ೧೨). "ನಲವತ್ತೆಂಟು ಮನ್ನೆಯರು ಸಭೆ ಸೇರಿ ಶ್ರೀಗವರೇಶ್ವರ ದೇವರ ರಂಗಭೋಗಕ್ಕೆ, ಪಾತ್ರದವರಿಗೆ ದಾನ ನೀಡಬೇಕೆಂದು ತೀರ್ಮಾನಿಸಿ ದಾನ ನೀಡಿದ ಸಂಗತಿಯನ್ನು ಕ್ರಿ.ಶ. ೧೨ನೇ ಶತಮಾನದ ಪುರ ಶಾಸನ ಹೇಳುತ್ತದೆ"[೬೯] ಅಲ್ಲದೇ ಸೋಮಾಪುರದ ಶಾಸನದಲ್ಲಿ ಮಲ್ಲಿಕಾರ್ಜುನ ದೇವರ ಪಾತರದವರಿಗೆ ದತ್ತಿ ಬಿಟ್ಟ ವಿಷಯ(E.C.XII, ಕೊಪ್ಪ ೯). ಹಾಗೂ ಬೇಲೂರು ಶಾಸನದಲ್ಲಿ ಶ್ರೀ ಚೆನ್ನಕೇಶವ ಮತ್ತು ಶ್ರೀ ಲಕ್ಷ್ಮಿ ನಾರಾಯಣ ದೇವರ ಪಾತರದವರಿಗೆ ದಾನ ನೀಡಿದ ವಿವರವನ್ನು ದಾಖಲಿಸಿದೆ(E.C.IX.ಬೇಲೂರು.೧೬). ಬಾಗಳಿ ಶಾಸನದಲ್ಲಿ "ಪನ್ನೀರ್ವಸೂಳೆಯರಿಗೆ, ಸೂಳೆವಾಳಂಗೆ ವಂಚಿಗಂಗಂ ಫರೆಕಾಳರ್ಗ್ಗಂ; ಪಾತ್ರಕ್ಕಂ' ಎಂದು ಪಾತ್ರದವರಿಗೆ, ಸೂಳೆಯರಿಗೆ ಪ್ರತ್ಯೇಕ ದಾನ ನೀಡಲಾಗಿದೆ"[೭೦] "ನಂದವಾಡಗಿ ಶಾಸನ ಪಾತರದವರಿಗೆ ೪೮ ಮತ್ತರು, (ರಂಗ)ಭೋಗದ ಸೂಳೆ ನಾಲ್ವರಿಗೆ ೭೬ ಮತ್ತರು ಭೂದಾನ ಮಾಡಿದ ವಿವರವಿದೆ"[೭೧]. ನಲವತ್ತೆಂಟು ಮತ್ತರು ಭೂಮಿಯನ್ನು ಪಡೆದ ಪಾತರದವರ ಸಂಖ್ಯೆ ಉಲ್ಲೇಖವಿಲ್ಲ. ಹಿರೇಹಡಗಲಿಯ ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನವು "ಪಜೆಕಾಜಿರ್ಗ್ಗಂ, ಪಾತ್ರಕ್ಕಂ, ಪಾಡುವರ್ಗ್ಗ(ಂ) ಕ್ಕೆ" ದಾನ ನೀಡಲಾಗಿದೆ. ಅದೇ ರೀತಿ ಹೊಳಗುಂದಿ ಬಲ್ಲೇಶ್ವರ ದೇವಾಲಯದಲ್ಲಿರುವ ಶಾಸನವು ಅಲ್ಲಿದ್ದ ೧೨ಜನ ಪರಿಕಾರರಿಗೆ ಮತ್ತು ೧೨ ಜನ ಪಾತ್ರದವರಿಗೆ ೧೩ಮತ್ತರು ಭೂಮಿಯನ್ನು ಮತ್ತು ಅಲ್ಲಿದ್ದ ಸೂಳೆಯವಳಂಗೆ(ಸೂಳೆಯರ ಮೇಲ್ವಿಚಾರಕನಿಗೆ) ೧೬ ಮತ್ತರು ಭೂಮಿ ದಾನ ಮಾಡಲಾದ ವಿವರವಿದೆ. ಈ ಅಂಶಗಳು ಇಲ್ಲಿದ್ದ ವೇಶ್ಯೆಯರನ್ನು ಪರೋಕ್ಷವಾಗಿ ವಿವರಿಸುತ್ತದೆ. "ಕಳ್ಳಿಹಾಳ ಶಾಸನವು ಬನವಾಸಿ ೧೨೦೦೦ ಆಳುತ್ತಿದ್ದ ಕುಂದರಾಜನ ಪತ್ನಿ ಜೋಗಬ್ಬೆ ಸಹದೇವೇಶ್ವರ ದೇವರಿಗೆ ಗದ್ದೆ ತೋಟ ಬಿಡುತ್ತಾಳೆ. ಅದೇ ಶಾಸನದಲ್ಲಿ ಸಹದೇವಯ್ಯನು ದೇವಸ್ಥಾನಕ್ಕೆ ನಾಲ್ಕು ಜನ ಸೂಳೆಯರನ್ನು ಬಿಟ್ಟು ಅವರಿಗೆ ದತ್ತಿ ಕೊಟ್ಟು 'ಅವರಿಗೆ ಎಲ್ಲಿಗೂ ಪೋಗಲಾಗದು' ಎಂದು ಕರಾರು ಹಾಕಿದ್ದಾನೆ. ಅಂದು ಕೊಟ್ಟ

ದಾನಕ್ಕೆ ಅವರು ಕಡ್ಡಾಯವಾಗಿ ಸೇವೆ ಸಲ್ಲಿಸಬೇಕಿತ್ತು. ಹಾಗಾದರೆ ಈ ವೃತ್ತಿ ವಿರೋಧಿಸುವ ಧ್ವನಿ ಆ ಕಾಲಕ್ಕಿತ್ತೆನ್ನಬಹುದು. ಆದರೆ ಬಲಿಷ್ಠ ಶಕ್ತಿಗಳ ಕಪಿ ಮುಷ್ಠಿಯಲ್ಲಿ ತನ್ನ ಬಲವನ್ನು ಕಳೆದುಕೊಂಡಿತು. ನಂದವಾಡಗಿ ಶಾಸನದಲ್ಲಿ ಪಾತರದವರಿಗೆ ಮತ್ತರು ಭೂಮಿ ನೀಡಿದ ವಿವರಗಳಿವೆ. (ಕ.ವಿ.ಶಾ. ಸಂಪುಟ–೯, ಹುನುಗುಂದ, ೧೨೨). ಮಲ್ಲಟ ಶಾಸನದಲ್ಲಿ ಪಾತ್ರ ಪಾವುಳಕ್ಕೆ ನೀಡಿದ ಭೂದಾನ (ಕ.ವಿ.ಶಾ. ಸಂಪುಟ–೭, ಮಾನ್ವಿ, ೧೦೨). ೧೧ನೇ ಶತಮಾನದಲ್ಲಿ ನೃತ್ಯ, ಗೀತೆ, ವಾದ್ಯಕ್ಕೆ ಕೆಲವು ಮತ್ತರು ಕರಿಯ ನೆಲ ಬಿಡಲಾಗಿದೆ.(ಕ.ವಿ.ಶಾ. ಸಂಪುಟ–೭ ಮಾನ್ವಿ, ೮೮) ರಂಗಭೋಗಕ್ಕೆ ಸಂಬಂದಿಸಿದ ಪಾತರದವರು, ವಿವಿಧ ವಾದ್ಯಗಾರರು ಜಮೀನುಳ್ಳ ಭೂಮಾಲೀಕರಲ್ಲ. ದೊರೆತ ಶಾಸನಗಳಲ್ಲಿ ಕೆಲವನ್ನು ಹೊರತುಪಡಿಸಿ ಉಳಿದೆಲ್ಲವೂ ಪಾತ್ರ ಮತ್ತು ವೇಶ್ಯೆಯರಿಗೆ ಪ್ರತ್ಯೇಕ ದಾನಗಳನ್ನು ನೀಡಿರುವುದನ್ನೇ ದಾಖಲಿಸಿವೆ. ಪಾತರದವರು ವೇಶ್ಯೆಯರಿಗಿಂತ ಪ್ರತ್ಯೇಕವಾಗಿ ಗುರುತಿಸಲ್ಪಟ್ಟವರು. ಕ್ರಿ.ಶ. ೯೭೫ರ ಹೆಬ್ಬಾಳು ಶಾಸನದಲ್ಲಿ ಐವರು ಸೂಳೆಯರೊಂದಿಗೆ ಒಬ್ಬ ಪಾತರದವಳಿಗೆ ಬಿಟ್ಟ ದಾನ ಸೂಳೆಯರಿಂದ ಪಾತರದವರನ್ನು ಪ್ರತ್ಯೇಕಿಸಿ ತೋರಿಸುತ್ತದೆ.(EI. IV, p ೫೦). ಸೂಳೆಯರಿಗಿಂತ ಪಾತರದವರ ಸಂಖ್ಯೆ ಕಡಿಮೆ ಇತ್ತು. ಕಂಬದ ಸೂಳೆಯರು, ಚಾಮರದ ಸೂಳೆಯರು, ಪಾತ್ರದ ಸೂಳೆಯರು, ಬಸರಾಳು ಶಾಸನದಲ್ಲಿ ದೇವರಾರತಿಯ ಸೂಳೆಯರಿಗೆ ಮ ೩ ಎಂದಿದೆ. ಅದೇ ಶಾಸನದಲ್ಲಿ ಮುಂದಿನ ಸಾಲಿನಲ್ಲಿ 'ದೇವರ ಭೋಗದ ನಾಗಾವಾಸದ ಜೀವಿತ ಮ ೩೦' ಎಂದಿದೆ(E.C. VII, ಮಂಡ್ಯ ೩೦). ನಂದವಾಡಗಿ ಶಾಸನದಲ್ಲಿ ರಂಗಭೋಗದ ಸೂಳೆ ನಾಲ್ವರ್, (ಕ.ವಿ.ಶಾ. ಸಂಪುಟ–೯, ಹುನುಗುಂದ ೧೨೨). ಭೋಗದ ಸೂಳೆಯರ್(SII. XX, ೩೫) ಎನ್ನುವ ಸೂಳೆಯರನ್ನು ಹೆಸರಿಸಿದೆ. ಪಾತರದವರು ಕೇವಲ ನೃತ್ಯವಲ್ಲದೆ, 'ಗೀತ, ವಾದ್ಯ, ರಾಗವಾಗಿ ಪದ್ಯಗಳನ್ನು ಓದುವುದು(ಹಾಡುವುದು), ಕುಣಿಯುವುದು, ಅಭಿನಯಿಸುವುದು..... 'ಮುಂತಾದ ವಿದ್ಯೆಗಳನ್ನು ಕಲಿಯಬೇಕಿತ್ತು(ಶ್ರೀ ಕೂಡಲೀ ಶೃಂಗೇರಿ ಜಗದ್ಗುರು, ಶ್ರೀ ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ಕೌಟಲೀಯ ಅರ್ಥಶಾಸ್ತ್ರ, ಪುಟ ೧೯೭). ಕ್ರಿ.ಶ. ೮ನೇ ಶತಮಾನದ ಮಾವಳಿ ಶಾಸನದಲ್ಲಿ ಎರೆಯಮ್ಮರಸ ಬನವಾಸಿಯನ್ನು ಆಳ್ವಿಕೆ ಮಾಡುತ್ತಿದ್ದಾಗ ರಾಜಪುಲಿ ಕುಲಮುದ್ಧನು ಗೋ ಸಹಸ್ರ ದಾನದ ಬದಲಿಗೆ ಒಂದು ಕನ್ಯಾದಾನವನ್ನು ಮಾಡಿ ಗೋಸಾಸದ ಕಲ್ಲನ್ನು ನಿಲ್ಲಿಸಿದ ವಿವರವಿದೆ(E.C. VIII (ರೈ), ಸೊರಬ ೯). ದೇವಾಲಯಕ್ಕೆ ಸಹಸ್ರ ಗೋವುಗಳನ್ನು ದಾನ ಕೊಡುವುದರ ಬದಲಿಗೆ ಒಂದು ಕನ್ಯಾದಾನ ಮಾಡಿದ ಕುರಿತು ಮಾಹಿತಿ ಇದೆ. ಅಂದರೆ ಸಹಸ್ರ ಗೋವುಗಳಿಗೆ ಒಂದು ಕನ್ಯೆಗೆ ಸಮ ಎಂದು ಅಂದು ಭಾವಿಸಲಾಗಿತ್ತು. ಕೃಷಿ ಸಂಬಂಧಿ ಶಾಸನ ಕೇರಳದ ಕಾಸರಗೋಡಿನ ತಳಂಗೆರೆಯಲ್ಲಿ ದೊರೆತಿದ್ದು, ಇದು ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಿದ ಜಯಸಿಂಹನ ಅಧಿಕಾರಾವಧಿಯನ್ನು ಉಲ್ಲೇಖಿಸುತ್ತದೆ. "ಜಯಸಿಂಹನು ಮೋಚಬ್ಬರಸಿಗೆ ಕನ್ಯಾದಾನ ಮಾಡುವಂತೆ ಕೇಳಿಕೊಂಡಾಗ ಮೋಚಬ್ಬರಸಿ ಸಂತೋಷದಿಂದ ಜಯಸಿಂಹನಿಗೆ ಸಮನಾರೂ ಇಲ್ಲವೆಂದು ಕನ್ಯಾದಾನವನ್ನು ಕೊಡಲೊಪ್ಪಿ ಜೊತೆಗೆ ಊರ ಕಡೆಯ ತರೆಯ ತಡಿಯ ಮೇಲಿರುವ ಒಣ ಭೂಮಿಯನ್ನು ತನ್ನ ಧನದಿಂದಲೇ ಕಲ್ಲು ಕಾಡು ಬೆಟ್ಟಗಳಿಂದ ಕೂಡಿದ ಒಣಭೂಮಿಯನ್ನು ಸಮತಲ ಮಾಡಿಸಿ ಕೆರೆಯನ್ನು

ಕಟ್ಟಿಸಿ, ಅಲ್ಲಿ ಉದ್ಯಾನವನ ನಿರ್ಮಿಸಿ, ಅದನ್ನು ಒಂದು ಸುಕ್ಷೇತ್ರವನ್ನಾಗಿ ಮಾಡಿಸಿ ಜಯಸಿಂಹನಿಗೆ ವರದಕ್ಷಿಣೆಯ ರೂಪದಲ್ಲಿ ಎಲ್ಲವನ್ನೂ ಕೊಡುತ್ತಾಳೆ"೮ ಅದೇ ಶಾಸನದಲ್ಲಿ ಕೊನೆಗೆ ಜೋಗವ್ವೆ ಎಂಬಾಕೆ ತನ್ನ ವಂಶದ ಹೆಣ್ಣು ಮಕ್ಕಳಿಗೆ ಆಸ್ತಿ ಸಲ್ಲಬೇಕೆಂದು ಹೇಳುತ್ತಾಳೆ. ಕ್ರಿಶ. ೧೧೬೪ರ ಚಿನಗ ಶಾಸನದಲ್ಲಿ ಚೋಳಗೌಡನ ಮಗ ಮಾಂಡಳೀಕ ಮಾಚಿಗೌಡ ಚೋಳೇಶ್ವರ ದೇವರಿಗೆ ರಂಗಭೋಗಕ್ಕೆ ಕೆರೆ, ಗದ್ದೆ, ಸಲಗೆ ದಾನ ಅಲ್ಲದೆ ಸುವರ್ಣದಾನ, ಗೋದಾನ, ಕನ್ಯಾದಾನ, ಭೂಮಿದಾನ ನೀಡಿದ್ದಾನೆ. ಕ್ರಿಶ. ೧೦೨೮ರ ನವಲಗುಂದ ಶಾಸನದಲ್ಲಿ ಬ್ರಹ್ಮಪುರಿಯ ಕೇರಿಯ ಶ್ರೀಗುಣದಬೀಶ್ವರ ಶ್ರೀ ಸೋಬನೇಶ್ವರ ದೇವರಿಗೆ ಕನ್ಯಾದಾನ ಮಾಡಲಾದ ವಿವರವಿದೆ. ಅದೇ ಶಿಲಾ ಬರಹವು ತ್ರೈಪುರುಷ ದೇವರ ಪ್ರತಿಷ್ಠೆ ಮಾಡಿ ಕನ್ಯಾದಾನ, ಹಿರಣ್ಯದಾನ ಮಾಡಿದ ಮಾಹಿತಿಯನ್ನು ದಾಖಲಿಸಿದೆ(SII.XI(I)&(II),೬೪). ಕಳಚೂರಿ ಸೋವಿದೇವ ಕುಕನೂರಿಗೆ ಬಂದಾಗ ಮಲ್ಲಿಕಾರ್ಜುನ ದೇವರಿಗೆ ಅಂಗ, ರಂಗಭೋಗಕ್ಕೆ ವ್ಯಯ ಮಾಡಬೇಕೆಂದು ದಾನ ಮಾಡಿದ್ದಾನೆ(ಕ.ವಿ.ಶಾ. ಸಂಪುಟ-೨, ಯಲಬುರ್ಗಾ ೪೧). ರಂಗಭೋಗ ದೇವಾಲಯಗಳಲ್ಲಿ ಎಷ್ಟು ಮುಖ್ಯವಾಗಿತ್ತೆಂದರೆ ಎಲ್ಲ ವರ್ಗದವರು ದಾನ ನೀಡಿದ್ದಾರೆ. ಕೆಲವೊಮ್ಮೆ ಊರಿನ ಎಲ್ಲ ಧರ್ಮದವರು ದಾನ ಬಿಡುತ್ತಿದ್ದರು. ಮುದಿಸೆಟ್ಟಿ ಮತ್ತು ಇತರ ಧರ್ಮದವರು ಈಶ್ವರ ಗುಡಿಯ ಅಂಗ, ರಂಗಭೋಗಕ್ಕೆ ತೆರಿಗೆ ದಾನ ಬಿಟ್ಟದ್ದಾರೆ(ಕ.ವಿ.ಶಾ. ಸಂಪುಟ-೭, ಲಿಂಗಸೂರು ೩). ಹೊಯ್ಸಳ ದೊರೆ ಮೂರನೆಯ ನರಸಿಂಹನು ದೋರಸಮುದ್ರದ ತ್ರಿಕೂಟ ರತ್ನತ್ರೆಯದ ಶ್ರೀಶಾನ್ತಿದೇವರ ಅಂಗರಂಗಭೋಗಕ್ಕೆ ದಾನ ನೀಡಿದ್ದಾರೆ(E.C.VII, ನಾಗಮಂಗಲ, ೬೦). ಲಾಲನಕೆರೆ ಶಾಸನದಲ್ಲಿ ಎರಡನೇ ಬಲ್ಲಾಳನ ಆಳ್ವಿಕೆ ಕಾಲದಲ್ಲಿ ಮಧುಕೇಶ್ವರ ದೇವರ ಅಂಗರಂಗಭೋಗಕ್ಕೆ ಗದ್ದೆ, ತೋಟ ದತ್ತಿ ಬಿಡಲಾಗಿದೆ(E.C. VII, ನಾಗಮಂಗಲ, ೬೩). ಗೋಪಾಳ ದೇವರ ರಂಗಭೋಗಕ್ಕೆ ದತ್ತಿ ಬಿಡಲಾಗಿದೆ(E.C. VII, ನಾಗಮಂಗಲ, ೮೧). ವೀರನರಸಿಂಹ ಕಾಲದ ಶ್ರೀಪ್ರಸನ್ನ ಮಾಧವ ದೇವರ ರಂಗಭೋಗಕ್ಕೆ ದತ್ತಿ ಬಿಡಲಾಗಿದೆ. (E.C. VII ನಾಗಮಂಗಲ, ೭೩). ಬಿದಿರೆಯ ಕಲ್ಲಿನಾಥದೇವರ ರಂಗಭೋಗಕ್ಕೆ ಗದ್ದೆಯನ್ನು ಧಾರೆಯೆರೆದುಕೊಟ್ಟರು(E.C. XXIV, ಗುಬ್ಬಿ, ೬೦). ದೇವಾಲಯಗಳಿಗೆ ಭೂಮಿರೂಪದಲ್ಲಿ ಬರುವ ದಾನ ಕೂಡ ಒಂದು ಸಂಪತ್ತಾಗಿತ್ತು. ಭೂಮಿ ದಾನ ಮಾಡಿದ್ದರಿಂದ ದೇವಾಲಯದ ಒಡೆತನದಲ್ಲಿ ಆಸ್ತಿ ಹೇರಳವಾಗಿ ಸಂಗ್ರಹವಾಯಿತು. ಹೀಗೆ ದೇವಾಲಯದ ಒಂದು ಪ್ರಬಲ ಸಾಮಾಜಿಕ ಸಂಸ್ಥೆಯಾಗಿ ಮಾರ್ಪಾಡಾಗಲು ಇದು ಕಾರಣವಾಯಿತೆನ್ನಬಹುದು. ಬೂದಿ ಪಡಗ ಶಾಸನದಲ್ಲಿ ವಿಜಯನಗರ ಅರಸರ ಅಧಿಕಾರ ಅವಧಿಯಲ್ಲಿಯೂ ರಂಗಭೋಗಕ್ಕೆ ದಾನ ನೀಡಲಾಗಿದೆ. ಕ್ರಿಶ. ೧೪೦೮ರಲ್ಲಿ ಮೊದಲನೇ ದೇವರಾಯರಾಯನ ಅಧಿಕಾರಾವಧಿಯಲ್ಲಿ ಗಾಜನೂರ ಮಲ್ಲಿಕಾರ್ಜುನ ದೇವರ ರಂಗಭೋಗಕ್ಕೆ ದಾನ ಕೊಡಲಾದ ಮಾಹಿತಿ ಇದೆ. (E.C. IV, ಚಾಮರಾಜನಗರ, ೨೧೩). ಭಂಡಿಗೆರೆ ಶಾಸನದಲ್ಲಿ ಕೃಷ್ಣದೇವರಾಯನ ಅಧಿಕಾರಾವಧಿಯಲ್ಲಿ ಶ್ರೀ ಅಣ್ಣಲೇಶ್ವರ ದೇವರಿಗೆ ರಂಗಭೋಗಕ್ಕೆ ಹರದನಹಳ್ಳಿ ಪೂರ್ವ ಸೀಮೆ ಗದ್ದೆ ದಾನ ನೀಡಿದ್ದಾರೆ(E.C. IV, ಚಾಮರಾಜ ನಗರ, ೨೩೩). ದೇವಾಲಯಗಳಲ್ಲಿ ರಂಗಭೋಗಕ್ಕೆ ನೀಡಿದ ದಾನ ದತ್ತಿ ಕಲಾಪೋಷಣೆ ಎಂದು

ಹೇಳಬಹುದಾದರೂ ಅದು ಮೇಲ್ನೋಟಕ್ಕೆ ಮಾತ್ರ. ದೇವಾಲಯದ ರಂಗಭೋಗದಲ್ಲಿ ನೃತ್ಯಪ್ರದರ್ಶನಕ್ಕೆ ಪ್ರವೇಶ ಪಡೆಯುವುದಕ್ಕಿಂತ ಪೂರ್ವದಲ್ಲಿ ನೃತ್ಯ ಕಲಿಸಿದ ಶಿಲ್ಪಕಾರುಕ ಗುರುಗಳಿಂದ ತಮ್ಮ ಜೀವನ ನಿರ್ವಹಣೆಗೆ ದಾನ ಪಡೆದ ಪಾತರದವರು ದೇವಾಲಯದ ರಂಗಭೋಗ ಪ್ರವೇಶಿಸಿದ ನಂತರ ಅವರೇ ದೇವಾಲಯಗಳಿಗೆ ದಾನ ನೀಡುವಂತಹ ಆರ್ಥಿಕವಾಗಿ ಪ್ರಬಲರಾಗುತ್ತಿದ್ದರು. ಇದಕ್ಕೆ ದೇವಾಲಯದಿಂದ ಇವರಿಗೆ ದೊರೆಯುತ್ತಿದ್ದದು ಆರ್ಥಿಕಸೌಲಭ್ಯ ಅಥವಾ ಭದ್ರತೆ ಇತ್ತು. ದೇವಾಲಯಗಳಿಗೆ ಭೇಟಿ ಕೊಡುತ್ತಿದ್ದ ಸಮಾಜದ ಮೇಲ್ವರ್ಗದವರು, ಮತ್ತು ಆರ್ಥಿಕವಾಗಿ ಬಲಿಷ್ಠರಾಗಿದ್ದವರು ಪಾತರದವರೊಂದಿಗೆ ಸಂಪರ್ಕ ಹೊಂದಿ ಪಾತರದವರಿಗೂ ದಾನ ನೀಡುತ್ತಿದ್ದರು. ಇದರಿಂದ ಅವರಿಗೆ ಆರ್ಥಿಕ ಭದ್ರತೆಯನ್ನು ಒದಗಿಸಿ ಅವರಿಂದ ನಿರಂತರ ನೃತ್ಯ ಸೇವೆಯನ್ನು ಪಡೆಯುವ ಉದ್ದೇಶವಾಗಿತ್ತು. ಅವರ ಸೇವೆ ದೇವಾಲಯಗಳಿಗಷ್ಟೇ ಅಲ್ಲ, ವೈಯಕ್ತಿಕವಾಗಿಯೂ ಪಡೆಯುತ್ತಿದ್ದ ಕಾರಣಕ್ಕೆ, ದೇವಾಲಯಗಳಲ್ಲಿ ರಂಗಭೋಗ ಅವ್ಯಾಹತವಾಗಿ ಮುಂದುವರಿದಿತ್ತು.

"ಚಾಲುಕ್ಯ ಸೂಳೆಯರಿಗೆ 'ಪ್ರಿಯಮಹಿಷಿ', 'ಪ್ರಾಣವಲ್ಲಭೆ' ಎಂಬ ಪಾರಿಭಾಷಿಕ ಪದಗಳಾಗಿರುವ ಸಾಧ್ಯತೆಗಳಿವೆ. ಬೊಡ್ಡಿ ಪೊದ್ದಿಯನ್ನು 'ವಿಜಯಮಹಾದೇವಿ' ಎಂದು ಕರೆದುದೂ ಗಮನಾರ್ಹ. ಕುಂದಮರಸನ ತಾಯಿಯಾದ ಅಂಬಿಕೆ ಎಂಬುವಳು ಕಲ್ಯಾಣ ಚಾಲುಕ್ಯ ಇರಿವಬೆಡಂಗ ಸತ್ಯಾಶ್ರಯನ ಹೆಂಡತಿಯಾಗಿರದೆ ಸೂಳೆ (ಬಂಗಾರದವಳು) ಆಗಿರಬಹುದೆಂದು ವಿದ್ವಾಂಸರು ಊಹಿಸುತ್ತಾರೆ. ಇವರೆಲ್ಲ ರಾಜರಿಗೆ ತಮ್ಮನ್ನರ್ಪಿಸಿಕೊಂಡ ಶಾಸನಸ್ಥ ರಾಜವೇಶ್ಯೆಯರು"[೬೩] ಹಳೇಬೀಡಿನ ಶಾಸನವು ಗೌರಿದೇವಿಯ ಉಯ್ಯಾಲೆ ಬಾಯಿನಕ್ಕೆ ಹೊಯ್ಸಳೇಶ್ವರ ದೇವರ ಪಾತ್ರದ ವಿಸ್ಸವ್ವೆ, ಲಕ್ಕವ್ವೆಯರು ಐದು ಪಣ ದಾನ ಕೊಟ್ಟ ಸಂಗತಿಯನ್ನು ವಿವರಿಸಲಾಗಿದೆ(E.C. IX, ಬೇಲೂರು, ೨೯೬). ಬೇಲೂರು ಶಾಸನವು ಹಾಡುವ ಕಲ್ಲವ್ವೆಯ ಮಗಳು ಪಾತ್ರದ(ಹೆಸರು ಉಲ್ಲೇಖವಿಲ್ಲ) ಶ್ರೀ ಪಂಚಿಕೇಶ್ವರ ದೇವರಿಗೆ ಕೆಲವು ಗದ್ಯಾಣ ದಾನ ನೀಡಿದ ವಿವರವನ್ನು ದಾಖಲಿಸಿದೆ(E.C. IX, ಬೇಲೂರು, ೨೯೭). ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಮತ್ತೊಂದು ಶಾಸನದಲ್ಲಿ ಶಿವರಾತ್ರಿಯ ಜಾಗರಣೆ ದಿನದಂದು ಪಾತರದವರು ಸಾಮೂಹಿಕವಾಗಿ ದಾನ ನೀಡಿದ ಸಂಗತಿಯನ್ನು ಪ್ರಸ್ತಾಪಿಸಲಾಗಿದೆ. 'ಪಾತ್ರದ ಆನೆ ಮಾಳೌವೆ ಧರ್ಮಕ್ಕೆ ಕೊಟ್ಟ ಗದ್ಯಾಣ ಮೂರು, ಅವುಜಿಗ ಬೊಮ್ಮಯನ ಮಗಳು ಪಾತ್ರದ ಚಂದವ್ವೆ ಒಂದು ಗದ್ಯಾಣ ಕಿಲಾರಿ ಬೊಮ್ಮಯನ ಮೊಮ್ಮಗಳು ಪಾತ್ರದ ಗೋಪವ್ವೆ ಒಂದು ಗದ್ಯಾಣ. ಪಾತ್ರದ ಚಿಣ್ಣಯನ ದೇವವ್ವೆ ಕೊಟ್ಟ ಹಣ ಅಯಿದು ಕಂಬದ ಗದ್ಯಾಣ' ಎನ್ನುವ ವಿವರವಿದೆ(E.C.IX, ಬೇಲೂರು.೨೯೮). ಒಂದು ದೇವಾಲಯದಲ್ಲಿ ಹಲವಾರು ಪಾತರದವರು ಸೇವೆ ಸಲ್ಲಿಸುತ್ತಿದ್ದರೆಂಬುದಕ್ಕೆ ಈ ಶಾಸನ ಉತ್ತಮ ಉದಾಹರಣೆಯಾಗಿದೆ.

"೧೨ನೇ ಶತಮಾನದ ವಿಜಾಪುರದ ೨೨ನೇ ಶಾಸನದಲ್ಲಿ ಅಯ್ಯಣಯ್ಯನ 'ವಾರವಧು' ವಿಜಯದಬ್ಬೆಯ ಉಲ್ಲೇಖವಿದ್ದು, ಆಕೆ ಕಂಬ ದಾನವನ್ನು ನೀಡಿದ ವಿವರವನ್ನು ಶಾಸನ ಒಳಗೊಂಡಿದೆ"[೬೪] ಹಾಡುವ ಕಾಮವ್ವೆ ನಾಗವ್ವೆಯರ ಮಗಳು ಪಾತ್ರದ ಸಿರಿಯವ್ವೆಯರನ್ನು

ಹರಪನಹಳ್ಳಿಯ ೯೯ನೇ ಶಾಸನವು ಉಲ್ಲೇಖಿಸಲಾಗಿದೆ".[೨೫] ಕ್ರಿ.ಶ. ೧೦೪೮ರ ಹೊಳೆ ಆನವೇರಿ ಶಾಸನದಲ್ಲಿ ಮೊದಲ ಅಂಕದ ಬಾದಿಯ ಮಗಳು ಚಾಮರದ ಸೂಳೆ ಕಾಳಬ್ಬೆಗೆ ಮತ್ತರಯ್ದುನ್ನು ದಾನ ನೀಡಿದ ವಿವರವಿದೆ(SII. XVIII, ೬೧). ಅಲ್ಲದೇ ಸೂಡಿ ಶಾಸನದಲ್ಲಿ ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಚಾಮರದ ಸೂಳೆ, ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ, ಎಡದ ದೆಸೆಯ ಕೇರಿಯ ಚಾಮರದ ಸೂಳೆ, ಕೇರಿಯ ಚಾಮರದ ಸೂಳೆಯರ ಉಲ್ಲೇಖಗಳಿದ್ದು, ಅದೇ ಶಾಸನವು ಆ ಸೂಳೆಯರ ಹೆಸರುಗಳನ್ನು ಪ್ರಸ್ತಾಪಿಸಿದೆ(EI. XV,p ೮೨). ದೇವಾಲಯಗಳಲ್ಲಿ ದೇವರಿಗೆ ಚಾಮರ (ಗಾಳಿ)ಹಾಕುವುದು, ಈಗಲೂ ದೇವಾಲಯಗಳಲ್ಲಿ ಮತ್ತು ದೇವರ ಉತ್ಸವಗಳಲ್ಲಿ ಈ ಕೆಲಸ ಮಾಡುವವರು ಸೂಳೆಯರೇ, ಇವರ ವಾಸ ಸ್ಥಳ ಪ್ರತ್ಯೇಕವಾಗಿಯೇ ಇರುತ್ತವೆ. ಆಗ ಕೇರಿ ಎಂಬ ಪದ ಬಳಸಲಾಗುತ್ತಿತ್ತು. ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ ಅಚಬ್ಬೆ, ಬಲದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ ಅಬ್ಬೆಗೆ ಎನ್ನುವ ಪ್ರಸ್ತಾಪಗಳಿವೆ(EI. XV, p ೮೨). "ದೇವಾಲಯದ ಕಂಬಗಳಿಗೆ ನಿಲ್ಲುವ ಸೂಳೆಯರನ್ನು ಕಂಬದ ಸೂಳೆಯರು ಎನ್ನಲಾಗುತ್ತದೆ. ಕಂಬದ ನಾಲ್ವರು ಸೂಳೆಯರು ಎಂದು ಅವರನ್ನು ಹರಪನಹಳ್ಳಿ ಶಾಸನ ಉಲ್ಲೇಖಿಸಿದೆ."[೨೬] ಕಂಬದ ಸೂಳೆಯರ ಬಗ್ಗೆ ಕ್ರಿ.ಶ. ೧೦೫೪ರ ಸೂಡಿ ಶಾಸನದಲ್ಲಿ ಅಕ್ಕೇಶ್ವರ ದೇವಾಲಯದಲ್ಲಿದ್ದ ಮತ್ತಷ್ಟೂ ವಿವರಗಳು ಲಭ್ಯ ಇವೆ. ಆ ಶಾಸನವು ಬಲದ ದೆಸೆಯ ಮೊದಲ ಕಂಭದ ಸೂಳೆ.... ಬ್ಬೆಗೆ ಮ ೧೫, ಅಲ್ಲಿಯ ಕಂಬದ ಸೂಳೆ ಅಸಗಬ್ಬೆಗೆ ಮ ೧೩, ಎಡದ ದೆಸೆಯ ಮೊದಲ ಕಂಬದ ಸೂಳೆ ರೇವಕಬ್ಬೆಗೆ ಮ ೧೩, ಅಲ್ಲಿಯ ಕಂಬದ ಸೂಳೆ ಗುಬ್ಬಿಯ ಚಾವುಂಡಬ್ಬೆಗೆ ಮತ್ತರ್.... (EI. XV, p ೮೨). ಬಲವಕ್ಕದೆಡವಕ್ಕದ ಕಂಬದ ಸೂಳೆಯರ್ ನಾಲ್ವರ್ಗ್ಗಂ ಮತ್ತರ್ ೪೮ನ್ನು ದಾನ ಬಿಟ್ಟ ವಿವರಗಳನ್ನು ದಾಖಲಿಸಿದೆ(EI. XV, p ೮೭). ದೇವಾಲಯದ ಒಳ ಆವರಣದಲ್ಲಿ ಕಂಬಕ್ಕೆ ನಿಲ್ಲುವ ಇವರಿಗೆ ದಾನವನ್ನು ಪ್ರತ್ಯೇಕವಾಗಿ ಇಲ್ಲವೇ ಎಲ್ಲಾರಿಗೂ ಒಟ್ಟಿಗೆ ದಾನ ಕೊಡಲಾಗುತ್ತಿತ್ತು. ಕ್ರಿ.ಶ. ೧೧೨೧ರಲ್ಲಿ ಕಾಗಿನೆಲೆ ಕಾಳೇಶ್ವರ ದೇವಾಲಯದ ಕಂಬದ ಸೂಳೆಯರಿಗೆ ದತ್ತಿ ಕೊಟ್ಟ ವಿವರವನ್ನು ಅಲ್ಲಿನ ಶಾಸನ ಉಲ್ಲೇಖಿಸಿದೆ(SII. XVIII, ೧೧೭). ಪ್ರಾಚೀನ ಕಾಲದ ದೇವಾಲಯಗಳಲ್ಲಿ ಕಂಬಗಳದ್ದೇ ಒಂದು ವಿಶೇಷ. ದೇವಾಲಯದಲ್ಲಿ ಕಂಬಗಳನ್ನು ದಾನ ಮಾಡುತ್ತಿದ್ದರು. ಅಲ್ಲದೇ ಸಾಲೊಟಗಿ ಶಾಸನದಲ್ಲಿ ಕಂಬದಾನ ಮಾಡಿದ ವಿವರವಿದೆ(EI. IV, p ೬೩). ಈ ಕಂಬಳಿಗೆ ಪೂಜೆ ಅಥವಾ ಇನ್ನಿತರ ವೇಳೆಯಲ್ಲಿ ಕಂಬಕ್ಕೊಬ್ಬರಂತೆ ಸೂಳೆಯರನ್ನು ನಿಲ್ಲಿಸಲಾಗುತ್ತಿತ್ತು. ಸೂಳೆಯರೂ ಕಂಬಗಳನ್ನು ನಿರ್ಮಿಸುತ್ತಿದ್ದರು. "ಸೂಳೆ ಚಲಬ್ಬೆ ಬಿಜೇಶ್ವರದ ದೇವಾಲಯದ ಮೂರು ಕಂಬಗಳನ್ನು ಮಾಡಿಸಿದಂತೆ ಬಾದಾಮಿ ಶಾಸನದಲ್ಲಿ ಉಲ್ಲೇಖವಿದೆ"[೨೭] ತ್ರಿಪುರಾಂತಕ ದೇವರ ಪಾತ್ರ ಸೂಳೆ ಪದುಮಾವತಿಯ ಹೆಸರಿದೆ. ಈಕೆ ದೇವದಾಸಿಯೂ ಹೌದು ನರ್ತಕಿಯೂ ಹೌದು. ಮತ್ತು ಅಕ್ಕೇಶ್ವರ ದೇವಾಲಯದ ಬಲದ ದೆಸೆಯ ಪಾತ್ರಂ ಸೂಳೆ ವಕ್ಕಬ್ಬೆಗೆ... ಮ ೧೨, ಎಡದ ದೆಸೆಯ ಪಾತ್ರ ಸೂಳೆ ಗಾರ್ಗಬ್ಬೆಗೆ ಮ ೧೨ ಎಂದಿದೆ(EI. XV, p ೮೨). ಮಾಡದ ಸೂಳೆ ನಾಗಲತೆಗೆ ಮ ೧೨ನ್ನು ದಾನ ನೀಡಿದ ವಿವರವಿದೆ(SII. XVIII, ೯೧). ರಂಗಭೋಗದಲ್ಲಿ ಹಾಡುವವರು ಇದ್ದರು.

ಹಾಡುವ ಕಾಮವ್ವೆಯ ಮಗಳು ನಾಗವ್ವೆಯನ್ನು ಶಾಸನ ಉಲ್ಲೇಖಿಸಿದೆ(ಕ.ವಿ.ಶಾ. ಸಂಪುಟ-೧, ಹರಪನಹಳ್ಳಿ, ೯೯). ಹೀಗೆ ದೇವಾಲಯಗಳಲ್ಲಿ ಸೂಳೆಯರಿಗೆ ಅವರಿಗೇ ಮೀಸಲಾದ ಕರ್ತವ್ಯಗಳಿದ್ದವು ಎಂಬುದನ್ನು ಶಾಸನಗಳ ಮೂಲಕ ಅರಿಯಬಹುದು.

"ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಯಾದ ನೂನಿಜ್ ಕೃಷ್ಣದೇವರಾಯನು ತಾನು ದೊರೆಯಾಗುವುದಕ್ಕಿಂತ ಮುಂಚೆ ವೇಶ್ಯೆಯಾದ ಚಿನ್ನಾದೇವಿಯಲ್ಲಿ ಅನುರಕ್ತನಾಗಿದ್ದ ಎನ್ನುವ ಅಂಶವನ್ನು ಪ್ರಸ್ತಾಪಿಸಿದ್ದಾನೆ"[೮] ಕಳ್ಳಿಹಾಳ ಶಾಸನದಲ್ಲಿ ಮುಖ್ಯವಾಗಿ ನಾಲ್ಕು ಜನ ಸೂಳೆಯರ ಹೆಸರುಗಳು ಪ್ರಸ್ತಾಪವಾಗಿದ್ದು, ಅವರಿಗೆ ಕೆಲವು ಒಕ್ಕಲನ್ನು ಉಂಬಳಿಯಾಗಿ ಕೊಟ್ಟ ವಿವರವನ್ನು ಶಾಸನವು ಈ ರೀತಿ ದಾಖಲುಮಾಡಿದೆ. "ಧರ್ಮಾಮನೋ ಹಲೆಯಾ[ಯೊ]ಬ್ಬೆ ಯೊಕ್ಕಲು ರಾಜಂಬೆಯೊಕ್ಕಲು ಕಾದಂಬೆಯೊಕ್ಕಲು ಇನ್ತೀ ನಾಲ್ವರ್ ಸೂಳೆಯರು ಮೆಲ್ಲಿ[ಗಂ] ಪೋಗಲಾಗದು ಅದಾ ಪದ್ಧತಿ ಕಾಳಬ್ಬೆಗೆ" (SII. XVIII, ೪೪). ಈ ಶಾಸನವನ್ನು ಅಧ್ಯಯನ ಮಾಡಿದಾಗ ಎಲ್ಲೋ ಒಂದು ಕಡೆ ಮಹಿಳೆಯರಿಗೆ ವೇಶ್ಯೆಯರಾಗುವುದಕ್ಕೆ ವಿರೋಧವಿತ್ತೆನಿಸುತ್ತದೆ. ಸುಂದರವಾಗಿರುವ ಕಾರಣಕ್ಕೆ ಒತ್ತಾಯದಿಂದ ಮಹಿಳೆಯರನ್ನು ವೇಶ್ಯೆಯರನ್ನಾಗಿ ಮಾಡುತ್ತಿರಬಹುದು. ದೇವದಾಸಿಯಾಗಲು ಇಚ್ಛೆಯಿಲ್ಲದ ಮಹಿಳೆ ಆ ಬಂಧನದಿಂದ ತಪ್ಪಿಸಿಕೊಳ್ಳಬಹುದೆಂಬ ಕಾರಣಕ್ಕೆ 'ಪೋಗಲಾಗದು' ಎಂದು ಕರಾರು ಹಾಕಿದಂತಿದೆ. ಎಲ್ಲರೂ ವೇಶ್ಯಾ ವೃತ್ತಿ ಮಾಡುವುದಕ್ಕೆ ತಮ್ಮಿಚ್ಛೆಯಿಂದ ಒಪ್ಪುತ್ತಿರಲಿಲ್ಲವೆನಿಸುತ್ತದೆ. ಈ ಪದ್ಧತಿ ಕುರಿತು ಎಲ್ಲೋ ಒಂದು ಕಡೆ ಪ್ರತಿಭಟನಾತ್ಮಕ ಧೋರಣೆಯನ್ನು ಗುರುತಿಸಬಹುದು.

ರಾಜರು ವೇಶ್ಯೆಯರೊಂದಿಗೆ ಸಂಬಂಧ ಹೊಂದಿದ್ದರು. ರಾಜನದು ವಿವಾಹಬಾಹಿರ ಸಂಬಂಧವಾದರೂ ವೇಶ್ಯೆಯರು ಅವರೊಂದಿಗೆ ಮಾತ್ರ ನಿಷ್ಠೆಯಿಂದ ಕೊನೆಯವರೆಗೂ ಇರುತ್ತಿದ್ದರು. ಅವರದು ಸತಿಯ ಸ್ಥಾನವಲ್ಲ. ಆದರೂ ಸತಿಧರ್ಮ ನಿಭಾಯಿಸುತ್ತಿದ್ದರೆನ್ನುವುದು ಅವರ ಬಗ್ಗೆ ಹೆಗ್ಗಳಿಕೆ ಅನಿಸುತ್ತದೆ. ಅನೇಕ ದೊರೆಗಳು ವೇಶ್ಯೆಯರನ್ನು ಹೊಂದಿರಬಹುದು. ಆದರೆ ಶಾಸನದಲ್ಲಿ ಉಲ್ಲೇಖಿಸಲಾಗಿರುವುದು ಕೆಲವರನ್ನು ಮಾತ್ರ. ರಾಜರು ವೇಶ್ಯೆಯರೊಂದಿಗೆ ಹೊಂದಿದ್ದ ಸಂಬಂಧವನ್ನು ಬಹಿರಂಗವಾಗಿ ಉಲ್ಲೇಖಿಸುವಂತಿಲ್ಲವಾದ್ದರಿಂದ ಅವು ಬೆಳಕಿಗೆ ಬಂದಿಲ್ಲವೆನ್ನಬಹುದು. ಹಾಗೆ ದೊರೆತ ಶಾಸನಗಳು ಬಹು ವಿರಳ. ಕ್ರಿ.ಶ. ೬೫೫-೬೫೯ರಲ್ಲಿ ಎರಡನೇ ಪುಲಿಕೇಶಿಯ ಹಿರಿಯ ಮಗ ಚಂದ್ರಾದಿತ್ಯನ ಕೊಚ್ಚೆ ತಾಮ್ರಪಟದಲ್ಲಿ ವೇಶ್ಯೆಯಾದ ಬೊಡ್ಡಿಯ ಉಲ್ಲೇಖವಿದೆ. "ಚಂದ್ರಾದಿತ್ಯ ಪೃಥ್ವೀವಲ್ಲಭ ಮಹರಾಜಾಧಿರಾಜಸ್ಯ ಪ್ರಿಯಮಹೀಷಿ ಶ್ರೀವಿಜಯಾಮಹಾದೇವಿ ಬೊಡ್ಡಿ" ಎಂಬ ಉಲ್ಲೇಖ ಆಕೆಯ ಗುಣ ಸೌಂದರ್ಯ ಮೆಚ್ಚಿ ಚಂದ್ರಾದಿತ್ಯ ಮದುವೆಯಾಗಿರಬಹುದು. ಅಲ್ಲದೆ ಆಕೆ ಪ್ರಿಯಮಹಿಷಿ ಆಗಿದ್ದಳೆಂದು ಈ ಶಾಸನದಿಂದ ಸ್ಪಷ್ಟವಾಗುತ್ತದೆ"[೯] ಅದೇ ರೀತಿ "ಮಹಾಕೂಟ ಶಾಸನದಲ್ಲಿ ಕ್ರಿ.ಶ. ೭೩೩ರ ವಿನಯಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ, ಮಹಾರಾಜಾಧಿರಾಜ, ರಾಜ ಪರಮೇಶ್ವರ, ಭಟ್ಟಾರರ ಪ್ರಾಣವಲ್ಲಭೆ ವಿನಾಪೊಟಿಗೆಳೆನ್ನೊವರು ಸೂಳೆಯರು ಎನ್ನುವ

ಪ್ರಸ್ತಾಪವಿದೆ."[೮೦] ಆಕೆಯ ವಂಶದ ಪೂರ್ವಜರು ಸೂಳೆಯರಾಗಿದ್ದರೆನ್ನುವ ಮತ್ತೊಂದು ಗಮನಾರ್ಹ ವಿವರವಿದೆ. ಆಕೆ ಈ ವಿವರವನ್ನು ಸ್ವತಃ ಶಾಸನದಲ್ಲಿ ಹೇಳಿಕೊಂಡಿದ್ದಾಳೆ. ಆಕೆಯ ತಾಯಿ ಕುಚಿಪೊಟಿ, ಅಜ್ಜಿ ರೇವಮಞ್ಞಯರ ಹೆಸರು ಶಾಸನದಲ್ಲಿದ್ದು, ವಿನ್‌ಪೊಟಿಯ ತಾಯಿ ಮತ್ತು ಅಜ್ಜಿಯರಿಬ್ಬರು ರಾಜ ವೇಶ್ಯೆಯರು ಆಗಿರುವ ಸಾಧ್ಯತೆ ಇದೆ. ತಾವು ವೇಶ್ಯೆಯರೆಂದು ಶಾಸನಗಳಲ್ಲಿ ದಾಖಲಿಸುವಲ್ಲಿ ಅವರಿಗೆ ಅಗೌರವವೆನಿಸಿಲ್ಲ. ಸಾಮಾಜಿಕವಾಗಿ ತಮ್ಮನ್ನು ತನ್ನ ವೃತ್ತಿಯಿಂದ ಗುರುತಿಸಿಕೊಂಡಿರುವುದು ವಿಶೇಷವಾಗಿದೆ. "ಕ್ರಿ.ಶ. ೮೪೬ರ ನೀತಿಮಾರ್ಗ ಪೆರ್ಮಾಡಿಗಳ ಸೂಳೆ ಜೋಗಬ್ಬೆಯ ಉಲ್ಲೇಖ ಚಾಮರಾಜನಗರ ತಾಲೂಕಿನ ಹಗ್ಗೋಟ ಗ್ರಾಮದ ಶಾಸನದಲ್ಲಿದೆ".[೮೧] ಕ್ರಿ.ಶ. ೮೮೮ರ ಶಾಸನ ಮಯ್ದಮರಸನ ಸೂಳೆ ಕಾಡಬ್ಬೆಯ ವಂಶಸ್ಥನಾದ ಪರಕಯ್ಯನ್ನನ್ನು ಉಲ್ಲೇಖಿಸುತ್ತದೆ. 'ಮಯ್ದಮರಸನ ಸೂಳೆ ಕಾಡಬ್ಬೆ, ಕಡಬ್ಬೆಯ ಮಗಳಯ್ವಬ್ಬೆ, ಅಯ್ವಬ್ಬೆಯ ಮಗಳ್ ಕಳಿಂಗಬ್ಬೆ, ಕಳಿಂಗಬ್ಬೆಗಳಯ್ಯ ಪಲ್ಲಹಾರತಿ ಪರಕಿಯು ಮಗಳ್ ಕಳಿಂಗಬ್ಬೆ ಕಳಿಂಗಬ್ಬೆಯು ಮಗಂ ಪರಕಯ್ಯನಿತ್ತು ವಂಶಪರಂಪರ್ಯಾಯೆಮೆಡವರಿಯದೆ ಬನ್ದ ಧರ್ಮಸನ್ತತಿ,(E.C. XI (ರೈ), ದಾವಣಗೆರೆ ೧೭). ಈ ರೀತಿ ವೇಶ್ಯೆಯರ ವಂಶಾವಳಿಗಳನ್ನು ಹೆಸರಿಸಿರುವ ಅಪರೂಪದ ಶಾಸನಗಳು ನಮ್ಮಲ್ಲಿವೆ.

ರಾಜವೇಶ್ಯೆಯರಿಗೆ ಹೆಣ್ಣುಮಕ್ಕಳು ಜನಿಸಿದರೆ ಅದೇ ವೃತ್ತಿಯನ್ನು ಮುಂದುವರಿಸುತ್ತಾರೆ. ಒಂದು ವೇಳೆ ಗಂಡು ಮಗು ಜನಿಸಿದರೆ ರಾಜರು ರಾಜ್ಯದ ಸೈನ್ಯದಲ್ಲಿ ಸೈನಿಕ ಅಥವಾ ಬೇರೆಯಾವುದಾದರೂ ಹುದ್ದೆಯನ್ನು ರಾಜನಿಂದ ಪಡೆಯುತ್ತಿದ್ದರು. ವಿವರವನ್ನು ೯ನೇ ಶತಮಾನದ ಬೇವಿನಕುಪ್ಪೆ ಶಾಸನದಲ್ಲಿ ಗುರುತಿಸಲಾಗಿದೆ. "ಪೃಥ್ವುವೀ ಗಂಗನ ಸೂಳೆ ಬೀರಕ್ಕನ ಮಗ ಕಳಿಂಗನ ನೆನಪಿಗೆ ನಿರ್ಮಿಸಿದ ವೀರಗಲ್ಲು"[೮೨] ಎರೆಕಾಳಿಂಗನು ಸೈನ್ಯದಲ್ಲಿ ಯೋಧನಾಗಿರಬೇಕು. ಯಾವುದೋ ಯುದ್ಧದಲ್ಲಿ ಮಡಿದಾಗ ಆತನ ನೆನಪಿಗೆ ವೀರಗಲ್ಲು ಇರಿಸಲಾಗಿದೆ. ಇದು ಹತ್ತನೆಯ ಶತಮಾನಕ್ಕಿಂತ ಮೊದಲು ಸಮಾಜದಲ್ಲಿ ವೇಶ್ಯೆಯರನ್ನಷ್ಟೇ ಅಲ್ಲ, ಅವರ ಮಕ್ಕಳನ್ನು ಸಹ ಉತ್ತಮ ರೀತಿಯಲ್ಲಿ ಗೌರವಿಸುತ್ತಿದ್ದರೆಂಬುದನ್ನು ಸೂಚಿಸುತ್ತದೆ.

'ತೊತ್ತು' ಎಂದು ಕರೆಯುವ ಮತ್ತೊಂದು ವರ್ಗದ ಸೇವಿಕಾ ಸ್ತ್ರೀಯರನ್ನು ಶಾಸನಗಳು ಉಲ್ಲೇಖಿಸಿವೆ. ಕನ್ಯಾದಾನದಂತೆ ಇದು ದೇವಾಲಯದ ವಶಕ್ಕೆ ಹೆಣ್ಣನ್ನು ಬಿಡುವುದಾಗಿದೆ. ತೊತ್ತು ಎಂಬ ಪದ ಸ್ವತ್ತು ಎಂಬ ಅರ್ಥವನ್ನು ಸೂಚಿಸುತ್ತದೆ. ಇದು ದೇವಾಲಯದ ಸ್ವತ್ತು ಅಥವಾ ವಶಕ್ಕೆ ಒಪ್ಪಿಸುವುದು ಎಂದಾಗಿದೆ. ಇವರೂ ಪಾತರದವರಂತೆ ನೃತ್ಯವನ್ನು ಮಾಡುವವರೆ, ವೇಶ್ಯೆಯರಂತೆ ಸೇವೆ ಮಾಡುವವರೇ. ಕ್ರಿ.ಶ. ೧೦೩೫ರ ಬಾಗಳಿ ಶಾಸನದಲ್ಲಿ ಹಾಡುವ ಕಾಮವ್ವೆ ನಾಗವ್ವೆಯರ ಮಗಳು ಶ್ರೀ ಕಲಿದೇವರ ತೊತ್ತು ಪಾತ್ರದ ಸಿರಿಯವ್ವೆ ದಾನ ನೀಡಿದ ಮಾಹಿತಿ ಇದೆ. ರಂಗಭೋಗದಲ್ಲಿ ನೃತ್ಯ ಮಾಡುವ ಸಿರಿಯವ್ವೆ ಕಲಿದೇವರಿಗೆ ಸೇರಿದವಳು. "ಬಿಜಾಪುರದ ವಸ್ತುಸಂಗ್ರಾಲಯದ ೧೨ನೇ ಶಾಸನದಲ್ಲಿ ಕ್ರಿ.ಶ. ೧೦೮೩ರ ಶಾಸನದಲ್ಲಿ ರಬ್ಬಕಬ್ಬೆ ತನ್ನ ತೊತ್ತು ಮಾಚಬ್ಬೆಯ ಸರಕಳೇಶ್ವರ ದೇವರ್ಗೆ ಬಿಟ್ಟಳ್"[೮೩] ಎನ್ನುವ ಮಾಹಿತಿ ಇದೆ.

ಕರ್ನಾಟಕದ ವಿವಿದೆಡೆ ದೊರೆತ ಶಾಸನಗಳು ವೇಶ್ಯಾಪದ್ಧತಿಯ ಮತ್ತೊಂದು ರೂಪವಾದ ನೃತ್ಯ ಪರಂಪರೆಯನ್ನು ಮತ್ತು ನೃತ್ಯಗಾರರನ್ನು ಹಾಗೂ ನೃತ್ಯಶಾಲೆ(ನಾಗವಾಸ)ಗಳನ್ನು ದಾಖಲಿಸಿವೆ. ಅವುಗಳಲ್ಲಿ "ಸನ್ನತಿಯ ಸ್ತಂಭವೊಂದರ ಮೇಲಿನ ಶಾಸನವು ಬೌದ್ಧವರ್ಗಕ್ಕೆ ಸೇರಿದ ನಡಿಯ ಗುಡ ಎಂಬುವನ ಪುತ್ರಿ ಹಾಗೂ ನರ್ತಕಿ ಗೋವಿದಾಸಿ, ಅಲ್ಲಿಯ ಮಹಾಸ್ತೂಪದ ಪ್ರಕಾರ ನಿರ್ಮಾಣಕ್ಕೆ ದಾನ ಮಾಡಿದ್ದಾಳೆ ಹಾಗೂ ನರ್ತಕಿ ಆರ್ಯವಾಸಿ ಮತ್ತು ನಟಿ ವಾಲುಕಿಯರು ಉನ್ನತದ್ವಾರ ಮತ್ತು ಸಭಾಂಗಣ ಕಟ್ಟಿಸಿದರೆಂದಿದೆ"[೮೪] ಹೊಯ್ಸಳರ ವಿಷ್ಣುವರ್ಧನನ ಪತ್ನಿ ಶಾಂತಲೆ ಪ್ರಖ್ಯಾತ ನೃತ್ಯಗಾತಿಯಾಗಿದ್ದು, ನೃತ್ಯ ವಿಶಾರದೇ ಎಂದು ಗೌರವಿಸಲ್ಪಟ್ಟಿದ್ದಳು. ಮಹಿಳೆಯರನ್ನು ಸಂಪತ್ತಿನ ಸಂಕೇತವೆಂದೂ ಬಿಂಬಿಸಲಾಗಿದೆ. ಆಕೆಯನ್ನು ಕೆರೆ, ಗದ್ದೆ, ಹಸು, ಬಂಗಾರದ ಜೊತೆ ಗುರುತಿಸಲ್ಪಟ್ಟಿದ್ದಾಳೆ. ಹೆಣ್ಣು ಒಂದು ವಸ್ತುವಿನಂತೆ ಎಂದು ತಿಳಿದು ಆಕೆಯನ್ನು ಬೇರೆಯವರಿಗೆ ಸರುಕಿನ ರೀತಿಯಲ್ಲಿ ಮಾರಾಟ ಮಾಡಲಾಗಿದೆ ಇಲ್ಲವೇ ವಿತರಿಸಲ್ಪಟ್ಟಿದೆ. ಸಂಪತ್ತಿನಂತೆ ಆಕೆ ಯಾರ ವಶಕ್ಕೆ ಬೇಕಾದರೂ ಸೇರಬಹುದು ಎಂಬುದು ಶಾಸನಗಳ ಮೂಲಕ ತಿಳಿದುಬರುತ್ತದೆ.

**ಕೊನೆ ಟಿಪ್ಪಣಿ**

೧. ಶಿವರಾಮ ಕಾರಂತ, ಸಿರಿಗನ್ನಡ ಅರ್ಥಕೋಶ, ೧೯೭೮, ಪುಟ –೫೨

೨. ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ –೨೭೦

೩. ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ ೩೭–೪೦

೪. ಅದೇ, ಪುಟ –೪೦

೫. ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ –೨೭೨

೬. ಅದೇ, ಪುಟ –೧೭೦

೭. ಅದೇ, ಪುಟ – ೧೬೧

೮. ಅದೇ, ಪುಟ –೨೫೪

೯. ಅದೇ, ಪುಟ –೨೭೫

೧೦ ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ –೪೫

೧೧ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೨೭೬

೧೨. ಜೋಗನ್ ಶಂಕರ್,ದೇವದಾಸಿಯರು, ೧೯೯೬, ಪುಟ–೪೬

೧೩. ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೧೪೦

೧೪. ಜೋಗನ್ ಶಂಕರ್,ದೇವದಾಸಿಯರು, ೧೯೯೬, ಪುಟ ೪೮–೪೯

೧೫. ಭೈರಪ್ಪ ಕೆ, ಸಮಗ್ರ ಸರ್ಮಾಜಿಕ ಸಮಸ್ಯೆಗಳು, ೨೦೧೫, ಪುಟ –೧೦

೧೬ ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ ೪೮ –೫೦

೧೭. ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ –೨೦

೧೮ ಅದೇ, ಪುಟ – ೬೩೪

೧೯ ಕಲವೀರ ಮನ್ವಾಚಾರ, ಮಾತೃದೇವತಾ ಆರಾಧನೆ, ೨೦೦೮, ಪುಟ – ೪೬

೨೦ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೧೦೫

೨೧ ರಾಧ ಟಿ, ದೇವದಾಸಿಯರ ಸಾಮಾಜಿಕ ಅಧ್ಯಯನ, ೨೦೧೮, ಪುಟ –೨

೨೨ ಕೂಡಲಿ ಸಚ್ಚಿದಾನಂದ ಶಂಕರ ಭಾರತಿ, ಕೌಟಲೀಯ ಅರ್ಥಶಾಸ್ತ್ರ, ೧೯೯೪, ಪುಟ– ೧೯೪

೨೩ ಅದೇ, ಪುಟ –೧೯೭

೨೪ ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ –೫೮

೨೫ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ –೧೬೬.

೨೬ ಅಲ್ಟೇಕರ್, ವುಮೆನ್ ಇನ್ ಏನ್ಸಿಯೆಂಟ್ ಪಿರಿಯೆಡ್, ೧೯೭೩, ಪುಟ –೧೮೪

೨೭ ಅದೇ, ಪುಟ– ೭೦

೨೮ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೧೩೪

೨೯ ಅದೇ, ಪುಟ– ೨೮೩

೩೦ ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ – ೫೯

೩೧ ಅದೇ, ಪುಟ– ೬೩

೩೨ ಅದೇ, ಪುಟ –೮೦

೩೩ ಅದೇ, ಪುಟ ೫೮–೫೯

೩೪ ಅದೇ, ಪುಟ –೧೧೭

೩೫ ಸಯ್ಯಾದ್ ಸಿರಾಜ್ ಉಲ್ ಹಸನ್, ಸಂ.೧, ೧೯೨೦, ಪುಟ ೯೧–೯೪

೩೬ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೧೨೪

೩೭ ಅದೇ, ಪುಟ– ೧೦೩

೩೮ ಸೀತಾರಾಮಯ್ಯ, ನೇಮಿನಾಥ ಪುರಾಣ (೨ನೇ ಆಶ್ವಾಸ). ೧೯೮೪, ಪುಟ –೯೪

೩೯ ಶಿವರಾಮಯ್ಯ, ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು ನಡೆದುಬಂದ ದಾರಿ, ೨೦೧೨, ಪು ೪

೪೦ ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ೧೯೬೪, ಪುಟ – ೨೬೧

೪೧ ಅದೇ, ಪುಟ –೨೬೨

೪೨ ಅದೇ, ಪುಟ –೧೨೩

೪೩ ಕಲಬುರ್ಗಿ ಎಂ ಎಂ (ಸಂ), ಕುಮಾರರಾಮ ಚರಿತ್ರೆ, ೨೦೦೧, ಪುಟ –೮೪

೪೪ ಅದೇ, ಪುಟ– ೮೮

೪೫ ಅದೇ, ಪುಟ –೧೦೩

೪೬ ಬಸವಪ್ರಭು (ಸಂ), ರಾಘವಾಂಕ ಹರಿಶ್ಚಂದ್ರ ಕಾವ್ಯ, (೪ನೇ ಆಶ್ವಾಸ), ೧೯೮೪, ಪುಟ– ೯೮

೪೭ ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ, ೧೯೬೪, ಪುಟ–೬೭

೪೮ ಕಲಬುರ್ಗಿ ಎಂ.ಎಂ (ಸಂ), ಕುಮಾರರಾಮ ಚರಿತ್ರೆ, ೨೦೦೧, ಪುಟ – ೧೦೮

೪೯ ಅದೇ, ಪುಟ– ೧೦೮

೫೦ ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ, ೧೯೬೪, ಪುಟ– ೨೬೧

೫೧ ಸಿದ್ದಣ್ಣ (ಸಂ), ಲಂಬಣಾಚಾರ್ಯರ ಸಿಂಧೂರ ತಿಲಕ, ೧೯೮೯, ಪುಟ – ೯೪

೫೨ ಬಸವರಾಜ ಎಲ್, ವಚನ ಸಂಪುಟ ೨, ೧೯೭೮, ಪುಟ –೧೮೪

೫೩ ನಾಗೇಗೌಡ ಎಚ್ ಎಲ್, ಪ್ರವಾಸಿ ಕಂಡ ಇಂಡಿಯಾ, ೧೯೮೪, ಪುಟ –೩೪೪

೫೪ ಬಸವರಾಜ್ ಎಲ್, ವಚನ ಸಂಪುಟ, ಸಂ–೧, ೧೯೮೪, ಪುಟ –೬೪೪

೫೫ ಸುಧಾಮಣಿ ಬಿ.ಎನ್, ಮೈಸೂರು ಸಂಸ್ಥಾನದ ಸಮಾಜದಲ್ಲಿ ಬಸವಿ ಪದ್ಧತಿ–ಒಂದು ವಿಶ್ಲೇಷಣೆ, (ಇತಿಹಾಸ ದರ್ಶನ), ೨೦೦೭, ಪುಟ ೨೬೬–೨೬೭

೫೬ ಎಡ್ವರ್ಡ್ ಥರ್ಸ್ಟನ್, ಕಾಸ್ಟ್ ಅಂಡ್ ಟ್ರೈಬ್ಸ್ ಇನ್ ಸದರ್ನ್ ಇಂಡಿಯಾ, ೧೯೦೯, ಪುಟ– ೩೫

೫೭ ತಿಪ್ಪೇಸ್ವಾಮಿ ಎಚ್, ಕರ್ನಾಟಕ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ –೮೪

೫೮ ಅದೇ, ಪುಟ –೮೪

೫೯ ಅದೇ, ಪುಟ– ೧೮೯

೬೦ ಅದೇ, ಪುಟ – ೪೪

೬೧ ಡಾ.ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೬, ಪುಟ – ೨೦೨

೬೨ ಜೋಗನ್ ಶಂಕರ್, ದೇವದಾಸಿಯರು, ೧೯೯೬, ಪುಟ – ೧೯೬

೬೩ ಕಲಬುರ್ಗಿ ಎಂ ಎಂ, ವಿಜಾಪುರ ಜಿಲ್ಲೆ ಶಾಸನ ಸೂಚಿ, (ಶಾ.ಸಂ. ೨೨), ೧೯೯೪, ಪುಟ– ೧೩೩

೬೪ ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೬, ಪುಟ – ೧೮೪

೬೫ ಅದೇ, ಪುಟ – ೧೮೪

೬೬ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೯, ಹುನುಗುಂದ, ೨೦೦೧, ಪುಟ –೧೨೨

೬೭ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧೦, ಬಿಜಾಪುರ,೨೦೦೧, ಪುಟ –೩೨

೬೮ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ಸಂಪುಟ–೧, ಹರಪನಹಳ್ಳಿ, ೧೯೯೮, ಪುಟ – ೯೭

೬೯ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೨, ಕುಷ್ಟಗಿ,೧೯೯೮, ಪುಟ ೧೩

೭೦ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಹರಪನಹಳ್ಳಿ ೧೯೯೮, ಪುಟ –೯೭

೭೧ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೯, ಹುನುಗುಂದ,೨೦೦೧, ಪುಟ– ೧೨೨

೭೨ ಶೇಷಶಾಸ್ತ್ರಿ ಆರ್, ಶಾಸನ ಸಂಪದ, ಕರ್ನಾಟಕದ ಶಾಸನಗಳು, ೧೯೬೩, ಪುಟ– ೧೭

೭೩ ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ೧೯೯೦, ಪುಟ– ೭೬

೭೪ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಹರಪನಹಳ್ಳಿ, ೧೯೯೮, ಪುಟ – ೯೯

೭೫ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಹರಪನಹಳ್ಳಿ, ೧೯೯೮, ಪುಟ - ೧೧೩

೭೬ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯, ಬಾದಾಮಿ, ೨೦೦೧, ಪುಟ - ೯೮

೭೭ ನಾಗೇಗೌಡ ಎಚ್ ಎಲ್(ಸಂ), ಪ್ರವಾಸಿ ಕಂಡ ಇಂಡಿಯಾ, ೧೯೮೬, ಪುಟ - ೩೮೦

೭೮ ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ೧೯೯೦, ಪುಟ- ೪೯

೭೯ ದೇವರಕೊಂಡಾರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯, ಬಾದಾಮಿ,೨೦೦೧, ಪುಟ- ೯೮

೮೦ ಚೆನ್ನಕ್ಕ ಪಾವಟೆ, ಶಾಸನಗಳಲ್ಲಿ ಕರ್ನಾಟಕದ ಮಹಿಳೆಯರು, ೧೯೯೦, ಪುಟ - ೫೦

೮೧ ರೈಸ್ ಇ ಎಸ್, ಎಫಿಗ್ರಾಫಿಕಾ ಕರ್ನಾಟಿಕಾ, ಸಂ:೨ ೧೯೭೭, ಪುಟ -೨೫೩

೮೨ ದೇವರಕೊಂಡಾರೆಡ್ಡಿ(ಸಂ೧೩.೫ಪುಟ-೧೦), ಬಿಜಾಪುರ, ೨೦೦೧, ಪುಟ -೧೩

೮೩ ಕಲಬುರ್ಗಿ.ಎಂ.ಎಂ., ವಿಜಾಪುರ ಜಿಲ್ಲೆ ಶಾಸನ ಸೂಚಿ, ಶಾ.ಸಂ. ೨೨ ವಿಜಾಪುರ

೮೪ ಲಕ್ಷ್ಮಣ್ ತೆಲಗಾವಿ, ಮೌರ್ಯ ಮತ್ತು ಶಾತವಾಹನ ಯುಗ, ೨೦೦೨, ಪುಟ- ೧೧೬

# ಅಧ್ಯಾಯ: ನಾಲ್ಕು
# ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು

# ಅಧ್ಯಾಯ : ನಾಲ್ಕು

## ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸ್ಥಿತಿಗತಿಗಳು

ಸಮಾಜದಲ್ಲಿ ಮುಖ್ಯವಾಗಿದ್ದೂ ಅಮುಖ್ಯವೆಂದು ಪರಿಗಣಿಸಲ್ಪಟ್ಟ ಮಹಿಳೆಯರು ಈ ಪುರುಷಶಾಹಿ ವ್ಯವಸ್ಥೆಯಲ್ಲಿ ದುರ್ಬಲರಾಗಿರುವುದು ಮೇಲ್ನೋಟಕ್ಕೆ ಕಂಡುಬರುವುದು. ಪುರುಷಶಾಹಿ ವ್ಯವಸ್ಥೆಯು ಎಲ್ಲಾ ರಂಗಗಳಲ್ಲೂ ತನ್ನ ಕದಂಭಬಾಹುವನ್ನು ಚಾಚಿರುವ ಈ ಸಂದರ್ಭದಲ್ಲಿ ಮಹಿಳೆಯು ಪುರುಷನಿಗೆ ಸಮಾನವಾಗಿ ಗೋಚರಿಸುವುದು ಪುರುಷವರ್ಗಕ್ಕೆ ಸಹಿಸಲಸಾಧ್ಯವಾದ ವಿಚಾರವಾಗಿದೆ. ಹೀಗಾಗಿಯೇ ಅವಳನ್ನು ಅಬಲೆಯಂದು ಕರೆದು ಮೂಲೆಗುಂಪಾಗಿಸಿರುವುದು. ಮಹಿಳೆಯು ಪುರುಷನಿಗೆ ಕೇವಲ ಭೋಗದ ವಸ್ತುವಾಗಿ ಮಾತ್ರ ಕಾಣುವಳು. ಅದರಾಚೆಗೆ ಅವಳಿಗೂ ಒಂದು ಜೀವವಿದೆ, ಮನಸ್ಸಿದೆ ಎಂಬ ಪ್ರಜ್ಞೆಯೇ ಪುರುಷಶಾಹಿ ವ್ಯವಸ್ಥೆಗೆ ಇಲ್ಲವೇನೊ. ಮಹಿಳೆಯನ್ನು ದಲಿತರಲ್ಲಿಯೇ ದಲಿತಳೆಂದು ಪರಿಗಣಿಸಲಾಗುತ್ತಿದೆ.

"ಹೆಣ್ಣನ್ನು ನರಕಕ್ಕೆ ದಾರಿ ಎಂದವರು ಶಂಕರಾಚಾರ್ಯರು. ಯುರೋಪಿನ ಧರ್ಮಭೋದಕನಾದ ಟ್ಯಾರ್ಟ್ಯೂಯಿಲಿನ್ ಎಂಬ ವ್ಯಕ್ತಿಯು ಮಹಿಳೆ ಸೈತಾನಿನ ಬಾಗಿಲು, ದೈವೀ ನಿಯಮ ಅಥವಾ ಧರ್ಮವನ್ನು ಪರಿತ್ಯಜಿಸುವ ಮೊಟ್ಟಮೊದಲ ವ್ಯಕ್ತಿ ಎಂದು ತಿಳಿಸುತ್ತಾನೆ. ನಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂದು ಮನು ತಿಳಿಸಿರುವನು"[1] ಹೆಣ್ಣು ಕತ್ತಿಯ ಅಲುಗಿನಂತೆ, ಅವಳು ಭೋಗದ ವಸ್ತು ಎಂದು ಮನುಸ್ಮೃತಿ ತಿಳಿಸುವುದು. ಅಂದರೆ ಹಿಂದಿನಿಂದಲೂ ಸಾಮಾಜಿಕವಾಗಿ ಎರಡನೇ ದರ್ಜೆಯಲ್ಲಿರಿಸಲಾಗಿದೆಯೇ ಹೊರತು ಮೊದಲಿನ ಸ್ಥಾನ ಅವಳಿಗೆ ಪುರುಷಶಾಹಿ ದೊರಕಿಸಿಯೇ ಕೊಟ್ಟಿಲ್ಲ.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ಮುಕ್ತಕಾಮದಲ್ಲಿ ತೊಡಗುವ ಪುರುಷರಿಗೆ ಯಾವ ಕಳಂಕವೂ ತಾಗಲಾರದು. ಆದರೆ ಮಹಿಳೆ ಮುಕ್ತಕಾಮದಲ್ಲಿ ತೊಡಗಿದರೆ ಸಾಮಾಜಿಕವಾಗಿ ಬಹಿಷ್ಕಾರಕ್ಕೆ ಒಳಗಾಗುವಳು. ಅವಳನ್ನು ಅಧರ್ಮೀಯಳೆಂದೂ ಕಳಂಕದಿಂದ ಕೂಡಿದವಳೆಂದೂ ಭಾವಿಸಲಾಗುವುದು.

ಇಂತಹ ಪುರುಷಶಾಹಿ ನೀತಿ ನಿಯಮಗಳಿಂದ ಸಾಮಾಜಿಕವಾಗಿ ಮಹಿಳೆ ಹೆಚ್ಚು ಕುಬ್ಜಳಾಗುತ್ತಾಳೆ. ಮಹಿಳೆಯನ್ನು ತನ್ನ ಕಾಮತೃಷೆಗೆ ಬಳಸಿಕೊಳ್ಳುವ ಪುರುಷನು ನಿರಾಪರಾಧಿಯೆಂದು ಬಿಂಬಿತವಾದರೆ, ಅವನ ಬಳಕೆಗೆ ಒಳಗಾಗುವ ಮಹಿಳೆ ಅಪರಾಧಿಯೆಂದು ಪರಿಗಣಿತಳಾಗುತ್ತಾಳೆ.

ಲೈಂಗಿಕ ಕಾರ್ಯಕರ್ತೆಯರಾಗಿ ಸಮಾಜದಲ್ಲಿ ಗುರುತಿಸಿಕೊಂಡಿರುವ ಮಹಿಳೆಯರನ್ನು ಅಧ್ಯಯನಕ್ಕಾಗಿ ಸಂದರ್ಶನ ನಡೆಸುವುದು ಅಷ್ಟೇನೂ ಸುಲಭವಾಗಿರಲಿಲ್ಲ. ಅವರು ಹಣಕ್ಕೆ ತಮ್ಮ ದೇಹವನ್ನು ಸುಲಭವಾಗಿ ಹಂಚಿಕೊಳ್ಳಬಲ್ಲರು. ಆದರೆ ತಮ್ಮ ವೈಯಕ್ತಿಕ ಬದುಕಿನ ನೋವು ನಲಿವುಗಳನ್ನು ಅಷ್ಟು ಸುಲಭವಾಗಿ ಹೊರಹಾಕಲಾರರು. ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಸಂಚರಿಸಿ ಹಲವು ಅಡ್ಡೆಗಳು, ರಾಷ್ಟ್ರೀಯ ಹೆದ್ದಾರಿ, ರೈಲ್ವೆ ನಿಲ್ದಾಣ, ಬಸ್ ನಿಲ್ದಾಣ ಇತ್ಯಾದಿ ಸ್ಥಳಗಳಲ್ಲಿ ಓಡಾಡಿ ಸುಮಾರು ನಾಲ್ಕುನೂರಕ್ಕೂ ಹೆಚ್ಚು ಲೈಂಗಿಕ ಕಾರ್ಯಕರ್ತೆಯರನ್ನು ಗುರುತಿಸಲಾಯಿತು. ನಾಲ್ಕು ನೂರು ಲೈಂಗಿಕ ಕಾರ್ಯಕರ್ತೆಯರಲ್ಲಿ ಪೂರ್ಣವಾಗಿಯಲ್ಲದಿದ್ದರೂ ಅಲ್ಪಸ್ವಲ್ಪ ತಮ್ಮ ವೈಯಕ್ತಿಕ ಬದುಕಿನ ಕುರಿತು ಸುಮಾರು ಎರಡು ನೂರರಷ್ಟು ಮಹಿಳೆಯರಿಂದ ಮಾಹಿತಿ ಪಡೆಯಲು ಸಾಧ್ಯವಾಯಿತು. ಇದರಲ್ಲಿ ಮುಖ್ಯವಾಗಿ ಅವರ ಕೌಟಂಬಿಕ ಹಿನ್ನೆಲೆ, ಧಾರ್ಮಿಕ ಹಿನ್ನೆಲೆ, ಆರ್ಥಿಕ, ಶೈಕ್ಷಣಿಕ ಹಿನ್ನೆಲೆಗಳನ್ನು ತಿಳಿಯಲು ಪ್ರಯತ್ನಿಸಲಾಯಿತು. ಅವುಗಳ ವಿವರಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

### ೪.೧ ಸಾಮಾಜಿಕ ಸ್ಥಿತಿಗತಿ

ಸಾಮಾಜಿಕವಾಗಿ ಪುರುಷನ ನಡೆಯಲ್ಲಿ ತಪ್ಪುಗಳಾದರೆ ತಪ್ಪೆಂದು ಪರಿಗಣಿಸುವುದು ಅಪರೂಪ. ಆದರೆ ಅದೇ ತಪ್ಪುಗಳನ್ನು ಮಹಿಳೆ ಮಾಡಿದರೆ ಪುರುಷಶಾಹಿ ವ್ಯವಸ್ಥೆಯು ಹೆಣ್ಣನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಹೆಣ್ಣು ಸಾಮಾಜಿಕವಾಗಿ ಬಹಿಷ್ಕೃತಳಾಗುತ್ತಾಳೆ. ಉದಾಹರಣೆಗೆ ಗಂಡು ಪರಸ್ತ್ರೀಯರ ಜೊತೆಗೆ ಅನೈತಿಕವಾಗಿ ನಡೆದುಕೊಂಡರೆ ಅವನಿಗೆ ಸಾಮಾಜಿಕವಾಗಿ ಅಷ್ಟೇನೂ ಘಾಸಿಯಾಗದು. ಆಳುವವನಿಗೆ ಅರವತ್ತು ಜನ ಹೆಣ್ಣುಗಳು ಎಂಬ ಗಾದೆಯನ್ನು ಪುರುಷನೇ ಸ್ವಯಂ ಸೃಷ್ಟಿಸಿಕೊಂಡಿರುವನೇನೊ. ಆದರೆ ಅದೇ ಮಾತು ಮಹಿಳೆಗೆ ಅನ್ವಯವಾಗುವುದಿಲ್ಲ. ಅವಳು ಪರಪುರುಷನೊಂದಿಗೆ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದು ಅಕ್ಷಮ್ಯ ಅಪರಾಧವೆಂದೇ ಪುರುಷ ಪ್ರಧಾನ ವ್ಯವಸ್ಥೆ ಭಾವಿಸುತ್ತದೆ. ಮೇಲ್ವರ್ಗದ ಸಮಾಜದ ರೀತಿ ರಿವಾಜುಗಳಲ್ಲಿ ಕಂಡುಬರುವ ಸಾಮಾನ್ಯ ವಿಚಾರವಿದು.

ಸಾಮಾಜಿಕವಾಗಿ ಲೈಂಗಿಕ ಕಾರ್ಯಕರ್ತೆಯಾದವರ ಕೌಟಂಬಿಕ ಹಿನ್ನೆಲೆಯನ್ನು ಮೊದಲಿಗೆ ನೋಡಲಾಗಿದೆ.

#### ೪.೧.೧ ಕೌಟಂಬಿಕ ಹಿನ್ನೆಲೆ

- ಲೈಂಗಿಕ ಕಾರ್ಯಕರ್ತೆಯರಲ್ಲಿ ಬಹುತೇಕ ಕುಟುಂಬದ ಪುರುಷರು ತಮ್ಮ ಕುಟುಂಬದ ಕುರಿತು

ನಿಷ್ಕಾಳಜಿ ತೋರಿಸುವವನಾಗಿರುತ್ತಾನೆ. ಇಲ್ಲವೇ ಗಂಡು ದಿಕ್ಕಿಲ್ಲದ ಕುಟುಂಬದಿಂದ ಮಹಿಳೆ ಬಂದಿರುತ್ತಾಳೆ.

• ದುಡಿದು ಸಾಕಲಾಗದ ಪುರುಷನು ಮನೆಯ ಒಡೆಯನಾಗಿರುತ್ತಾನೆ.

• ತಂದೆ ತಾಯಿಯರ ನಿರಂತರ ಜಗಳದಿಂದ ರೋಸಿ ಮನೆಬಿಟ್ಟು ಹೊರನಡೆದ ಮಹಿಳೆ

• ಪಾಲಕರ ಅತಿಯಾದ ಮಧ್ಯ ಸೇವನೆ

• ಬಡತನ

• ಧಾರ್ಮಿಕ ಕಾರಣಗಳಿಗಾಗಿ ವೇಶ್ಯೆಯರಾದವರು

ತಳಸಮುದಾಯಕ್ಕೆ ಸೇರಿ ಪರರಲ್ಲಿ ಕೆಲಸ ಮಾಡುವ ಕುಟುಂಬಕ್ಕೆ ಸೇರಿರುವುದು –ಹೀಗೆ ನಾನಾ ಕಾರಣಗಳಿಂದ ಹದಿಹರೆಯದ ಹೆಣ್ಣು ವೇಶ್ಯಾವಾಟಿಕೆಗೆ ಕಾಲಿರಿಸುವಂತಾಗಿರುತ್ತದೆ ಎಂಬುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದ ಸಂಗತಿ.

**೪.೧.೨ ಬಳ್ಳಾರಿ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಕೌಟಂಬಿಕ ವಿವರ**

ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಕೂಡ್ಲಿಗಿ, ಬಳ್ಳಾರಿ, ಕಮಲಾಪುರ, ಕಂಪ್ಲಿ ಇತ್ಯಾದಿ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರನ್ನು ಸಂದರ್ಶಿಸಲಾಯಿತು. ಅದರಲ್ಲಿ ೭೫ ಜನ ಕೌಟಂಬಿಕ ಹಿನ್ನೆಲೆಯ ಕುರಿತು ವಿವರಿಸಿದರೆ ಇನ್ನೂ ೨೫ ಜನ ತಮ್ಮ ಕುಟುಂಬದ ಹಿನ್ನೆಲೆ ಕುರಿತು ಏನೊಂದು ವಿಷಯವನ್ನೂ ತಿಳಿಸದೆ ಮೌನವಹಿಸಿದರು.

**ಕೋಷ್ಟಕ ೪.೧.೨: ಬಳ್ಳಾರಿ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಕೌಟಂಬಿಕ ವಿವರ**

| ಜಿಲ್ಲೆ | ಕುಟುಂಬದ ಹಿನ್ನೆಲೆ ಕುರಿತು ವಿವರಿಸಿದ ಮಹಿಳೆಯರು | ಕುಟುಂಬದ ಹಿನ್ನೆಲೆ ಕುರಿತು ಮಾಹಿತಿ ನೀಡದ ಮಹಿಳೆಯರು |
|---|---|---|
| ಬಳ್ಳಾರಿ | ೭೫ | ೨೫ |
| ಕೊಪ್ಪಳ | ೮೦ | ೨೦ |
| **ಒಟ್ಟು** | ೧೫೫ | ೪೫ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಕೊಪ್ಪಳ ಗಂಗಾವತಿ, ಕಾರಟಗಿ, ಹುಲುಗಿ, ಆನೆಗೊಂದಿ ಇತ್ಯಾದಿ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರನ್ನು ಸಂದರ್ಶಿಸಲಾಗಿ ೮೦ ಜನ ತಮ್ಮ ಕೌಟಂಬಿಕ ಹಿನ್ನೆಲೆಯ ಕುರಿತು ವಿವರಿಸಿದರೆ ಇನ್ನೂ ೨೦ ಜನ ಮಾಹಿತಿ ಹಂಚಿಕೊಳ್ಳಲು ನಿರಾಕರಿಸಿದರು.

ಮಾಹಿತಿ ನೀಡಿದ ಬಹುಪಾಲು ಮಹಿಳೆಯರು ಕೆಳಸಮುದಾಯಗಳಿಂದ ಬಂದವರಾಗಿರುವರು. ಅವುಗಳ ವಿವರ ಈ ಕೆಳಗಿನಂತಿದೆ.

**೪.೧.೩ ಬಳ್ಳಾರಿ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರು**

ಬಳ್ಳಾರಿ ಜಿಲ್ಲೆಯಲ್ಲಿ ಮಾದಿಗ ಸಮುದಾಯದ ೨೨ ಮಹಿಳೆಯರು, ಚಲವಾದಿ ಸಮುದಾಯದ ೧೨ ಮಹಿಳೆಯರು,

**ಕೋಷ್ಟಕ ೪.೧.೩: ಬಳ್ಳಾರಿ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸಂ | ಸಮುದಾಯ | ಸಂಖ್ಯೆ |
|---|---|---|
| ೧ | ಮಾದಿಗ | ೨೨ |
| ೨ | ಚಲವಾದಿ | ೧೨ |
| ೩ | ನಾಯಕ | ೨೫ |
| ೪ | ಬೆಸ್ತ | ೧೮ |
| ೫ | ಕುರುಬ | ೦೩ |
| ೬ | ಕಾಪು | ೦೬ |
| ೭ | ಕಮ್ಮ | ೦೩ |
| ೮ | ಲಿಂಗಾಯತ | ೦೨ |
| ೯ | ಇತರೆ | ೦೯ |
| | **ಒಟ್ಟು** | ೧೦೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ನಾಯಕ ಸಮುದಾಯದ ೨೫ ಮಹಿಳೆಯರು, ಬೆಸ್ತ ಸಮುದಾಯದ ೧೮, ಕುರುಬ ೩, ಕಾಪು ೬, ಕಮ್ಮ ೩, ಲಿಂಗಾಯತ ೨, ಇತರೆ ಸಮುದಾಯಗಳಲ್ಲಿ ಮುಸ್ಲಿಂ ೪, ಕೊರಮ ೪, ಲಿಂಗಾಯತ ೨, ವೈಶ್ಯ ೧ ಸಮುದಾಯದವರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಮುಖಾಮುಖಿಯಾಗಿರುವರು.

**೪.೧.೪ ಕೊಪ್ಪಳ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರು**

ಕೊಪ್ಪಳ ಜಿಲ್ಲೆಯಲ್ಲಿ ಮಾದಿಗ ಸಮುದಾಯದ ೨೦ ಮಹಿಳೆಯರು, ಚಲವಾದಿ ಸಮುದಾಯದ ೧೨, ಲಂಬಾಣಿ ೭, ನಾಯಕ ಸಮುದಾಯದ ೧೯, ಬೆಸ್ತ ೧೧, ಕುರುಬ ೪, ಕಾಪು ೭, ಕಮ್ಮ ೭, ಲಿಂಗಾಯತ ೩, ಇತರೆ ೧೦ ಮಹಿಳೆಯರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ್ತಿದ್ದಾರೆ.

**ಕೋಷ್ಟಕ: ೪.೧.೪ ಕೊಪ್ಪಳ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರು**

| ಕ್ರಸಂ | ಸಮುದಾಯ | ಸಂಖ್ಯೆ |
|---|---|---|
| ೧ | ಮಾದಿಗ | ೨೦ |
| ೨ | ಚಲವಾದಿ | ೧೨ |
| ೩ | ಲಂಬಾಣಿ | ೦೭ |
| ೪ | ನಾಯಕ | ೧೯ |
| ೫ | ಬೆಸ್ತ | ೧೧ |
| ೬ | ಕುರುಬ | ೦೪ |
| ೭ | ಕಾಪು | ೦೭ |
| ೮ | ಕಮ್ಮ | ೦೭ |
| ೯ | ಲಿಂಗಾಯತ | ೦೩ |
| | ಇತರೆ | ೧೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಮುಖ್ಯವಾಗಿ ದೇವದಾಸಿ ಪದ್ಧತಿಗೆ ಒಳಪಟ್ಟ ಮಹಿಳೆಯರೇ ವೇಶ್ಯಾವಾಟಿಕೆಯಲ್ಲಿ ತೊಡಗಿರುವುದು ಕಂಡುಬಂದಿತು. ಇದರಲ್ಲಿ ತಳಸಮುದಾಯಗಳಿಗೆ ಸೇರಿದವರ ಪ್ರಮಾಣವೇ ಹೆಚ್ಚಾಗಿದೆ. ದೇವದಾಸಿಯ ಹೊರತಾಗಿ ಯೌವ್ವನದಲ್ಲಿಯೇ ವಿಧವೆಯರಾದವರು, ಆರ್ಥಿಕವಾಗಿ ಬಡತನವಿದ್ದು ಬೇರೆ ದುಡುಮೆ ಇರದೆ ಅನಿವಾರ್ಯವಾಗಿ ಕುಟುಂಬದ ಜವಾಬ್ದಾರಿಯನ್ನು ಹೊತ್ತ ಮಹಿಳೆಯರು ತಮಗೆ ಇಷ್ಟವಿರದೇ ಇದ್ದರೂ ವೇಶ್ಯಾವಾಟಿಕೆಗೆ ಇಳಿದಿರುವುದು ಕಂಡುಬಂದಿತು.

ಗ್ರಾಮೀಣ ಪರಿಸರದಲ್ಲಿ ವೇಶ್ಯಾವಾಟಿಕೆ ಇರುವುದಾದರೂ ಅಲ್ಲಿಯ ಮಹಿಳೆಯರು ನಗರ ಪ್ರದೇಶಗಳಿಗೆ ಹೋಗಿ ಆ ವೃತ್ತಿಯಲ್ಲಿ ತೊಡಗುವುದೇ ಹೆಚ್ಚು. ಗ್ರಾಮೀಣ ಪರಿಸರದಲ್ಲಿ ಗಿರಾಕಿಗಳನ್ನು ಹಿಡಿಯುವುದು ಕಷ್ಟಸಾಧ್ಯದ ಕೆಲಸ. ಗಿರಾಕಿ ದೊರೆತರೂ ಅವನಿಂದ ಆರ್ಥಿಕವಾಗಿ ಹೆಚ್ಚು ಲಾಭವಾಗುವುದಿಲ್ಲ. ಜೊತೆಗೆ ಸಾರ್ವತ್ರಿಕವಾಗಿ ತಾನು ವೇಶ್ಯೆ ಎಂದು ತೋರಿಸಿಕೊಂಡರೆ ನೆರೆಹೊರೆಯವರಲ್ಲಿ ಗೌರವ ದೊರೆಯಲಾರದೆಂಬ ಭಯ ಇರುವುದೇ ಇದಕ್ಕೆ ಮೂಲ ಕಾರಣ.

ಇಂದು ತಳಸಮುದಾಯಗಳಲ್ಲಿ ಆಧುನಿಕ ಶಿಕ್ಷಣದ ಪ್ರಭಾವ ಹೆಚ್ಚಾಗುತ್ತಿದೆ. ಓದಿನ ಕಡೆ ಯುವಕರು ಹೆಚ್ಚು ಆಸಕ್ತಿ ತಾಳುತ್ತಿದ್ದಾರೆ. ಕೇರಿಯ ಅಥವಾ ಕಾಲೋನಿಯ ಹುಡುಗಿಯರನ್ನು ದೇವದಾಸಿಯನ್ನಾಗಿಸಿದರೆ ಅಂತಹ ಕುಟುಂಬಗಳಿಗೆ ಬಹಿಷ್ಕಾರ ಹಾಕುವ ಪರಿಪಾಟ ಇದೆ ಎಂದು

ದಲಿತ ಕೇರಿಯ ಯುವಕರು ಅಭಿಪ್ರಾಯ ಪಡುತ್ತಾರೆ. ಆದರೆ ದಲಿತ ಕೇರಿಯೊಳಗೆ ದೇವದಾಸಿಯಾಗುವವರ ಪ್ರಮಾಣ ಕಡಿಮೆಯಾಗಿದೆಯೇ ಹೊರತು ಪೂರ್ಣವಾಗಿ ಅದು ತಡೆಯಲ್ಪಟ್ಟಿಲ್ಲ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಪಟ್ಟಣದೊಳಗಿನ ಹೊಸಪೇಟೆ ರಸ್ತೆಯೊಳಗೆ ಸಾಲು ಡಬ್ಬಿ ಅಂಗಡಿಗಳು ನೋಡಲು ಸಿಗುತ್ತವೆ. ಅವುಗಳಲ್ಲಿ ಬೀಡಿ, ಸಿಗರೇಟು, ಗುಟುಕಾ ಇತ್ಯಾದಿ ಬೆರಳೆಣಿಕೆಯಷ್ಟು ವಸ್ತುಗಳು ಮಾರಾಟಕ್ಕಿರುವುದು ಕಾಣಸಿಗುತ್ತದೆ. ಡಬ್ಬಿ ಅಂಗಡಿಯೊಳಗೆ ಮುದಿಜೀವಗಳು, ಗೂರಲು ಹತ್ತಿದ ರೋಗಿಷ್ಟ ಗಂಡಸರು ಕುಳಿತಿರುತ್ತಾರೆ. ಆ ಡಬ್ಬಿ ಅಂಗಡಿಗಳು ಹೆಸರಿಗಷ್ಟೇ ಗೂಡಂಗಡಿಗಳು. ಅವುಗಳ ನಿಜವಾದ ವ್ಯಾಪಾರ ಹೆಣ್ಣುಗಳ ದೇಹವನ್ನು ತಾತ್ಕಾಲಿಕವಾಗಿ ಗಂಡುಗಳಿಗೆ ಮಾರುವುದೇ ಆಗಿರುತ್ತದೆ. ಅಂಥದೇ ದೃಶ್ಯ ಗಂಗಾವತಿ ತಾಲೂಕಿನ ಸಂಗಾಪುರ, ಹನುಮನಹಳ್ಳಿ, ಸಣಾಪುರ, ಹುಲಿಗಿ ಗ್ರಾಮಗಳಲ್ಲಿಯೂ ನೋಡಬಹುದು. ಅಂಗಡಿಯಲ್ಲಿ ಕುಳಿತ ಜೀವಗಳು ಬರೀ ವ್ಯಾಪಾರದ ಮಧ್ಯವರ್ತಿಗಳು ಮಾತ್ರವಲ್ಲ, ಅದರಾಚೆಗೆ ವ್ಯಾಪಾರದ ಹೆಸರಿನಲ್ಲಿ ಬಂದ ಗಂಡು ನಿಜವಾಗಿಯೂ ಹೆಣ್ಣನ್ನು ಬಯಸಿ ಬಂದವನೋ ಅಥವಾ ಅದನ್ನು ಕಂಡುಹಿಡಿದು ಕಾನೂನಿಗೆ ಒಪ್ಪಿಸಲು ಬಂದವನೋ ಎಂಬುದನ್ನು ಸೂಕ್ಷ್ಮವಾಗಿ ಗಮನಿಸುತ್ತಾನೆ. ಮಧ್ಯವರ್ತಿಗೆ ಅನುಮಾನ ನಿವಾರಣೆಯಾಗುವವರೆಗೂ ಗಿರಾಕಿಗಳಿಗಾಗಿ ಕಾಯ್ದಿರಿಸಿದ ಹೆಣ್ಣುಗಳನ್ನು ತೋರಿಸುವುದಿಲ್ಲ. ಅನುಮಾನ ಪರಿಹಾರವಾದ ನಂತರವೇ ಹೆಣ್ಣುಗಳನ್ನು ಅಂಗಡಿ ಬಳಿ ಕರೆದು ವ್ಯಾಪಾರ ಮುಂದುವರೆಸುವನು. ಮೈಹಂಚಿಕೊಳ್ಳುವ ಹೆಣ್ಣಿನ ವಯಸ್ಸು, ಅಲಂಕಾರ ಇತ್ಯಾದಿಗಳ ಮೇಲೆಯೇ ಬೆಲೆ ನಿಗದಿಯಾಗುವುದು. ಒಂದು ಹೆಣ್ಣಿಗೆ ಒಂದು ತಾಸಿಗೆ ಒಂದು ನೂರು ರೂಪಾಯಿಯಿಂದ ೫೦೦, ೧೦೦೦ ರೂಪಾಯಿಗಳವರೆಗೂ ವ್ಯಾಪಾರ ನಡೆಯುವುದು. ಇಲ್ಲವೆ ಇಡೀ ರಾತ್ರಿಗೆ ಇಂತಿಷ್ಟೆಂದು (ರೂ ೫೦೦ ರಿಂದ ೫೦೦೦ದವರೆಗೂ ಬೆಲೆ ನಿಗದಿಪಡಿಸುವರು) ಬೆಲೆ ನಿಗದಿಗೊಂಡ ತರುವಾಯ ಗಂಡಸರನ್ನು (ವಿಟ) ನೇರವಾಗಿ ಹೆಂಗಸಿನ ಮನೆಗೇ ಕರೆದುಕೊಂಡು ಹೋಗುವರು. ರಾತ್ರಿ ಪೂರ್ತಿ ನಿಗದಿಯಾಗಿದ್ದರೆ ಅವನ ಊಟೋಪಚಾರ, ಟೀ, ಮಧ್ಯಸೇವನೆ ಇತ್ಯಾದಿಗಳ ಸೇವೆಯೂ ಲಭ್ಯವಿದ್ದು ಅದಕ್ಕೆ ಆ ವ್ಯಕ್ತಿಗೆ ತಿಳಿಯದಂತೆಯೇ ಹಣ ವಸೂಲಿ ಮಾಡುವ ಚಾಕ್ಯಚಕ್ಯತೆ ಆ ಹೆಣ್ಣುಗಳಿಗಿರುತ್ತದೆ. ಒಂದು ನೂರು ರೂಪಾಯಿಯಲ್ಲಿ ಅರ್ಧಭಾಗ ಮಧ್ಯವರ್ತಿಯಾದವನಿಗೆ ಸಲ್ಲುತ್ತದೆ. ಈ ಪಟ್ಟಣದಲ್ಲಿ ತುಂಬಾ ದುಬಾರಿಯ ವಹಿವಾಟು ಅಪರೂಪವೆಂದೇ ಹೇಳಬೇಕು. ಸಂಗಾಪುರ, ಆನೆಗೊಂದಿ, ಹನುಮನಹಳ್ಳಿಯಂತಹ ಗ್ರಾಮಗಳಲ್ಲಿ ಸ್ಥಳೀಯ ವಿಟರಿಗೆ ನಿಗದಿಯಾದ ಬೆಲೆಯೇ ಬೇರೆ, ವಿದೇಶಿಯರಿಗೆ ನಿಗದಿಯಾಗುವ ಬೆಲೆಗಳೇ ಬೇರೆಯಾಗಿರುತ್ತವೆ.

**೪.೧.೫ ಕೊಳಚೆ ಪ್ರದೇಶದ ಲೈಂಗಿಕ ಕಾರ್ಯಕರ್ತೆಯರು**

ಸರ್ಕಾರವು ನಗರ ಪ್ರದೇಶಗಳಲ್ಲಿ ಕೆಲವು ನಿರ್ದಿಷ್ಟ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಣೆ ಮಾಡಿದೆ. ಬಹುತೇಕ ನಗರ ಪ್ರದೇಶದಲ್ಲಿ ಲೈಂಗಿಕ ಕಾರ್ಯಕರ್ತೆಯರು ಕೊಳಚೆ ಪ್ರದೇಶವಾಸಿಗಳಾಗಿರುವುದೇ ಹೆಚ್ಚು. ಗ್ರಾಮೀಣ ಭಾಗದಲ್ಲಿ ಕೊಳಚೆ ಪ್ರದೇಶವೆಂದು

ಘೋಷಣೆಯಾಗಿರುವುದಿಲ್ಲವಾದರೂ ತಳಸಮುದಾಯಗಳ ಕೇರಿಗಳಿಂದ ಬಂದ ಮಹಿಳೆಯರು ಲೈಂಗಿಕ ಕಾರ್ಯಕರ್ತೆಯರಾಗಿ ಕಾರ್ಯನಿರ್ವಹಿಸುವರು. ಬಳ್ಳಾರಿ ಜಿಲ್ಲೆಯ ಬಳ್ಳಾರಿ ನಗರದಲ್ಲಿ ಬಸವನಕುಂಟೆ, ಡಿಸಿ ನಗರ, ಹೊಸಪೇಟೆ ರೈಲ್ವೆ ನಿಲ್ದಾಣದ ಹೊರವಲಯ, ಜಬ್ಬಲ, ಕೂಡ್ಲಿಗಿಯ ಹೊಸಪೇಟೆ ರಸ್ತೆ ಇತ್ಯಾದಿ ಕೊಳಚೆ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರು ನೆಲೆಸಿರುವರು.

**ಕೋಷ್ಟಕ: ೪.೧.೫ ಕೊಳಚೆ ಪ್ರದೇಶದ ಲೈಂಗಿಕ ಕಾರ್ಯಕರ್ತೆಯರು**

| ಕ್ರ.ಸ | ಜಿಲ್ಲೆ | ಕೊಳಚೆ ಪ್ರದೇಶವಾಸಿಗಳು | ಕೊಳಚೆ ಪ್ರದೇಶದ ಹೊರಗಿರುವವರು |
|---|---|---|---|
| ೧ | ಬಳ್ಳಾರಿ | ೬೫ | ೩೫ |
| ೨ | ಕೊಪ್ಪಳ | ೬೦ | ೪೦ |
| | **ಒಟ್ಟು** | **೧೨೫** | **೭೫** |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಕೊಪ್ಪಳದ ಕೊಪ್ಪಳ ರೈಲ್ವೆನಿಲ್ದಾಣದ ಹೊರವಲಯ, ಭಾಗ್ಯನಗರ, ಮುಂಡ್ರಿಗೆ ರಸ್ತೆ, ಗಂಗಾವತಿಯ ಇಲ್ಲಾಂಪುರ, ಜೂಲೈನಗರ, ಬಸ್‌ಸ್ಟ್ಯಾಂಡ್ ಹಿಂಭಾಗ, ಮಾರ್ಕೆಟ್ ಪ್ರದೇಶ, ದುರ್ಗಮ್ಮನ ಹಳ್ಳದ ಕೊಳಚೆ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರು ನೆಲೆಸಿದ್ದಾರೆ. ಶೇಕಡವಾರುಗಳಲ್ಲಿ ಹೇಳುವುದಾದರೆ ಬಳ್ಳಾರಿ ಜಲ್ಲೆಯಲ್ಲಿ ಶೇಕಡ ೬೫ರಷ್ಟು ಲೈಂಗಿಕ ಕಾರ್ತೆಕರ್ತೆಯರು ಕೊಳಚೆ ಪ್ರದೇಶದಲ್ಲಿದ್ದರೆ ಶೇಕಡ ೩೫ರಷ್ಟು ಲೈಂಗಿಕ ಕಾರ್ತೆಕರ್ತೆಯರು ಕೊಳಚೆ ಪ್ರದೇಶದ ಹೊರಗಿರುವುದು ಕಂಡುಬರುತ್ತದೆ.

ಕೊಪ್ಪಳದಲ್ಲಿ ಶೇಕಡ ೬೦ರಷ್ಟು ಲೈಂಗಿಕ ಕಾರ್ಯಕರ್ತೆಯರು ಕೊಳಚೆ ಪ್ರದೇಶದಲ್ಲಿಯೂ ಶೇಕಡ ೪೦ರಷ್ಟು ಮಹಿಳೆಯರು ಕೊಳಚೆ ಪ್ರದೇಶದ ಹೊರಗಿರುವರು.

ಒಟ್ಟಾರೆಯಾಗಿ ಎರಡೂ ಜಿಲ್ಲೆಗಳಿಂದ ನೋಡಿದಾಗ ಶೇಕಡ ೬೨.೫ ರಷ್ಟು ಲೈಂಗಿಕ ಕಾರ್ಯಕರ್ತೆಯರು ಕೊಳಚೆ ಪ್ರದೇಶದಿಂದಲೂ ಶೇಕಡ ೩೭.೫ರಷ್ಟು ಲೈಂಗಿಕ ಕಾರ್ಯಕರ್ತೆಯರು ಕೊಳಚೆ ಪ್ರದೇಶದಿಂದ ಹೊರಗಿರುವವರೂ ಆಗಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ.

**೪.೧.೬ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ**

ಲೈಂಗಿಕ ಕಾರ್ಯಕರ್ತೆಯರಲ್ಲಿ ಎರಡು ವಿಧದಲ್ಲಿ ಕಂಡುಬಂದಿದ್ದಾರೆ. ಪೂರ್ಣಾವಧಿ ಲೈಂಗಿಕ ಕಾರ್ತೆಕರ್ತೆಯರು ಹಾಗೂ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರಾದವರು. ಸಾಮಾನ್ಯವಾಗಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು ದೇವದಾಸಿಯರಾಗಿರುತ್ತಾರೆ. ಇವರು ಕುಟುಂಬದ ಎಲ್ಲಾ ನಿರ್ಬಂಧಗಳನ್ನು ದಾಟಿ ಬಂದವರು. ಇವರಿಗೆ ಯಾರೂ ತಡೆಯೊಡ್ಡುವವರಿರುವುದಿಲ್ಲ. ಹರೆ ಇರುವವರೆಗೂ ಈ ವೃತ್ತಿಯಲ್ಲಿ ತೊಡಗುವ ಇವರು ಮಧ್ಯವಯಸ್ಕರಾದ ಮೇಲೆ ಇತರೆ

ಲೈಂಗಿಕ ಕಾರ್ಯಕರ್ತೆಯರಿಗೆ ಆಶ್ರಯ ನೀಡುವ ಮೂಲಕ ಅಡ್ಡೆಗಳನ್ನು ನಡೆಸುವರು. ಇಲ್ಲವೆ ಭಿಕ್ಷಾಟನೆಯನ್ನು ಆಯ್ಕೆಮಾಡಿಕೊಳ್ಳುವರು.

ಎರಡನೇಯ ವರ್ಗದ ಲೈಂಗಿಕ ಕಾರ್ಯಕರ್ತರು ಬಹುತೇಕ ಅವಿವಾಹಿತ ಮಹಿಳೆ, ಮದುವೆಯಾಗಿ ಸಂಸಾರವಿದ್ದೂ ಕುಟುಂಬದ ಆರ್ಥಿಕ ಹೊರೆ ಹೊತ್ತುಕೊಂಡವರು, ವಿಧವೆ ಇತ್ಯಾದಿ ವರ್ಗಕ್ಕೆ ಸೇರಿದವರಾಗಿರುವರು. ಅವಿವಾಹಿತ ಮಹಿಳೆಯರಲ್ಲಿ ಬಹುತೇಕ ವಿದ್ಯಾರ್ಥಿಗಳಾಗಿದ್ದು ಆಧುನಿಕ ಜಗತ್ತಿನ ಫ್ಯಾಷನ್ನಿಗೆ, ದುಂದುವೆಚ್ಚಗಳಿಗೆ ಮಾರುಹೋದವರು. ಇವರು ತಮ್ಮ ಕುಟುಂಬದಿಂದ ದೂರದ ಹಾಸ್ಟೆಲ್ ಅಥವಾ ಪೇಯಿಂಗ್ ಗೆಸ್ಟ್ ವಸತಿಗಳು, ಇಲ್ಲವೇ ಪ್ರತ್ಯೇಕವಾಗಿ ರೂಂಗಳನ್ನು ಮಾಡಿಕೊಂಡು ವಿವಿಧ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿರುವವರು. ಇವರ ಹೊರತಾಗಿ ಹದಿಹರೆಯದಲ್ಲಿಯೇ ವಿಧವೆಯಾಗಿರುವ ಮಹಿಳೆಯು ತನ್ನ ದೈಹಿಕ ಚಾಪಲ್ಯ ತೀರಿಸಿಕೊಳ್ಳುವುದು ಮಾತ್ರವಾಗಿರದೆ ಅಲ್ಪ ಪ್ರಮಾಣದ ಆರ್ಥಿಕ ಲಾಭಗಳನ್ನೂ ಬಯಸುವವರಾಗಿರುವರು. ಇವರು ಕುಟುಂಬದೊಳಗಿದ್ದೂ ಕುಟುಂಬಕ್ಕೆ ತಿಳಿದೋ, ತಿಳಿಯದೆಯೋ ವೇಶ್ಯಾವಾಟಿಕೆ ಜಾಲಕ್ಕೆ ಸಿಲುಕಿರುತ್ತಾರೆ. ಮತ್ತೊಂದು ವರ್ಗದ ಮಹಿಳೆಯರು ತುಂಬು ಕುಟುಂಬದಲ್ಲಿದ್ದು, ಗಂಡನು ಆರ್ಥಿಕವಾಗಿ ದುರ್ಬಲನಾಗಿರುವುದರಿಂದ ಅನಿವಾರ್ಯವಾಗಿ ಕುಟುಂಬದ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತು ವೇಶ್ಯಾವಾಟಿಕೆಯನ್ನು ಅನಿವಾರ್ಯವಾಗಿ ಒಪ್ಪಿಕೊಂಡಿರುವವರು. ಬಹುತೇಕ ಇವರೆಲ್ಲ ಮಧ್ಯವರ್ತಿಗಳ ಮೂಲಕವೇ ವ್ಯವಹರಿಸುವವರಾಗಿದ್ದು, ಸಾಮಾಜಿಕವಾಗಿ ತಮ್ಮ ಮರ್ಯಾದೆಗೆ ಕುಂದು ಬಾರದ ರೀತಿಯಲ್ಲಿ ಜಾಗ್ರತೆವಹಿಸಿ ದಂಧೆಯಲ್ಲಿ ತೊಡಗಿರುತ್ತಾರೆ. ಈ ತರಹದ ಲೈಂಗಿಕ ಕಾರ್ಯಕರ್ತೆಯರು ನಿರಂತರವಾಗಿ ಈ ವೃತ್ತಿಯಲ್ಲಿರದೆ ವಾರಕ್ಕೊಮ್ಮೆಯೋ, ತಿಂಗಳಿಗೊಮ್ಮೆಯೋ ಸಾಂದರ್ಭಿಕ ಅನುಕೂಲಗಳನ್ನು ನೋಡಿಕೊಂಡು ವ್ಯವಹರಿಸುವವರಾಗಿರುವರು. ಬಹುತೇಕ ಈ ವರ್ಗದ ಮಹಿಳೆಯರು ಹೊರ ಪ್ರಪಂಚಕ್ಕೆ ತುಂಬಾ ಗೌರವಾನ್ವಿತರಂತೆ ಕಾಣುವವರಾಗಿದ್ದು ತೆರೆಮರೆಯಲ್ಲಿಯೇ ವೃತ್ತಿಯಲ್ಲಿ ತೊಡಗಿರುವರು. ಇಂತಹ ಮಹಿಳೆಯರಿಗೆ ಹೆಚ್ಚಿನ ಬೆಲೆ ಇದ್ದು ಇವರನ್ನು ಲಾಡ್ಜ್ ಅಥವಾ ಪ್ರವಾಸಿ ತಾಣ ಇತ್ಯಾದಿಗಳಲ್ಲಿ ಮಾತ್ರ ವ್ಯವಹರಿಸುತ್ತಾರೆ.

**ಕೋಷ್ಟಕ: ೪.೧.೬ ಪೂರ್ಣಾವಧಿ ಮತ್ತು ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸ | ಜಿಲ್ಲೆ | ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು | ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರು |
|---|---|---|---|
| ೧ | ಬಳ್ಳಾರಿ | ೮೫ | ೧೫ |
| ೨ | ಕೊಪ್ಪಳ | ೭೦ | ೩೦ |
| | ಒಟ್ಟು | ೧೫೫ | ೪೫ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಬಳ್ಳಾರಿ ಜಿಲ್ಲೆಯಲ್ಲಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರಾದವರ ಸಂಖ್ಯೆ ೮೫ ಇದೆ. ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರಾದವರ ಸಂಖ್ಯೆ ೧೫ ಇದೆ. ಕೊಪ್ಪಳ ಜಿಲ್ಲೆಯಲ್ಲಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರಾದವರ ಸಂಖ್ಯೆ ೭೦ ಇದೆ. ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರಾದವರ ಸಂಖ್ಯೆ ೩೦ ಇದೆ. ಎರಡೂ ಜಿಲ್ಲೆಗಳನ್ನು ಸೇರಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು ೧೫೫, ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರು ೪೫ ಜನ ಇರುವರು.

ಶೇಕಡವಾರುಗಳಲ್ಲಿ ಹೇಳುವುದಾದರೆ ಶೇಕಡ ೭೭.೫ರಷ್ಟು ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರಿದ್ದರೆ ಶೇಕಡ ೨೨.೫ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರಿರುವರು.

**೪.೧.೭ ಲೈಂಗಿಕ ಕಾರ್ಯಕರ್ತೆಯರು ವೃತ್ತಿಯಲ್ಲಿ ತೊಡಗುವ ಸಾಮಾಜಿಕ ಪರಿಸರ**

ಲೈಂಗಿಕ ಕಾರ್ಯಕರ್ತೆಯರು ಮೂರು ವಿಧದ ಸ್ಥಳಗಳಲ್ಲಿ ವೃತ್ತಿಯಲ್ಲಿ ನಿರತರಾಗಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿತು. ಮೊದಲ ವರ್ಗದ ಲೈಂಗಿಕ ಕಾರ್ಯಕರ್ತೆಯರು ಮುದಿ ವೇಶ್ಯೆಯರು ಅಥವಾ ಅವರ ಮೂಲಕ ಗೂಂಡಾಗಳು ನಡೆಸುವ ವೇಶ್ಯಾ ಅಡ್ಡೆಗಳಲ್ಲಿ ಲೈಂಗಿಕ ವೃತ್ತಿಯಲ್ಲಿ ತೊಡಗುತ್ತಾರೆ. ಎರಡನೇ ವರ್ಗದ ಲೈಂಗಿಕ ಅಲ್ಪಸಂಖ್ಯಾತರು ಸಾರ್ವಜನಿಕ ಸ್ಥಳಗಳಾದ ದೇವಾಲಯಗಳ ಮುಂಭಾಗದ ಪರಿಸರ, ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ರಾಷ್ಟ್ರೀಯ ಹೆದ್ದಾರಿಗಳಲ್ಲಿ ನಿಂತು ಗಿರಾಕಿಗಳನ್ನು ಆಕರ್ಷಿಸುತ್ತಾರೆ. ಮೂರನೇ ವರ್ಗದ ಲೈಂಗಿಕ ಕಾರ್ಯಕರ್ತರು ಲಾಡ್ಜ್ ಅಥವಾ ಐಷಾರಾಮಿಯಾದ ಕಾಲೋನಿಗಳ ದೊಡ್ಡ ದೊಡ್ಡ ಮನೆಗಳಲ್ಲಿ ವೃತ್ತಿಯಲ್ಲಿ ತೊಡಗುವುದನ್ನು ಕಾಣುತ್ತೇವೆ.

ಬಳ್ಳಾರಿ ಜಿಲ್ಲೆಯ ಪ್ರಸಿದ್ಧ ಪ್ರವಾಸಿ ತಾಣಗಳಲ್ಲಿ ಹಂಪಿ ಪ್ರಮುಖವಾದುದು. ಹಂಪಿ ಪರಿಸರದಲ್ಲಿ ಬೇರೆ ಬೇರೆ ಕಡೆಯಿಂದ ಪ್ರವಾಸಿಗರಾಗಿ ಬರುವವರ ದೈಹಿಕ ಆಕಾಂಕ್ಷೆಯನ್ನು ತೀರಿಸಲೆಂದೇ ಬರುವ ಲೈಂಗಿಕ ಕಾರ್ಯಕರ್ತೆಯರಿರುವರು. ಇವರಲ್ಲಿ ಪ್ರವಾಸಿಗರಂತೆ ವೇಷತೊಡುವವರು ಕೆಲವರಾದರೆ ಇನ್ನೂ ಕೆಲವರು ಆಟೋ ಡ್ರೈವರ್, ಗೈಡ್‌ಗಳ ನೆರವನ್ನೂ ಕೋರುವವರಿರುವರು. ಇಲ್ಲಿ ಲೈಂಗಿಕ ಕಾರ್ಯಕರ್ತೆಯರಾಗಿ ಕಾರ್ಯ ನಿರ್ವಹಿಸುವವರು ಬಹುತೇಕ ಕನಿಷ್ಠ ಮೂರರಿಂದ ನಾಲ್ಕು ಭಾಷೆಗಳನ್ನು ಮಾತನಾಡಬಲ್ಲರು. ಸ್ಥಳೀಯ ಕನ್ನಡ ಭಾಷೆಯೊಂದಿಗೆ ಹಿಂದಿ, ತೆಲುಗು, ತಮಿಳು ಹಾಗೂ ಇಂಗ್ಲಿಷ್‌ನಲ್ಲಿ ವ್ಯವಹರಿಸಬಲ್ಲರು. ಹಂಪಿಯೊಳಗಿನ ವಸತಿಗೃಹಗಳನ್ನು ತೆರವುಗೊಳಿಸುವ ಪೂರ್ವದಲ್ಲಿ ಇವರ ಸಂಖ್ಯೆ ಅಧಿಕವಾಗಿದ್ದಿತಂತೆ. ಇತ್ತೀಚೆಗೆ ಹಂಪಿಯೊಳಗಿನ ವಸತಿಗೃಹಗಳನ್ನು ತೆರವುಗೊಳಿಸಿದ ನಂತರ ಇವರ ಪ್ರಮಾಣ ಸ್ವಲ್ಪ ಕಡಿಮೆಯಾಗಿದೆಯಂತೆ. ಹಂಪಿ ಪರಿಸರದ ಲೈಂಗಿಕ ಕಾರ್ಯಕರ್ತೆಯರು ಕೇವಲ ಹಂಪಿ ಪರಿಸರಕ್ಕೆ ಮಾತ್ರ ಸೀಮಿತವಾಗಿರದೆ ನದಿಯಾಚೆಗಿನ ಕೊಪ್ಪಳ ಜಿಲ್ಲೆಯ ಋಷ್ಯಮುಖ, ವಿರುಪಾಪುರಗಡ್ಡೆ, ಹನುಮನಹಳ್ಳಿ, ಆನೆಗೊಂದಿ ಪರಿಸರಕ್ಕೂ ತೆರಳುವರಂತೆ. ಆಚೆ ಕಡೆಯಿಂದಲೂ ಹಂಪಿಯ ಪರಿಸರದೊಳಗೆ ಬಂದು ವೃತ್ತಿ ನಡೆಸುವ ಲೈಂಗಿಕ ಕಾರ್ಯಕರ್ತೆಯರೂ ಇದ್ದಾರೆಂದು ಸ್ಥಳೀಯರು ತಿಳಿಸುವರು. ಕೇವಲ ಸ್ಥಳೀಯರು

ಮಾತ್ರ ಇಲ್ಲಿ ಲೈಂಗಿಕ ಕಾರ್ಯಕರ್ತೆಯರಾಗಿ ಕಾರ್ಯನಿರ್ವಹಿಸುವತ್ತಾರೆಂದು ತಿಳಿಯಬೇಕಾಗಿಲ್ಲ. ಬೆಂಗಳೂರು, ಆಂಧ್ರದ ಕರ್ನೂಲು, ಗುಂತಕಲ್ಲು, ಮಹಾರಾಷ್ಟ್ರ ಇತ್ಯಾದಿ ಕಡೆಯಿಂದಲೂ ಬಂದು ವೃತ್ತಿಯಲ್ಲಿ ತೊಡಗುವ ಲೈಂಗಿಕ ಕಾರ್ಯಕರ್ತೆಯರಿರುವರೆಂಬುದು ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿದೆ. ಬಹುತೇಕ ಪ್ರವಾಸಿಗರು ಹೆಚ್ಚಾಗಿ ಬರುವ ಸೆಪ್ಟೆಂಬರ್‌ನಿಂದ ಮಾರ್ಚ್, ಏಪ್ರಿಲ್ ತಿಂಗಳವರೆಗೂ ಇಲ್ಲಿ ಲೈಂಗಿಕ ಕಾರ್ಯಕರ್ತೆಯರು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವರು. ಹಾಗೆಯೇ ಹಂಪಿ ಜಾತ್ರೆ, ಹಂಪಿ ಉತ್ಸವ, ಫಲಪೂಜೆ, ಅಮವಾಸ್ಯೆ ಇತ್ಯಾದಿ ವಿಶೇಷವಾದ ದಿನಗಳಲ್ಲಿ ವೇಶ್ಯಾವಾಟಿಕೆಯ ವಹಿವಾಟು ಹೆಚ್ಚಿನ ಪ್ರಮಾಣದಲ್ಲಿರುವುದಾಗಿ ತಿಳಿದುಬಂದಿತು. ತೋರಣಗಲ್ಲು ಸ್ಟೇಷನ್. ಇಲ್ಲಿ ಜಿಂದಾಲ್ ಕಬ್ಬಿಣ ಕಾರ್ಖಾನೆಯಿದ್ದು ಬೇರೆ ಬೇರೆ ರಾಜ್ಯಗಳಿಂದ ದುಡಿಯಲು ಕಾರ್ಮಿಕರು ಬಂದಿರುತ್ತಾರೆ. ಸ್ಥಳೀಯ ಕೂಲಿಕಾರ್ಮಿಕರೂ ಇಲ್ಲಿ ಕಂಡುಬರುತ್ತಾರೆ. ಬಹುತೇಕ ತಮ್ಮ ಕುಟುಂಬಗಳಿಂದ ದೂರವಿರುವ ಈ ಕಾರ್ಮಿಕರ ದೈಹಿಕ ಆಕಾಂಕ್ಷೆಗಳನ್ನು ಲೈಂಗಿಕ ಕಾರ್ಯಕರ್ತೆಯರು ತೀರಿಸುವರು.

ಬಸ್ ನಿಲ್ದಾಣ, ರೈಲ್ವೆ ನಿಲ್ದಾಣಗಳಲ್ಲಿ ವಿಶೇಷವಾಗಿ ಸಂಜೆಹೊತ್ತು ವಿಟರನ್ನು ಆಕರ್ಷಿಸುತ್ತಾ ನಿಲ್ಲುವ ವೇಶ್ಯೆಯರನ್ನು ಕಾಣುತ್ತೇವೆ. ಹೊಸಪೇಟೆಯೊಂದರಲ್ಲಿಯೇ ಬಸ್ ನಿಲ್ದಾಣದ ಮುಂಭಾಗದ ಕತ್ತಲು ಆವರಿಸಿದ ಸ್ಥಳದಲ್ಲಿ ನಾಲ್ಕೈದು ಹೆಂಗಸರು ಗುಂಪಾಗಿ ಇಲ್ಲವೆ ಚದುರಿದಂತೆ ಅಲ್ಲಲ್ಲಿ ನಿಂತಿರುವುದನ್ನು ಕಾಣುತ್ತೇವೆ. ಪುರುಷರಲ್ಲಿ ತಮಗೆ ಯಾರು ಗಿರಾಕಿಗಳಾಗಬಹುದೆಂಬುದನ್ನು ಅನುಭವದಿಂದಲೇ ಗುರುತಿಸಿ ಅವರಿಗೆ ಗಾಳಹಾಕುವ ಕಲೆ ಈ ಮಹಿಳೆಯರಿಗೆ ಕರಗತವಾಗಿರುತ್ತದೆ. ಹಾಗೆಯೇ ರೈಲ್ವೆ ನಿಲ್ದಾಣದಲ್ಲಿ ಫ್ಲಾಟ್‌ಫಾರಂ ಹಾಗೂ ಪ್ರವೇಶ ದ್ವಾರದ ಮುಂಭಾಗದ ಕತ್ತಲು ಆವರಿಸಿರುವ ಸ್ಥಳಗಳನ್ನು ಆಯ್ಕೆಮಾಡಿಕೊಂಡು ವಿಟರಿಗಾಗಿ ಕಾಯುವ ಲೈಂಗಿಕ ಕಾರ್ಯಕರ್ತೆಯರನ್ನು ಕಾಣಬಹುದು. ಬಳ್ಳಾರಿಯಲ್ಲಿಯೂ ಹೊಸ ಬಸ್‌ನಿಲ್ದಾಣ, ಹಳೆಬಸ್‌ನಿಲ್ದಾಣ, ಗಾಂಧಿಭವನದ ಪ್ರದೇಶ, ರೈಲ್ವೆ ನಿಲ್ದಾಣಗಳಲ್ಲಿ ಈ ರೀತಿಯ ಲೈಂಗಿಕ ಕಾರ್ಯಕರ್ತೆಯರನ್ನು ಕಾಣುತ್ತೇವೆ.

ಕೊಪ್ಪಳ ಜಿಲ್ಲೆಯಲ್ಲಿ ತುಂಬಾ ಪ್ರಸಿದ್ಧವಾದ ಶಕ್ತಿ ದೈವ ಹುಲಿಗೆಮ್ಮ. ವರ್ಷದ ಹನ್ನೆರಡು ತಿಂಗಳೂ ಭಕ್ತರಿಂದ ತುಂಬಿರುವ ಸ್ಥಳವಿದು. ವಿಶೇಷವಾಗಿ ಹುಣ್ಣಿಮೆ, ಮಂಗಳವಾರ, ಶುಕ್ರವಾರ, ಬನದ ಹುಣ್ಣಿಮೆ, ಮೇ ತಿಂಗಳಲ್ಲಿ ಬರುವ ಜಾತ್ರೆಗಳಲ್ಲಿ ಕರ್ನಾಟಕ ಮಾತ್ರವಲ್ಲದೆ ಆಂಧ್ರ, ತೆಲಂಗಾಣ, ತಮಿಳುನಾಡು, ಮಹಾರಾಷ್ಟ್ರಗಳಿಂದಲೂ ಭಕ್ತರು ತಂಡೋಪ ತಂಡವಾಗಿ ಬರುವರು. ವೇಶ್ಯಾವಾಟಿಕೆಗೆ ದಾರಿಮಾಡಿಕೊಡುವ ಧಾರ್ಮಿಕ ಆಚರಣೆಯಾದ ದೇವದಾಸಿಯರನ್ನು ಸೃಷ್ಟಿಮಾಡುವ ಪ್ರಮುಖ ಕೇಂದ್ರವೂ ಇದಾಗಿದೆ. ಈ ಪರಿಸರದಲ್ಲಿ ವೇಶ್ಯಾವಾಟಿಕೆಯಲ್ಲಿ ನಿರತವಾಗಿರುವ ಲೈಂಗಿಕ ಕಾರ್ಯಕರ್ತೆಯರು ಕಂಡುಬರುವರು. ಹುಲಿಗಿಯಲ್ಲಿ ಮುಖ್ಯವಾಗಿ ಹುಲಿಗಿ ದೇವಾಲಯದ ಮುಂಭಾಗ, ಹೊಳೆಗೆ ಹೋಗುವ ದಾರಿಯಲ್ಲಿ ಹಾಳುಬಿದ್ದಿರುವ ಸೋಮೇಶ್ವರ ದೇವಾಲಯ ಹಾಗೂ ಹೊಳೆಯ ದಂಡೆಯ ಮೇಲೆ ವಿಟಪುರುಷರನ್ನು ಕಾಯುತ್ತ ನಿಂತಿರುವ ಲೈಂಗಿಕ ಕಾರ್ಯಕರ್ತೆಯರು ಕಂಡುಬರುವರು. ಅದೇ ರೀತಿಯಾಗಿ ಕೊಪ್ಪಳದ ಬಸ್ ನಿಲ್ದಾಣದ ಮುಂಭಾಗ, ರೈಲ್ವೆನಿಲ್ದಾಣದ

ಪ್ರದೇಶದಲ್ಲಿ, ಗಂಗಾವತಿಯ ಬಸ್ ನಿಲ್ದಾಣ, ಜುಲೈನಗರ, ಇಸ್ಲಾಂಪುರ ಕ್ಯಾಂಪ್ ಪರಿಸರದಲ್ಲಿ ವಿಟಪುರುಷರನ್ನು ಕಾಯುತ್ತ ನಿಂತಿರುವ ಲೈಂಗಿಕ ಕಾರ್ಯಕರ್ತೆಯರು ಕಂಡುಬರುವರು. ಹೊಸಪೇಟೆ ಕೊಪ್ಪಳ ರಸ್ತೆಯಲ್ಲಿ ಗಿಣಿಗೇರಿ ಊರಿದೆ. ಗಿಣಿಗೇರಿ ಪರಿಸರದಲ್ಲಿ ಕಲ್ಯಾಣಿ, ಕಿರ್ಲೋಸ್ಕರ್, ಸಿಂಜೆಂಟಾ ಇತ್ಯಾದಿ ಹಲವು ಕಾರ್ಖಾನೆಗಳಿವೆ. ಈ ಕಾರ್ಖಾನೆಗಳಲ್ಲಿ, ಪರರಾಜ್ಯಗಳಿಂದ ಕೆಲಸಕ್ಕಾಗಿ ಅನೇಕ ಕಾರ್ಮಿಕರು ಆಗಮಿಸಿದ್ದಾರೆ. ಆ ಎಲ್ಲಾ ಕಾರ್ಖಾನೆಗಳ ಜಂಕ್ಷನ್ ಗಿಣಿಗೇರಿಯಾಗಿದೆ. ಹೀಗಾಗಿ ಗಿಣಿಗೇರಿಯಲ್ಲಿ ಲೈಂಗಿಕ ಕಾರ್ಯಕರ್ತರು ತಮ್ಮ ವೃತ್ತಿಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ.

ಅದೇ ರೀತಿಯಾಗಿ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ಕೂಡ್ಲಿಗಿಯವರೆಗೆ ರಾಷ್ಟ್ರೀಯ ಹೆದ್ದಾರಿಯು (ಸೊಲ್ಲಾಪುರ–ಬೆಂಗಳೂರು) ಹಾದು ಹೋಗುತ್ತದೆ. ಮರಿಯಮ್ಮನಹಳ್ಳಿ ದಾಟಿದ ನಂತರ ರಸ್ತೆಯ ಎರಡೂ ಮಗ್ಗಲು ಅಲ್ಲಲ್ಲಿ ಡಾಬಾ ಹೋಟೇಲ್‌ಗಳಿವೆ. ಇದರಲ್ಲಿ ಕೆಲವು ಹೋಟೇಲ್ ಹಿಂಭಾಗದಲ್ಲಿ ವೇಶ್ಯಾವಾಟಿಕೆ ನಡೆಯುವುದೆಂದು ತಿಳಿದುಬಂದಿದೆ. ಡಾಬಾ ಹೋಟೇಲ್ಲಿನವರನ್ನು ಕೇಳಿದರೆ ಅಂತಹ ವ್ಯವಹಾರ ತಮ್ಮಲ್ಲಿ ನಡೆಯುವುದಿಲ್ಲವೆಂದು ಹೇಳುತ್ತಾರೆ. ಆದರೆ ಟ್ರಕ್ ಚಾಲಕರ ಅನುಕೂಲಕ್ಕಾಗಿ ಈ ವ್ಯವಸ್ಥೆಯನ್ನು ಡಾಬಾದವರು ಕದ್ದುಮುಚ್ಚಿ ಮಾಡುವರೆಂದು ಸ್ಥಳೀಯರು ತಿಳಿಸುವರು. ಅಷ್ಟೇ ಅಲ್ಲದೆ ರಾಷ್ಟ್ರೀಯ ಹೆದ್ದಾರಿ ಎರಡೂ ಮಗ್ಗಲು ಕುರುಚಲು ಕಾಡಿದ್ದು ಆಯಾ ಗ್ರಾಮದ ವೇಶ್ಯಾವಾಟಿಕೆಯಲ್ಲಿ ತೊಡಗಿರುವುದು ಕೆಲವು ಮಹಿಳೆಯರು ರಸ್ತೆ ಮಗ್ಗಲಿರುವ ಮರದ ನೆರಳಿಗೆ ಕುಳಿತಿರುವುದು ಕಾಣಸಿಗುತ್ತದೆ. ಅವರ ಪಕ್ಕದಲ್ಲಿಯೇ ಚಾಪೆಯೂ ಇರುತ್ತದೆ. ಚಾಪೆಯು ಟ್ರಕ್ ಡ್ರೈವರರಿಗೆ ಸೂಚನೆ ಒದಗಿಸುವ ಸಂಕೇತವಾಗಿರುತ್ತದೆ. ಅಪೇಕ್ಷೆಪಟ್ಟ ಟ್ರಕ್ ಡ್ರೈವರ್ ಅಥವಾ ದಾರಿಹೋಕರು ವ್ಯವಹಾರ ಕುದುರಿಸಿಕೊಂಡು ಆ ಲೈಂಗಿಕ ಕಾರ್ಯಕರ್ತೆಯರೊಂದಿಗೆ ವ್ಯವಹರಿಸುವುದನ್ನು ಪ್ರತಿನಿತ್ಯವೂ ಕಾಣಬಹುದು. ಕೊಪ್ಪಳದಿಂದ ಹಾದುಹೋಗುವ ಈ ರಾಷ್ಟ್ರೀಯ ಹೆದ್ದಾರಿಯಲ್ಲಿಯೂ ಇದೇ ರೀತಿಯ ಚಟುವಟಿಕೆಯನ್ನು ಕಾಣಬಹುದು. ವಿಶೇಷವಾಗಿ ಕೆಲವು ಡಾಬಾಗಳ ಮುಂಭಾಗದಲ್ಲಿ ಲೈಂಗಿಕ ಕಾರ್ಯಕರ್ತೆಯರು, ಲೈಂಗಿಕ ಅಲ್ಪಸಂಖ್ಯಾತರು ವೇಶ್ಯಾವಾಟಿಕೆ ವೃತ್ತಿಯಲ್ಲಿ ನಿರತರಾಗಿದ್ದು ದಾರಿಹೋಕರನ್ನು ಆಕರ್ಷಿಸುವ ಕಾರ್ಯ ಮಾಡುತ್ತಿರುವುದನ್ನು ಪ್ರತಿನಿತ್ಯ ಕಾಣುತ್ತೇವೆ.

ಲೈಂಗಿಕ ಕಾರ್ಯಕರ್ತೆಯರ ವೃತ್ತಿಗೆ ಅನುಕೂಲವಾದ ಅಡ್ಡೆಗಳು ಹೊಸಪೇಟೆ, ತೋರಣಗಲ್ಲು, ಬಳ್ಳಾರಿ, ಕೂಡ್ಲಿಗಿ ಇತ್ಯಾದಿ ಕಡೆ ಕಾಣಸಿಗುತ್ತವೆ. ಮೇಲ್ನೋಟಕ್ಕೆ ಇವು ವೇಶ್ಯಾವಾಟಿಕೆ ನಡೆಯುವ ಸ್ಥಳಗಳಂತೆ ಗೋಚರಿಸುವುದಿಲ್ಲ. ಅವು ಖಾನವಳಿ, ಡಬ್ಬಾ ಅಂಗಡಿಯೋ ಮುಂಭಾಗದಲ್ಲಿರುತ್ತದೆ. ಹಿಂಭಾಗದಲ್ಲಿ ವೇಶ್ಯಾವಾಟಿಕೆ ಜರಗುತ್ತಿರುತ್ತದೆ. ಇದು ಎಲ್ಲರಿಗೂ ತಿಳಿಯುವುದಿಲ್ಲ. ಸಾಮಾನ್ಯವಾಗಿ ನಿರಂತರವಾಗಿ ಅಡ್ಡೆಗಳೊಂದಿಗೆ ಸಂಪರ್ಕವಿರಿಸಿಕೊಂಡ ವಿಟರಿಗೆ, ಪೋಲೀಸರಿಗೆ ಹಾಗೂ ಆಟೋ ಚಾಲಕರಿಗೆ ಈ ಸ್ಥಳಗಳ ಪರಿಚಯ ಚೆನ್ನಾಗಿರುತ್ತದೆ. ಆಟೋ ಚಾಲಕರು ಹೊಸ ಗಿರಾಕಿಗಳನ್ನು

ಕರೆದುಕೊಂಡುಹೋದರೆ ಅಡ್ಡೆಯ ಮಾಲಕರು ಒಂದು ಗಿರಾಕಿಗೆ ಇಂತಿಷ್ಟೆಂದು ಕಮಿಷನ್ ಕೊಡುವರು. ತಿಂಗಳಿಗೆ ಇಂತಿಷ್ಟೆಂದು ಪ್ರತೀ ತಿಂಗಳು ತಮ್ಮ ಏರಿಯಾದ ಪೋಲಿಸ್ ಸ್ಟೇಷನ್ನಿಗೂ ಕಮಿಷನ್ ಅಥವಾ ಹಫ್ತಾ ಕಳಿಸುವರು.

ಹೊಸಪೇಟೆಯ ಚಪ್ಪರದಹಳ್ಳಿ, ಮೀರಲಾಂ ಟಾಕೀಸಿನ ರಸ್ತೆಯಲ್ಲಿರುವ ತಗ್ಗಿನ ಖಾನಾವಳಿ, ಸಿದ್ದಲಿಂಗಪ್ಪ ಚೌಕಿಯ ಹಿಂಭಾಗ, ಬಳ್ಳಾರಿ ರಸ್ತೆಯ ಕೆಲವು ಕಡೆ, ಬಳ್ಳಾರಿಯ ಎಂ ಡಿ ನಗರ, ಬಸವನಕುಂಟೆ, ಅನಂತಪುರ ರಸ್ತೆ, ಕೂಡ್ಲಿಗಿಯ ಹೊಸಪೇಟೆ ರಸ್ತೆಯ ಆಂಜನೇಯ ಕಾಲೋನಿ ಇತ್ಯಾದಿ ಕಡೆ ವೇಶ್ಯಾವಾಟಿಕೆ ಅಡ್ಡೆಗಳಿವೆ.

ಕೊಪ್ಪಳದ ಗವಿಮಠ ಕಾಲೋನಿ, ಮುಂಡ್ರಿಗಿ ರಸ್ತೆ, ತಳಕಲ್ ರಸ್ತೆಯ ಕಾಲೋನಿಗಳಲ್ಲಿ ಹಾಗೂ ಬಸ್ ಸ್ಟ್ಯಾಂಡಿನ ಹಿಂಭಾಗಗಳಲ್ಲಿ ಈ ರೀತಿಯ ಅಡ್ಡೆಗಳು ಇವೆ. ಗಂಗಾವತಿಯಲ್ಲಿ ಜುಲೈನಗರ, ನೀಲಕಂಠೇಶ್ವರ ದೇವಸ್ಥಾನದ ಮುಂಭಾಗದ ಕಾಲೋನಿ, ಇಸ್ಲಾಂಪುರ ಹಾಗೂ ಮಾರುಕಟ್ಟೆ ಪಕ್ಕದ ಓಣಿಯಲ್ಲಿ ಅಡ್ಡೆಗಳಿವೆ.

ಇನ್ನು ಲಾಡ್ಜ್ ಹಾಗೂ ಪ್ರತಿಷ್ಠಿತ ಕಾಲೋನಿಗಳಲ್ಲಿ ವೇಶ್ಯಾವಾಟಿಕೆ ನಡೆಯುವುದು ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿತು. ಈ ಪ್ರಕಾರದ ದಂಧೆಯು ಆದಷ್ಟು ಬಲಿಷ್ಠರ ಕೈಯೊಳಗೆ ಇರುವುದು. ಹೊಸಪೇಟೆ, ಬಳ್ಳಾರಿ, ತೋರಣಗಲ್, ಕೂಡ್ಲಿಗಿ, ಕೊಪ್ಪಳ, ಗಂಗಾವತಿ, ಕಾರಟಗಿ, ಹುಲಿಗಿ ಇತ್ಯಾದಿ ಕಡೆ ಈ ರೀತಿಯ ದಂಧೆ ನಡೆಯುವುದನ್ನು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ. ಲಾಡ್ಜ್ ಹಾಗೂ ಮನೆಯಲ್ಲಿ ನಡೆಯುವ ವೇಶ್ಯಾವಾಟಿಕೆಗೆ ರಾಜಕಾರಣಿಗಳು, ಮೇಲ್ದರ್ಜೆಯ ಅಧಿಕಾರಿಗಳು, ಪೋಲೀಸ್ ಇಲಾಖೆ ಅಧಿಕಾರಿಗಳು ನೇರವಾಗಿಯೋ ಪರೋಕ್ಷವಾಗಿಯೋ ಕೈಜೋಡಿಸಿರುವರು. ಈ ದಂಧೆ ಸ್ವಲ್ಪ ಹೈಕ್ಲಾಸ್ ಲೈಂಗಿಕ ಕಾರ್ಯಕರ್ತೆಯರಿಂದ ಹೈಕ್ಲಾಸ್ ಜನರಿಗಾಗಿ ನಡೆಯುವುದು. ಸಮಾಜದಲ್ಲಿ ಗೌರವಾನ್ವಿತರಂತೆ ಕಾಣುವ ಜನರೇ ಇದರಲ್ಲಿ ಹೆಚ್ಚು ಭಾಗಿಯಾಗಿರುವುದು ತಿಳಿದುಬರುತ್ತದೆ. ಇಂತಹ ವ್ಯವಸ್ಥೆಯೊಳಗೆ ತಲೆಹಾಕಿ ಕ್ಷೇತ್ರಕಾರ್ಯ ಮಾಡುವುದು ಅಪಾಯವನ್ನು ಉಡಿಯಲ್ಲಿ ಕಟ್ಟಿಕೊಂಡು ವ್ಯವಹರಿಸಿದಂತೆ. ಇದು ಮೊಬೈಲ್ ಫೋನ್ ಹಾಗೂ ಮಧ್ಯವರ್ತಿಗಳ ಸಹಾಯದಿಂದ ನಡೆಯುವ ದಂಧೆಯಾಗಿದೆ. ವೇಶ್ಯಾವಾಟಿಕೆಯ ಸ್ವರೂಪವನ್ನು ಅರಿಯಲು ಕ್ಷೇತ್ರಕಾರ್ಯ ಮಾಡಲು ಅನಿವಾರ್ಯವಾಗಿ ಮಧ್ಯವರ್ತಿಗಳ ಸಹಾಯ ಪಡೆಯಲಾಯಿತು. ಒಟ್ಟಾರೆಯಾಗಿ ಸಾಮಾಜಿಕ ಪರಿಸರದಲ್ಲಿ ನಡೆಯುವ ವೇಶ್ಯಾವಾಟಿಕೆಯ ಪರಿಸರವನ್ನು ತಿಳಿಯಲು ಕ್ಷೇತ್ರಕಾರ್ಯ ನಡೆಸಿದಾಗ ಕಂಡುಬಂದ ಅಂಕಿ-ಅಂಶಗಳು ಈ ಕೆಳಗಿನಂತಿವೆ.

| ಕೋಷ್ಟಕ: ೪.೧.೭ ಲೈಂಗಿಕ ಕಾರ್ಯಕರ್ತೆಯರು ವೃತ್ತಿಯಲ್ಲಿ ತೊಡಗುವ ಸಾಮಾಜಿಕ ಪರಿಸರ | | | |
|---|---|---|---|
| ಕ್ರಸಂ | ವೃತ್ತಿಯಲ್ಲಿ ತೊಡಗುವ ಸಾಮಾಜಿಕ ಪರಿಸರ | ಬಳ್ಳಾರಿ ಜಿಲ್ಲೆ | ಕೊಪ್ಪಳ ಜಿಲ್ಲೆ |
| ೧ | ದೇವಾಲಯ ಪರಿಸರ/ಪ್ರವಾಸಿ ತಾಣಗಳು | ೧೫ | ೨೦ |
| ೨ | ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ | ೧೮ | ೧೩ |
| ೩ | ರಾಷ್ಟ್ರೀಯ ಹೆದ್ದಾರಿ/ಡಾಬಾ ಹೋಟೆಲ್ | ೨೮ | ೨೬ |
| ೪ | ವೇಶ್ಯಾವಾಟಿಕೆ ಅಡ್ಡೆಗಳು | ೩೦ | ೨೮ |
| ೫ | ಲಾಡ್ಜ್/ ಮನೆ | ೦೯ | ೧೩ |
| | ಒಟ್ಟು | ೧೦೦ | ೧೦೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ದೇವಾಲಯ ಹಾಗೂ ಪ್ರವಾಸಿ ತಾಣಗಳ ಪರಿಸರದಲ್ಲಿ ವೇಶ್ಯಾವಾಟಿಕೆ ನಡೆಸುವ ಲೈಂಗಿಕ ಕಾರ್ಯಕರ್ತೆಯರು ಬಳ್ಳಾರಿ ಜಿಲ್ಲೆಯಲ್ಲಿ ೧೫ (ಹಂಪಿ, ಟಿ ಬಿ ಡ್ಯಾಂ ಪಾರ್ಕ್, ಶ್ರೀರಾಮುಲು ಪಾರ್ಕ್ ಇತ್ಯಾದಿ) ಜನ ಕಂಡುಬಂದರೆ, ಕೊಪ್ಪಳ ಜಿಲ್ಲೆಯಲ್ಲಿ ೨೦ (ಹುಲಿಗಿ, ಸಣಾಪುರ, ವಿರುಪಾಪುರ ಗಡ್ಡೆ, ಹನುಮನಹಳ್ಳಿ)ಲೈಂಗಿಕ ಕಾರ್ಯಕರ್ತೆಯರು ಕಾಣುತ್ತಾರೆ.

ಹೊಸಪೇಟೆ (ಬಸ್ ನಿಲ್ದಾಣ, ಶಾನಭಾಗ ಹೋಟೆಲಿನ ಪರಿಸರ, ಬಿಡಿಸಿಸಿ ಬ್ಯಾಂಕ್ ಹಿಂಭಾಗ ಇತ್ಯಾದಿ), ಬಳ್ಳಾರಿ (ರೈಲ್ವೆ ನಿಲ್ದಾಣ, ಬಸ್ ಸ್ಟ್ಯಾಂಡ್, ಅನಂತಪುರ ರಸ್ತೆಯ ಖಾಸಗಿ ಬಸ್ ನಿಲ್ದಾಣ, ಗಾಂಧಿ ಭವನ ಪರಿಸರ, ರಾಯಲ್ ಹಾಗೂ ನಟರಾಜ ಟಾಕೀಸ್ ಮುಂಭಾಗ ಇತ್ಯಾದಿ), ತೋರಣಗಲ್ಲು (ರೈಲ್ವೆ ನಿಲ್ದಾಣಕ್ಕೆ ಹೋಗುವ ದಾರಿ, ರೈಲ್ವೆ ನಿಲ್ದಾಣ, ಬಸ್ ನಿಲ್ದಾಣ), ಕೂಡ್ಲಿಗಿ (ಬಸ್ ನಿಲ್ದಾಣ, ಹೊಸಪೇಟೆ ರಸ್ತೆ) ಇತ್ಯಾದಿ ಕಡೆ ಗಿರಾಕಿಗಳಿಗಾಗಿ ಕಾಯುತ್ತ ನಿಂತವರು ೧೮ ಜನ ಲೈಂಗಿಕ ಕಾರ್ಯಕರ್ತರು ಕಂಡುಬಂದರು. ಅದೇ ರೀತಿ ಕೊಪ್ಪಳ ಜಿಲ್ಲೆಯ ಕೊಪ್ಪಳ (ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ), ಗಂಗಾವತಿ (ಬಸ್ ನಿಲ್ದಾಣ, ಜುಲೈನಗರ ಸರ್ಕಲ್, ಇಸ್ಲಾಂಪುರ ಸರ್ಕಲ್, ಅಮರ ಟಾಕೀಸ್ ಪರಿಸರ) ೧೩ ಜನ ಲೈಂಗಿಕ ಕಾರ್ಯಕರ್ತೆಯರಿರುವುದು ಕಂಡುಬಂದಿತು.

ಬಳ್ಳಾರಿ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿ (ಸೊಲ್ಲಾಪುರ-ಬೆಂಗಳೂರು) ಹಾಗೂ ಹುಬ್ಬಳ್ಳಿ-ಗುತ್ತಿ ರಾಷ್ಟ್ರೀಯ ಹೆದ್ದಾರಿಯ ಡಾಬಾ ಹೋಟೆಲ್, ರಸ್ತೆ ಮಗ್ಗಲ ಕಾಡುಗಳಲ್ಲಿ ವೇಶ್ಯಾವೃತ್ತಿಗಾಗಿ ಗಿರಾಕಿಗಳನ್ನು ಸೆಳೆಯಲು ೨೮ ಜನ ಲೈಂಗಿಕ ಕಾರ್ಯಕರ್ತೆಯರಿರುವುದು ಕಂಡುಬಂದರೆ, ಕೊಪ್ಪಳ ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ (ಸೊಲ್ಲಾಪುರ-ಬೆಂಗಳೂರು), ಬೂದುಗುಂಪ ಕ್ರಾಸ್, ಟೋಲ್‌ಗೇಟ್, ಹೊಸಳ್ಳಿ ಕ್ರಾಸ್, ಸೀಮ್ಲಾ ಡಾಬಾ ಹೋಟೆಲ್ ಪರಿಸರ, ಯಲಬುರ್ಗ ರಸ್ತೆ, ಕುಷ್ಟಗಿ ಹೊರವಲಯದ ಡಾಬಾ ಇತ್ಯಾದಿ ಸ್ಥಳಗಳಲ್ಲಿ ೨೬ ಲೈಂಗಿಕ ಕಾರ್ಯಕರ್ತೆಯರು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದಿದ್ದಾರೆ.

ಬಳ್ಳಾರಿ (ಡಿ ಸಿ ನಗರ, ಬಸವನ ಕುಂಟೆ), ಹೊಸಪೇಟೆ (ಜಬ್ಬಲ, ಚಪ್ಪರದಹಳ್ಳಿ, ಬಳ್ಳಾರಿ ರಸ್ತೆ), ಮೀರಲಾಂ ಟಾಕೀಸ್ ಪರಿಸರ), ಕೂಡ್ಲಿಗಿ (ಹೊಸಪೇಟೆ ರಸ್ತೆ) ವೇಶ್ಯಾವಾಟಿಕೆ ಅಡ್ಡೆಗಳಿದ್ದು ವಿವಿಧ ಕಡೆ ೩೦ ಲೈಂಗಿಕ ಕಾರ್ಯಕರ್ತೆಯರಿದ್ದರೆ, ಕೊಪ್ಪಳ (ಬಸ್ ನಿಲ್ದಾಣ ಹಿಂಭಾಗ, ಭಾಗ್ಯ ನಗರ, ಮುಂಡ್ರಿಗಿ ರಸ್ತೆ), ಗಂಗಾವತಿ (ಮಾರ್ಕೆಟ್ ಏರಿಯಾ, ಬಸ್ ನಿಲ್ದಾಣದ ಹಿಂಭಾಗ, ಜುಲೈ ನಗರ, ಇಸ್ಲಾಂಪುರ ಕ್ಯಾಂಪ್) ೨೮ ಲೈಂಗಿಕ ಕಾರ್ಯಕರ್ತೆಯರು ಇರುವುದನ್ನು ಕಾಣುತ್ತೇವೆ.

ಬಳ್ಳಾರಿ (ಕಪ್ಪಗಲ್ ರಸ್ತೆ, ಅನಂತಪುರ ರಸ್ತೆ, ರಾಯಲ್ ಸರ್ಕಲ್) ಹೊಸಪೇಟೆ (ಮೃತ್ಯುಂಜಯ ನಗರ, ಅಮರಾವತಿ, ಬಜಾರ), ಕೂಡ್ಲಿಗಿ ಹೊಸಪೇಟೆ ರಸ್ತೆ, ಜನತಾ ಕಾಲೋನಿ, ಬಸ್‌ಸ್ಟ್ಯಾಂಡ್ ಹತ್ತಿರದ ಲಾಡ್ಜ್) ಇತ್ಯಾದಿ ಸ್ಥಳಗಳಲ್ಲಿ ೯ ಜನ ಲೈಂಗಿಕ ಕಾರ್ಯಕರ್ತೆಯರನ್ನು, ಕೊಪ್ಪಳ (ಗವಿಮಠ ಕಾಲೋನಿ, ಮುಂಡ್ರಿಗಿ ರಸ್ತೆ, ಬಸ್ ನಿಲ್ದಾಣದ ಹಿಂಭಾಗ, ಭಾಗ್ಯನಗರ, ಬಜಾರದ ಕೆಲವು ಲಾಡ್ಜ್), ಗಂಗಾವತಿ (ಜುಲೈ ನಗರ, ಇಸ್ಲಾಂಪುರ ರಸ್ತೆ, ವಡ್ಡರಹಟ್ಟಿ, ಬಜಾರದ ಕೆಲವು ಲಾಡ್ಜ್) ಇತ್ಯಾದಿ ಕಡೆ ೧೩ ಲೈಂಗಿಕ ಕಾರ್ಯಕರ್ತೆಯರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಿದ್ದಾರೆ.

ಲೈಂಗಿಕ ಕಾರ್ಯಕರ್ತೆಯರು ಹಣಕ್ಕಾಗಿ ಮೈಚಾಚುವವರಾದರೂ ಅದು ಅವರಿಗೆ ಕೇವಲ ವೃತ್ತಿಯಾಗಿದೆ. ಆದರೆ ಸಾಮಾಜಿಕವಾಗಿ ಅವರನ್ನು ಬಳಕೆಮಾಡಿಕೊಳ್ಳುವ ಪುರುಷ ವರ್ಗವೇ ಸಾರ್ವಾತ್ರಿಕವಾಗಿ ವೇಶ್ಯೆಯರನ್ನು ತುಂಬಾ ನಿಕೃಷ್ಟವಾಗಿ ಕಾಣುವರು. ಸಮಾಜದಲ್ಲಿ ಉತ್ತಮ ಸ್ಥಿತಿಯಲ್ಲಿರುವ ಮಹಿಳೆಯರು ತಾವು ಕೂಡ ಮಹಿಳೆಯಂಬುದನ್ನು ಮರೆತು ಲೈಂಗಿಕ ಕಾರ್ಯಕರ್ತೆಯರನ್ನು ಅತ್ಯಂತ ಕೀಳಾಗಿ ಕಾಣುವರು. ಹುಟ್ಟುತ್ತಲೇ ಯಾವೊಬ್ಬ ಮಹಿಳೆಯೂ ತಾನು ವೇಶ್ಯೆಯಾಗಿ ಬದುಕುತ್ತೇನೆ ಎಂದು ತಿಳಿದಿರುವುದಿಲ್ಲ. ಅವಳ ಸಾಮಾಜಿಕ ಸಂದರ್ಭ, ಅಸಾಹಾಯಕತೆಗಳು ಹೆಣ್ಣೊಬ್ಬಳನ್ನು ವೇಶ್ಯೆಯಾಗಿ ಮಾರ್ಪಾಡು ಮಾಡುತ್ತದೆ. ಈ ವ್ಯವಸ್ಥೆ ಸಮಾಜದ ಕರಾಳತೆಯನ್ನೂ ಪ್ರತಿನಿಧಿಸುತ್ತದೆಂದರೆ ತಪ್ಪಾಗಲಾರದು.

**೪.೨. ಶೈಕ್ಷಣಿಕ ಸ್ಥಿತಿಗತಿ**

ಭಾರತೀಯ ಸಮಾಜದಲ್ಲಿ ಮಹಿಳೆಗೆ ದ್ವಿತೀಯ ಸ್ಥಾನವನ್ನು ಕಲ್ಪಿಸಲಾಗಿದೆ. ಪುರುಷರಿಗೆ ಸಮಾನವಾದ ಬುದ್ಧಿಮತ್ತೆ, ದುಡಿಯುವ ಶಕ್ತಿಗಳಿದ್ದರೂ ಪುರುಷಶಾಹಿ ವ್ಯವಸ್ಥೆಯು ಮಹಿಳೆಯನ್ನು ಎಲ್ಲಾ ವಿಷಯಗಳಲ್ಲೂ ಶೋಷಣೆ ಮಾಡುವುದು ಮಾತ್ರ ಕಡಿಮೆಯಾಗಿಲ್ಲ. "ಭಾರತೀಯ ಸಮಾಜದ ಜಾತಿ ಹಾಗೂ ಲಿಂಗ ವ್ಯವಸ್ಥೆಯಲ್ಲಿ ಸಮಾನತೆ ಬರಬೇಕಾದರೆ ಮುಖ್ಯವಾಗಿ ತಳಜಾತಿಗಳು ಹಾಗೂ ಮಹಿಳೆಯರು ಶಿಕ್ಷಣವನ್ನು ಪಡೆಯಲೇಬೇಕೆಂದು ಅಂಬೇಡ್ಕರ್‌ರವರು ತಿಳಿಸುತ್ತಾರೆ"[೨] ಆ ಕಾರಣಕ್ಕಾಗಿಯೇ ಸಂವಿಧಾನದಲ್ಲಿ ಹಿಂದುಳಿದ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಹಾಗೂ ಮಹಿಳೆಯರಿಗೆ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಮೀಸಲಾತಿ ನೀಡಬೇಕೆಂದು ತಿಳಿಸಲಾಗಿದೆ. "ಶಿಕ್ಷಣ ಮನುಷ್ಯನ ಆತ್ಮಗೌರವವನ್ನು ಹೆಚ್ಚಿಸುತ್ತದೆ ಹಾಗೂ ಹೆಣ್ಣು ಸ್ವಾಭಿಮಾನದಿಂದ ಬದುಕನ್ನು ಸಾಗಿಸಲು ಆತ್ಮಸ್ಥೈರ್ಯವನ್ನು ನೀಡುತ್ತದೆ. ಹೀಗಾಗಿ ಪ್ರತಿಯೊಬ್ಬರಿಗೂ ಕಡ್ಡಾಯ ಶಿಕ್ಷಣದ ಅವಶ್ಯಕತೆಯನ್ನು

ಮನಗಂಡ ಸರ್ಕಾರ ಭಾರತದ ಪ್ರತಿಯೊಬ್ಬ ಪ್ರಜೆಗೂ ಕಡ್ಡಾಯ ಶಿಕ್ಷಣ ನೀತಿಯನ್ನು ಅನುಸರಿಸುವಂತೆ ತಿಳಿಸುತ್ತದೆ”[೩] ಆದರೆ ಯಾವುದೇ ನೀತಿ ಅಥವಾ ನಿಯಮಗಳು, ಒತ್ತಡಗಳು ಮನುಷ್ಯನಿಗೆ ಆ ಮುಖವಾಗಿ ಮುನ್ನಡೆಸಲು ಸಾಧನವಾಗುವುದಿಲ್ಲ. ಮುಖ್ಯವಾಗಿ ಈ ಸಮಾಜವು ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸಲು ಹಿಂಜರಿಯುವುದೇಕೆ, ಶಾಲೆಗೆ ಸೇರಿಸಿದರೂ ಆ ಮಕ್ಕಳು ಶಾಲೆಯನ್ನು ಪೂರೈಸಲು ಏಕೆ ಸಾಧ್ಯವಾಗುತ್ತಿಲ್ಲ ಎಂಬುದರ ಆಳಕ್ಕೆ ಇಳಿದು ನೋಡಿದರೆ ಬೇರೆ ಸತ್ಯಗಳೇ ಹೊರಬೀಳುತ್ತವೆ. ಭಾರತೀಯರ ಮೂಲಭೂತ ಸಮಸ್ಯೆಗಳಲ್ಲಿ ಬಡತನವೂ ಒಂದು. ಕೇವಲ ಬಡತನವೊಂದೇ ಶಿಕ್ಷಣಕ್ಕೆ ಅಡ್ಡಿಯಂದೇನೂ ಅಲ್ಲ. ಅದರಾಚೆಗೂ ಹಲವಾರು ಸಾಮಾಜಿಕ ಕಾರಣಗಳು ಹೆಣ್ಣುಮಕ್ಕಳು ಶಾಲೆಗೆ ಹೋಗದಂತೆ ತಡೆಯುತ್ತವೆ. ಪುರುಷರ ಶೈಕ್ಷಣಿಕ ಪ್ರಗತಿಯು ಶೇಕಡ ೮೨.೪೭ ಇದ್ದರೆ ಮಹಿಳೆಯರ ಶೈಕ್ಷಣಿಕ ಪ್ರಗತಿಯು ೬೮.೦೮ ಇದೆ. ಅಂದರೆ ರಾಜ್ಯದಲ್ಲಿ ಪುರುಷರ ಶೈಕ್ಷಣಿಕ ಮಟ್ಟಕ್ಕಿಂತ ಮಹಿಳೆಯರ ಶೈಕ್ಷಣಿಕ ಮಟ್ಟವು ಶೇಕಡ ೧೪.೩೯ರಷ್ಟು ಅಂತರವಿದೆ. ತಳಸಮುದಾಯಗಳಿಗೆ ಹೋದಂತೆಲ್ಲಾ ಈ ಅಂತರವು ಇನ್ನೂ ಅಧಿಕವಾಗುತ್ತಾ ಹೋಗುವುದು.

ದಲಿತರಲ್ಲಿಯೇ ದಲಿತರೆಂದು ಪರಿಗಣಿತದಾದ ಮಹಿಳೆಯರು ಶೈಕ್ಷಣಿಕ ಪ್ರಗತಿಯಲ್ಲಿ ತುಂಬಾ ಹಿಂದುಳಿದಿದ್ದಾರೆ. ಮುಖ್ಯವಾಗಿ ಮೇಲ್ವರ್ಗಗಳಲ್ಲಿ ಸಾಮಾಜಿಕ ಕಾರಣಗಳಿಗಾಗಿ ಮಹಿಳೆಯರನ್ನು ಮನೆಯಿಂದ ಹೊರಗೆ ವಿದ್ಯಾಭ್ಯಾಸಕ್ಕಾಗಿ ಕಳಿಸುವುದು ತುಂಬಾ ಅಪರೂಪವಾಗಿದೆ. ಹುಡುಗಿಯರು ಹದಿಮೂರು ವರ್ಷದಿಂದ ಹದಿನಾರು ವರ್ಷದೊಳಗೆ ಋತಿಮತಿಯಾಗುವುದು ಪ್ರಕೃತಿ ನಿಯಮ, ಹೀಗೆ ಮೈನೆರೆದ ಮಕ್ಕಳನ್ನು ಶಾಲೆಗೆ, ಅದರಲ್ಲೂ ಊರಿನಾಚೆಗೆ ಇರುವ ಶಾಲೆಗಳಿಗೆ ಕಳಿಸುವುದು (ಸಾಮಾಜಿಕ ಕಾರಣಗಳಿಗಾಗಿ) ಅಪಾಯವೆಂದೇ ಭಾವಿಸುವ ಪಾಲಕರು ಸಾಮಾನ್ಯವಾಗಿ ಉನ್ನತ ಶಿಕ್ಷಣಕ್ಕೆ ಹುಡುಗಿಯರನ್ನು ಕಳಿಸಲು ಹಿಂಜರಿಯುವರು.

ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ, ಅವಳಿಗೆ ಬಂಡವಾಳ ತೊಡಗಿಸಿ ಓದಿಸುವುದಕ್ಕಿಂತ ಅದೇ ಹಣವನ್ನು ವರದಕ್ಷಿಣೆಯಾಗಿ ನೀಡಿ ಮದುವೆ ಮಾಡಿಕೊಟ್ಟರೆ ತಮ್ಮ ಜವಬ್ದಾರಿ ಮುಗಿಯುತ್ತದೆ ಎಂದು ಭಾವಿಸುವ ಪಾಲಕರ ಪ್ರಮಾಣವೇ ಹೆಚ್ಚು. ಹೀಗಾಗಿ ಮಹಿಳೆಯರಿಗೆ ಉನ್ನತ ಶಿಕ್ಷಣ ಕೊಡಿಸುವುದರಲ್ಲಿ ಪಾಲಕರು ಹಿಂಜರಿಯುತ್ತಾರೆ. ಆದರೆ ಬಹುತೇಕ ತಳಸಮುದಾಯಗಳಲ್ಲಿ ದೇವದಾಸಿ ಪದ್ಧತಿ ರೂಢಿಯಲ್ಲಿದೆ. ಇಂತಹ ಕುಟುಂಬಗಳಲ್ಲಿ ಗಂಡುಮಗುವಿನ ಜನನಕ್ಕಿಂತ ಹೆಣ್ಣುಮಗು ಜನಿಸಿದರೆ ಸಂತಸಪಡುವುದೇ ಹೆಚ್ಚು ಎಂದು ಹೇಳಲಾಗುವುದು. ಆದರೆ ಇಂದಿನ ಜಾಗೃತ ಸ್ಥಿತಿಯಲ್ಲಿ ವೇಶ್ಯಾವಾಟಿಕೆಯನ್ನು ವೃತ್ತಿಯಾಗಿಸಿಕೊಂಡ ಯಾವೊಬ್ಬ ಮಹಿಳೆಯೂ ತನಗೆ ಹೆಣ್ಣುಮಗು ಹುಟ್ಟಲಿ ಎಂದು ಬಯಸುವುದಿಲ್ಲ. ತನ್ನ ಪಾಡು ತನ್ನ ಮಕ್ಕಳಿಗೆ ಬಾರದಿರಲಿ ಎಂದು ಆಶಿಸುವರು.

ಭಾರತೀಯರ ಮನೋಭೂಮಿಕೆಯಲ್ಲಿ ಶಿಕ್ಷಣವೆಂಬುದು ಸರ್ಕಾರಿ ಹುದ್ದೆಯನ್ನು ಗಿಟ್ಟಿಸುವ ಹೆಬ್ಬಾಗಿಲಾಗಿ ಕಾಣಿಸುತ್ತದೆ. ಆದರೆ ಸರ್ಕಾರಿ ಹುದ್ದೆಗಳನ್ನು ಪಡೆಯಲು ಉಬ್ಬಸಪಡುವ ಯುವಜನತೆಯನ್ನು ನೋಡಿದ ಪಾಲಕರು ತಮ್ಮ ಮಕ್ಕಳು ಓದಿ ಕೆಲಸ ಸಿಗುವಷ್ಟರಲ್ಲಿ ತಮ್ಮ

ಸಮಾದಿಯಾಗಿರುತ್ತದೆಂದು ತಿಳಿಯುವರು. ಇಂದು ಕೇವಲ ಓದಿನಿಂದ ಕೆಲಸ ಸಿಗದು, ಕೆಲಸ ಪಡೆಯಲು ಲಕ್ಷ, ಲಕ್ಷ ಹಣವನ್ನು ಲಂಚ ರೂಪದಲ್ಲಿ ನೀಡಬೇಕು, ತಮ್ಮಂತಹ ಬಡ ಕುಟುಂಬಗಳು ಎಲ್ಲಿಂದ ಲಕ್ಷದ ಎಣಿಕೆಯ ಹಣವನ್ನು ಹೊಂದಿಸುವುದು ಎಂಬ ಹೆದರಿಕೆ ಸಾಮಾನ್ಯ ಜನರಲ್ಲಿ ಮನೆಮಾಡಿದೆ. ಶಿಕ್ಷಣಕ್ಕಿಂತ ಹೆಚ್ಚಾಗಿ ತಮ್ಮ ನಿತ್ಯ ಜೀವನದ ಬದುಕೇ ಮುಖ್ಯವಾಗಿರುವುದು ಬಡಕುಟುಂಬಗಳಿಗೆ ಮನವರಿಕೆಯಾಗಿದೆ. ತಮ್ಮ ಕುಟುಂಬದ ನಿರ್ವಹಣೆಗೆ ಅನ್ಯ ಮಾರ್ಗವಿಲ್ಲದಾಗ ಮಾತ್ರ ಮಹಿಳೆಯರು ಸಾಮಾಜಿಕವಾಗಿ ಕಳಂಕಪೂರಿತವಾದರೂ ವೇಶ್ಯಾವಾಟಿಕೆಯಂತಹ ವೃತ್ತಿಯನ್ನು ಆಯ್ಕೆಮಾಡಿಕೊಳ್ಳುವುದೇ ಹೆಚ್ಚು. ಅನಕ್ಷರತೆ, ಮೌಢ್ಯತೆ, ಬಡತನ ಹೀಗೆ ನಾನಾ ಕಾರಣಗಳಿಗಾಗಿ ವೇಶ್ಯಾವಾಟಿಕೆಯಲ್ಲಿ ನಿರತವಾದ ಬಹುಪಾಲು ಮಹಿಳೆಯರು ಶಾಲೆಗೆ ಹೋಗದಿರುವುದೇ ಹೆಚ್ಚು. ಇವರಲ್ಲಿ ಕೆಲವರು ಶಾಲೆಗೆ ಹೋದರೂ ಶಾಲೆಯನ್ನು ಅರ್ಧದಲ್ಲಿಯೇ ಮೊಟಕುಗೊಳಿಸಿರುವರು. ಕ್ಷೇತ್ರಕಾರ್ಯದಲ್ಲಿ ಲೈಂಗಿಕ ಕಾರ್ಯಕರ್ತೆಯರಾಗಿ ಕಾರ್ಯನಿರ್ವಹಿಸುತ್ತಿರುವ ಮಹಿಳೆಯರಲ್ಲಿ ೧೮ ವಯೋಮಾನದ ಮಹಿಳೆಯರಿಂದ ೫೦ರ ವಯಸ್ಸಿಗೆ ಹತ್ತಿರವಾದವರೂ ಕಂಡುಬಂದರು. ಈ ಲೈಂಗಿಕ ಕಾರ್ಯಕರ್ತೆಯರಲ್ಲಿ ಮಕ್ಕಳನ್ನು ಹೊಂದಿದವರೂ ಇದ್ದಾರೆ. ಸಾಮಾನ್ಯವಾಗಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರಾಗಿ ವೃತ್ತಿಯಲ್ಲಿ ನಿರತರಾದ ಮಹಿಳೆಯರು ತಮ್ಮ ಮಕ್ಕಳ ಪಾಲನೆ ಪೋಷಣೆಯ ಜವಾಬ್ದಾರಿಯನ್ನು ತಮ್ಮ ಪಾಲಕರಿಗೆ ಮತ್ತು ಸಾರ್ವಜನಿಕ ಹಾಸ್ಟೆಲ್‌ಗಳಲ್ಲಿರಿಸಿ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಿದ್ದಾರೆ.

ಜನಸಂಖ್ಯಾಶಾಸ್ತ್ರಜ್ಞರ ಪ್ರಕಾರ ಜನಸಂಖ್ಯೆಯ ಬೆಳವಣಿಗೆಯ ಪ್ರಮಾಣ ನಿಯಂತ್ರಣ ಮಾಡಬೇಕೆಂದರೆ ಮೊದಲಿಗೆ ಜನತೆಯಲ್ಲಿ ಸಾಕ್ಷರತೆಯ ಕುರಿತು ಪ್ರಜ್ಞೆ ಮೂಡಬೇಕು, ಪ್ರಜ್ಞೆ ಮೂಡುವುದರೊಂದರಿಂದಲೇ ಅದು ಸಾಧ್ಯವಾಗದು. ಅದರೊಂದಿಗೆ ಶಿಕ್ಷಣ ಪಡೆಯುವವರ ಪ್ರಮಾಣವೂ ಹೆಚ್ಚಬೇಕು. ಅದರಲ್ಲೂ ಮುಖ್ಯವಾಗಿ ಮಹಿಳೆಯರ ಸಾಕ್ಷರತೆಯು ಜನಸಂಖ್ಯೆಯನ್ನು ನಿಯಂತ್ರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ ಎಂದೇ ಹೇಳುತ್ತಾರೆ. ಜನಸಂಖ್ಯೆಯನ್ನು ನಿಯಂತ್ರಿಸುವಲ್ಲಿನ ವೈಫಲ್ಯಗಳ ಕುರಿತು ಆಶೀಶ್ ಬೋಸ್‌ರವರು ಈ ಕೆಳಗಿನ ಕಾರಣಗಳನ್ನು ನೀಡುತ್ತಾರೆ.

೧. ಶೀಘ್ರವಾಗಿ ಅನಕ್ಷರತೆಯನ್ನು ತೊಲಗಿಸುವಲ್ಲಿ ಇರುವ ಭಾರತೀಯರ ವೈಫಲ್ಯ

೨. ಜನಸಾಮಾನ್ಯರ ಕನಿಷ್ಠ ಜೀವನಾವಶ್ಯಕತೆಯನ್ನು ಪೂರೈಸುವಲ್ಲಿ ಇರುವ ಕೊರತೆ

೩. ಸಮಾಜದಲ್ಲಿ ಅನಕ್ಷರತೆಯು ವ್ಯಾಪಕವಾಗಿರುವುದರಿಂದ ಜನಸಂಖ್ಯೆಯ ಬೆಳವಣಿಗೆಯ ನಿಯಂತ್ರಣದ ಮಹತ್ವವನ್ನು ತಿಳಿಸಿಕೊಡುವುದರಲ್ಲಿನ ವೈಫಲ್ಯಗಳೇ ಕಾರಣವೆಂದು ಬೋಸ್‌ರವರು ಒತ್ತಿ ಹೇಳುತ್ತಾರೆ.

"ಸಾಕ್ಷರತೆಯಲ್ಲಿ ಕರ್ನಾಟಕದ ಸಾಧನೆ ಉತ್ತಮವಾಗಿದೆ. ರಾಜ್ಯದ ಸಾಕ್ಷರತೆಯ ಪ್ರಮಾಣವೂ ರಾಷ್ಟ್ರದ ಸಾಕ್ಷರತಾ ಪ್ರಮಾಣಕ್ಕಿಂತ ಅಧಿಕವಾಗಿದೆ. ಆದರೆ ಪ್ರಾದೇಶಿಕ ಸ್ವರೂಪ ಮತ್ತು ಮಹಿಳಾ

ಸಾಕ್ಷರತೆಗೆ ಸಂಬಂಧಿಸಿದಂತೆ ಅದರ ಸಾಧನೆ ಹೇಳಿಕೊಳ್ಳುವಂತಿಲ್ಲ. ರಾಜ್ಯದ ಹಿಂದುಳಿದ ಜಿಲ್ಲೆಗಳಲ್ಲಿ ಒಟ್ಟು ಸಾಕ್ಷರತೆಯ ಪ್ರಮಾಣ ಶೇ ೭೦ಕ್ಕಿಂತ ಕಡಿಮೆ ಇದೆ. ಕರ್ನಾಟಕವು ತನ್ನ ಪ್ರಾದೇಶಿಕ ಅಸಮಾನತೆಯನ್ನು ಸರಿಪಡಿಸಿಕೊಳ್ಳುವುದರಲ್ಲಿ ವಿಫಲವಾಗಿರುವುದಕ್ಕೆ ಸಾಕ್ಷರತೆಯ ಪ್ರಾದೇಶಿಕ ಸ್ವರೂಪವು ನಿದರ್ಶನವಾಗಿದೆ."[೪] ಈ ಮಾತುಗಳು ಸಮುದಾಯಗಳಿಗೂ ಅನ್ವಯಿಸುತ್ತದೆ. ಕರ್ನಾಟಕದಲ್ಲಿರುವ ಒಟ್ಟು ಸಾಕ್ಷರತಾ ಪ್ರಮಾಣದಲ್ಲಿ ಪುರುಷ ಸಾಕ್ಷರರ ಪ್ರಮಾಣಕ್ಕಿಂತ ಮಹಿಳಾ ಸಾಕ್ಷರರ ಪ್ರಮಾಣ ಕಡಿಮೆ ಇದೆ. ಈ ಮಾತು ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗೂ ಅನ್ವಯಿಸುವುದೆಂಬುದನ್ನು ಮರೆಯಲಾಗದು. ವೇಶ್ಯಾವಾಟಿಕೆಯನ್ನು ವೃತ್ತಿಯಾಗಿಸಿಕೊಂಡಿರುವ ಬಹುತೇಕ ಮಹಿಳೆಯರು ಬಂದಿರುವ ಸಮುದಾಯಗಳ ಹಿನ್ನೆಲೆಯನ್ನು ಗಮನಿಸಿದಾಗ ತಳಸಮುದಾಯಗಳಾದ ಪರಿಶಿಷ್ಟ ಜಾತಿ, ವರ್ಗ ಹಾಗೂ ಕೆಲವೊಂದು ಹಿಂದುಳಿದ ಸಮುದಾಯಗಳಿಂದ ಬಂದವರಾಗಿರುವರು. ಇವರ ಸಾಕ್ಷರತೆಯ ಪ್ರಮಾಣವು ಮೇಲ್ಜಾತಿಗಳ ಸಾಕ್ಷರತಾ ಪ್ರಮಾಣಕ್ಕಿಂತ ಕೆಳಗಿರುವುದು ಕಂಡುಬರುವುದು.

"ಅಸ್ಪೃಶ್ಯತೆ ಎಂಬುದು ಭಾರತಕ್ಕೆ ಅಂಟಿದ ಕಳಂಕವೇ ಸರಿ. ಅಸ್ಪೃಶ್ಯತೆಯ ಆಚರಣೆ ಸಾಮಾಜಿಕ ಪಿಡುಗಾಗಿದೆ. ಭಾರತದ ಅಸ್ಪೃಶ್ಯತೆಗೂ ಹಾಗೂ ಬಡತನಕ್ಕೂ ನಂಟಿದೆ. ಅದೇ ರೀತಿಯಾಗಿ ಅಸ್ಪೃಶ್ಯತೆಗೂ ಮತ್ತು ಅನಕ್ಷರತೆಗೂ ನಂಟಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬೇಕಾಗಿದೆ. ಭಾರತದಲ್ಲಿ ಅನಕ್ಷರಸ್ಥರ ಪ್ರಮಾಣವು ಅಧಿಕವಾಗಿರಲು ಜಾತಿಯಾಧಾರಿತ ಏಣಿ ಶ್ರೇಣಿಗಳೇ ಕಾರಣವೆಂಬುದನ್ನು ಮರೆಯಲಾಗದು. ರಾಜ್ಯದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ, ವಿಭಾಗದಿಂದ ವಿಭಾಗಕ್ಕೆ ಸಾಕ್ಷರತೆಯ ಪ್ರಮಾಣದಲ್ಲಿ ಅಸಮತೋಲನವಿದೆ. ಪ್ರಾಯಶಃ ಈ ರೀತಿಯ ಅಸಮತೋಲನಕ್ಕೆ ಬಡತನ ಎಷ್ಟು ಕಾರಣವೋ ಅಸ್ಪೃಶ್ಯತೆಯೂ ಅಷ್ಟೇ ಕಾರಣವಾಗಿದೆ"[೫]

**ಕೋಷ್ಟಕ: ೪.೨.೧: ಕರ್ನಾಟಕದ ಸಾಕ್ಷರತೆ: ಚಾರಿತ್ರಿಕ ನೋಟ (ಶೇಕಡವಾರುಗಳಲ್ಲಿ)**

| ವರ್ಷಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ೧೯೫೧ | – | – | ೨೦.೬೦ |
| ೧೯೬೧ | ೩೬.೨೦ | ೧೪.೨೦ | ೨೫.೪೦ |
| ೧೯೭೧ | ೪೧.೬೦ | ೨೧.೦೦ | ೩೧.೫೦ |
| ೧೯೮೧ | ೪೮.೮೦ | ೨೭.೭೦ | ೩೮.೫೦ |
| ೧೯೯೧ | ೬೭.೩೦ | ೪೪.೩೦ | ೫೬.೦೦ |
| ೨೦೦೧ | ೭೬.೧೦ | ೫೬.೦೭ | ೬೬.೬೪ |
| ೨೦೧೧ | ೮೨.೮೫ | ೬೮.೧೩ | ೭೫.೬೦ |

ಮೂಲ: ಸೆನ್ಸಸ್ ಆಫ್ ಇಂಡಿಯಾ ೨೦೧೧, ತಾತ್ಪೂರ್ತಿಕ ಜನಸಂಖ್ಯಾ ಮೊತ್ತ, ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಷನ್, ಕರ್ನಾಟಕ, ಭಾರತ ಸರ್ಕಾರ, ಪು. ೨೮.

**ಕೋಷ್ಟಕ: ೪.೨.೧: ಕರ್ನಾಟಕದ ಸಾಕ್ಷರತೆ: ಚಾರಿತ್ರಿಕ ನೋಟ (ಶೇಕಡವಾರುಗಳಲ್ಲಿ)**




ಟಿಪ್ಪಣಿ: ೧೯೫೧, ೧೯೬೧, ೧೯೭೧ ಈ ಮೂರರ ಸಾಕ್ಷರತಾ ಪ್ರಮಾಣವು ಜನಸಂಖ್ಯೆಯ ಐದು ವರ್ಷಕ್ಕೆ ಮೇಲ್ಪಟ್ಟವರಿಗೆ ಸಂಬಂಧಿಸಿದ್ದರೆ ೧೯೮೧ರ ನಂತರದ ಸಾಕ್ಷರತೆಯು ಏಳು ವರ್ಷಕ್ಕೆ ಮೇಲ್ಪಟ್ಟವರಿಗೆ ಸಂಬಂಧಿಸಿದೆ.

## ೪.೨.೨ ಕರ್ನಾಟಕದ ಸಾಕ್ಷರತೆ: ಚಾರಿತ್ರಿಕ ನೋಟ

ಕರ್ನಾಟಕದ ಸಾಕ್ಷರತೆಯ ಕುರಿತು ಒಂದು ಹಿನ್ನೋಟವನ್ನು ಬೀರಿದರೆ ಸಾಕ್ಷರತೆಯ ಪ್ರಮಾಣ ದಶಕದಿಂದ ದಶಕಕ್ಕೆ ಹೇಗೆ ವೃದ್ಧಿಗೊಳ್ಳುತ್ತಾ ಸಾಗಿದೆಯೆಂಬುದು ಅರ್ಥವಾಗುತ್ತದೆ. ಭಾರತದ ಜನತೆಯನ್ನು ಸಾಕ್ಷರರಾಗಿಸಲು ಹಿಂದಿನಿಂದಲೂ ಹತ್ತು ಹಲವು ಯೋಜನೆಗಳನ್ನು ಸರ್ಕಾರವು ರೂಪಿಸುತ್ತಲೇ ಬಂದಿವೆ. ಈ ಪ್ರಯೋಗಗಳಿಗೆ ಕರ್ನಾಟಕ ಹೊರತಾಗಿಲ್ಲ. ಭಾರತ ಹಮ್ಮಿಕೊಂಡ ಹಲವು ಕಾರ್ಯಕ್ರಮಗಳು ಭಾರತದ ಜನತೆಯನ್ನು ಸಾಕ್ಷರರಾಗಿಸಲು ಬಹುತೇಕ ಯಶಸ್ವಿಯಾಗಿವೆಯೆಂದೇ ಹೇಳಬಹುದು. ಇದಕ್ಕೆ ಉತ್ತಮ ಉದಾಹರಣೆ ಕರ್ನಾಟಕದ ಸಾಕ್ಷರರ ಪ್ರಮಾಣವನ್ನೇ ಗಮನಿಸಬಹುದು. "೧೯೫೧ರಲ್ಲಿ ಕರ್ನಾಟಕದ ಸಾಕ್ಷರತೆಯ ಪ್ರಮಾಣ ಕೇವಲ ಶೇ ೨೦.೬೦ ಮಾತ್ರವಿದೆ. ಅಂದರೆ ಶೇ ೭೯.೪೦ರಷ್ಟು ಜನ ಅನಕ್ಷರರಾಗಿಯೇ ಉಳಿದಿದ್ದರು. ೧೯೬೧ರಲ್ಲಿ ಈ ಪ್ರಮಾಣವು ಶೇ ೨೫.೪೦ರಷ್ಟಾಗಿದೆ. ಇದರಲ್ಲಿ ಪುರುಷರ ಪ್ರಮಾಣ ಶೇ ೩೯.೨೦ ಇದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ ೧೪.೨೦ ಮಾತ್ರವಿದೆ. ೧೯೫೧ಕ್ಕಿಂತ ೧೯೬೧ರ ಸಾಕ್ಷರತಾ ಸಾಧನೆ ಶೇ ೦೫.೬೦ರಷ್ಟು ವೃದ್ಧಿಯಾಗಿದೆ. ೧೯೭೧ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ ೩೧.೫೦ರಷ್ಟಿದೆ. ಇದರಲ್ಲಿ ಪುರುಷರು ಶೇ ೪೧.೬೦ರಷ್ಟು ಸಾಕ್ಷರರಾಗಿದ್ದಾರೆ. ಮಹಿಳೆಯರು ಶೇ ೨೧.೦೦ರಷ್ಟು ಸಾಕ್ಷರರಾಗಿದ್ದಾರೆ. ೧೯೭೧ರ ಸಾಕ್ಷರತೆಯ ಪ್ರಮಾಣದಲ್ಲಿ ಶೇ ೬.೧೦ರಷ್ಟು ಸಾಧನೆಯಾಗಿದೆ.

೧೯೮೧ರ ಸಾಕ್ಷರತಾ ಪ್ರಮಾಣವು ಶೇ ೩೮.೫೦ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆ ಶೇ ೪೮.೮೧ರಷ್ಟಿದ್ದರೆ ಮಹಿಳೆಯರ ಸಾಕ್ಷರತೆ ಶೇ ೨೭.೭೧ರಷ್ಟಿದೆ. ೧೯೭೧ಕ್ಕಿಂತ ೧೯೮೧ರಲ್ಲಿ ಶೇ ೦೭ರಷ್ಟು ವೃದ್ಧಿಯಾಗಿದೆ. ೧೯೯೧ರಲ್ಲಿಯ ಸಾಕ್ಷರತೆಯ ಪ್ರಮಾಣ ಶೇ ೫೬.೦೦ರಷ್ಟಿದೆ. ಇದರಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ ೬೭.೩೦ರಷ್ಟಿದ್ದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಶೇ ೪೪.೩೦ರಷ್ಟಿದೆ. ೧೯೯೧ರ ಸಾಕ್ಷರತೆಯಲ್ಲಿ ಶೇ ೧೭.೫೦ರಷ್ಟು ವೃದ್ಧಿಯಾಗಿದೆ.

೨೦೦೧ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ ೬೬.೬೪ರಷ್ಟಿದೆ. ಇದರಲ್ಲಿ ಪುರುಷರು ಶೇ ೭೬.೧೦ ಹಾಗೂ ಮಹಿಳೆಯರು ಶೇ ೫೬.೦೭ರಷ್ಟು ಸಾಕ್ಷರತೆಯ ಸಾಧನೆ ಮಾಡಿರುವುದು ಕಂಡುಬರುತ್ತದೆ. ಈ ದಶಕದಲ್ಲಿ ವೃದ್ಧಿಗೊಂಡ ಸಾಕ್ಷರತೆಯ ಪ್ರಮಾಣ ಶೇ೧೦.೬೪ರಷ್ಟು ವೃದ್ಧಿಯಾಗಿದೆ.

೨೦೧೧ರಲ್ಲಿಯ ಸಾಕ್ಷರತೆಯ ಪ್ರಮಾಣವು ಶೇ ೭೫.೬೦ರಷ್ಟಿದೆ. ಇದರಲ್ಲಿ ಪುರುಷರು ಶೇ ೮೨.೮೫ ಹಾಗೂ ಮಹಿಳೆಯರು ಶೇ ೭೫.೬೦ರಷ್ಟು ಸಾಕ್ಷರತೆಯ ಸಾಧನೆ ಮಾಡಿರುವುದು ಕಂಡುಬರುತ್ತದೆ. ಈ ದಶಕದಲ್ಲಿ ವೃದ್ಧಿಗೊಂಡ ಸಾಕ್ಷರತೆಯ ಪ್ರಮಾಣ ಶೇ೮.೯೬ರಷ್ಟಿದೆ."[೯]

**ಕರ್ನಾಟಕ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಸಾಕ್ಷರತೆಯ ಪ್ರಮಾಣ**

ರಾಜ್ಯದ ಶೈಕ್ಷಣಿಕ ಪ್ರಮಾಣವು ಒಟ್ಟು ೬೭.೪೩ ಇದೆ. ಇದರಲ್ಲಿ ಪುರುಷರ ಶೈಕ್ಷಣಿಕ ಪ್ರಗತಿಯು ಶೇಕಡ ೭೬.೬೪ ಇದ್ದರೆ ಮಹಿಳೆಯರ ಶೈಕ್ಷಣಿಕ ಪ್ರಗತಿಯು ೫೮.೧೯ ಇದೆ.

೨೦೧೧ರ ಜನಗಣತಿ ಪ್ರಕಾರ ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಪ್ರಗತಿಯು ಒಟ್ಟು ೬೮.೧೯ ಇದೆ. ಪುರುಷರ ಶೈಕ್ಷಣಿಕ ಪ್ರಗತಿಯು ಶೇಕಡ ೭೮.೫೪ ಇದ್ದರೆ ಮಹಿಳೆಯರ ಶೈಕ್ಷಣಿಕ ಪ್ರಗತಿಯು ೫೭.೫೫ ಇದೆ. ಅಂದರೆ ರಾಜ್ಯದ ಶೈಕ್ಷಣಿಕ ಮಟ್ಟಕ್ಕಿಂತ ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಮಟ್ಟವು ಶೇಕಡ ೭.೨೭ರಷ್ಟು ಕಡಿಮೆ ಇದೆ. ಕೊಪ್ಪಳ ಜಿಲ್ಲೆಯ ಜನಸಂಖ್ಯೆಯಲ್ಲಿ ಪುರುಷರ ಶೈಕ್ಷಣಿಕ ಪ್ರಮಾಣಕ್ಕಿಂತ ಮಹಿಳೆಯರ ಶೈಕ್ಷಣಿಕ ಪ್ರಮಾಣವು ಶೇಕಡ ೧೦.೫೩ರಷ್ಟು ಕಡಿಮೆ ಇದೆ.

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಶೈಕ್ಷಣಿಕ ಪ್ರಮಾಣವನ್ನು ನೋಡಿದರೆ ಕೊಪ್ಪಳದ ಶೈಕ್ಷಣಿಕ ಪ್ರಮಾಣಕ್ಕಿಂತ ಬಳ್ಳಾರಿಯ ಶೈಕ್ಷಣಿಕ ಪ್ರಮಾಣವು ಕಡಿಮೆ ಇರುವುದು ತಿಳಿದುಬರುವುದು. ಅದರಲ್ಲೂ ಎರಡೂ ಜಿಲ್ಲೆಗಳ ಮಹಿಳೆಯರ ಶೈಕ್ಷಣಿಕ ಪ್ರಮಾಣಗಳನ್ನು ಗಮನಿಸಿದರೆ ಶೇಕಡ ೧೦.೦೨ರಷ್ಟು ಅಂತರ ಇರುವುದು ಕಂಡುಬರುವುದು.

ಶೈಕ್ಷಣಿಕ ಪ್ರಗತಿಯು ಸಾಮಾನ್ಯರಿಗಿಂತ ತಳಸಮುದಾಯಗಳಲ್ಲಿ ಶೈಕ್ಷಣಿಕ ಪ್ರಮಾಣದ ಅಂತರವು ಇನ್ನೂ ಅಧಿಕವಾಗುತ್ತಾ ಹೋಗುವುದು ತಿಳಿದುಬರುವುದು.

**ರಾಜ್ಯದ ಜಿಲ್ಲಾವಾರು ಸಾಕ್ಷರತೆಯ ಪ್ರಮಾಣ (೨೦೦೧–೨೦೧೧ರ ಮಧ್ಯದ ಅಂತರ)**

ಕರ್ನಾಟಕದ ಜಿಲ್ಲಾವಾರು ಸಾಕ್ಷರತೆಯ ಪ್ರಮಾಣವನ್ನು ಗಮನಿಸಲಾಗಿ ೨೦೦೧ ಹಾಗೂ ೨೦೧೧ರಲ್ಲಾದ ಶೇಕಡವಾರು ಬೆಳವಣಿಗೆಯು ಈ ಕೆಳಗಿನಂತಿದೆ. ೨೦೦೧ ಹಾಗೂ ೨೦೧೧ರ

ಮಧ್ಯದಲ್ಲಿರುವ ಜಿಲ್ಲಾವಾರು ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿಯೂ ಸಾಕ್ಷರತೆಯ ಪ್ರಮಾಣವು ವೃದ್ಧಿಗೊಂಡಿರುವ ಅಂಶ ಕಂಡುಬರುತ್ತದೆ. ಬೆಳಗಾವಿಯ ಸಾಕ್ಷರತೆಯ ಪ್ರಮಾಣವನ್ನು ಗಮನಿಸಿದರೆ ೨೦೦೧ ಹಾಗೂ ೨೦೧೧ರ ಮಧ್ಯದಲ್ಲಿ ಶೇ ೯.೭೩ರಷ್ಟು ಸಾಕ್ಷರತೆಯ ಪ್ರಮಾಣವು ವೃದ್ಧಿಯಾಗಿದೆ. ಅದೇ ರೀತಿ ಬಾಗಲಕೋಟೆಯ ಸಾಕ್ಷರತಾ ಪ್ರಮಾಣ ಶೇ ೧೨.೦೯ರಷ್ಟು ಬೆಳವಣಿಗೆಯಾಗಿದೆ. ಬಿಜಾಪುರದ ಸಾಕ್ಷರತಾ ಪ್ರಮಾಣವು ಶೇ ೧೦.೧೯ ಅಭಿವೃದ್ಧಿಗೊಂಡಿದೆ. ಬೀದರಿನ ಸಾಕ್ಷರತಾ ಪ್ರಮಾಣ ಶೇ ೧೦.೭೬ ವೃದ್ಧಿಗೊಂಡಿದೆ. ರಾಯಚೂರಿನ ಸಾಕ್ಷರತಾ ಪ್ರಮಾಣ ೨೦೦೧ರಲ್ಲಿ ಶೇ ೧೧.೬೫ರಷ್ಟು ಅಭಿವೃದ್ಧಿಗೊಂಡಿದೆ.

ಕೊಪ್ಪಳದ ಸಾಕ್ಷರತಾ ಪ್ರಮಾಣ ಶೇ ೧೩.೧೮ರಷ್ಟು ಬೆಳವಣಿಗೆಗೊಂಡಿದೆ. ಗದಗದ ಸಾಕ್ಷರತಾ ಪ್ರಮಾಣ ಶೇ ೯.೦೭ ರಷ್ಟಿದೆ. ಧಾರವಾಡದ ಸಾಕ್ಷರತಾ ಪ್ರಮಾಣ ಶೇ ೮.೬೯ ವೃದ್ಧಿಗೊಂಡಿದೆ. ಉತ್ತರ ಕನ್ನಡದ ಸಾಕ್ಷರತಾ ಪ್ರಮಾಣ ಶೇ ೭.೪೩ ಬೆಳವಣಿಗೆಯಾಗಿದೆ. ಹಾವೇರಿಯಲ್ಲಿ ಇದು ಶೇ ೯.೮೧ ರಷ್ಟು ಅಭಿವೃದ್ದಿಗೊಂಡಿದೆ. ಬಳ್ಳಾರಿಯ ಸಾಕ್ಷರತಾ ಪ್ರಮಾಣ ಶೇ ೧೦.೪೫ರಷ್ಟು ವೃದ್ಧಿಗೊಂಡಿದೆ. ಚಿತ್ರದುರ್ಗದ ಸಾಕ್ಷರತಾ ಪ್ರಮಾಣ ಶೇ ೯.೩೭ರಷ್ಟು ಅಭಿವೃದ್ಧಿಗೊಂಡಿದೆ. ದಾವಣಗೆರೆಯ ಸಾಕ್ಷರತಾ ಪ್ರಮಾಣ ಶೇ ೮.೬೭ರಷ್ಟು ವೃದ್ಧಿಗೊಂಡಿದೆ. ಶಿವಮೊಗ್ಗದ ಸಾಕ್ಷರತಾ ಪ್ರಮಾಣ ಶೇ ೫.೯೮ರಷ್ಟಿದೆ. ಉಡುಪಿಯ ಸಾಕ್ಷರತಾ ಪ್ರಮಾಣ ಶೇ ೫.೦೪ರಷ್ಟು ಬೆಳವಣಿಗೆಯಾಗಿದೆ. ಚಿಕ್ಕಮಗಳೂರಿನ ಸಾಕ್ಷರತಾ ಪ್ರಮಾಣ ಶೇ ೭.೦೪ ಬೆಳವಣಿಯಾಗಿದೆ. ತುಮಕೂರಿನ ಸಾಕ್ಷರತಾ ಪ್ರಮಾಣ ಶೇ ೭.೩೧ರಷ್ಟು ಅಭಿವೃದ್ಧಿಯಾಗಿದೆ. ಬೆಂಗಳೂರು ನಗರದ ಸಾಕ್ಷರತಾ ಪ್ರಮಾಣ ಶೇ ೫.೫೨ ರಷ್ಟು ವೃದ್ಧಿಯಾಗಿದೆ. ಮಂಡ್ಯದ ಸಾಕ್ಷರತಾ ಪ್ರಮಾಣ ಶೇ ೭.೦೯ ರಷ್ಟು ಬೆಳವಣಿಗೆಯಾಗಿದೆ. ಹಾಸನದ ಸಾಕ್ಷರತಾ ಪ್ರಮಾಣ ೨೦೦೧ರಲ್ಲಿ ಶೇ ೭.೨೬ರಷ್ಟು ಅಭಿವೃದ್ಧಿಗೊಂಡಿದೆ. ದಕ್ಷಿಣ ಕನ್ನಡದ ಸಾಕ್ಷರತಾ ಪ್ರಮಾಣ ೨೦೦೧ರಲ್ಲಿ ಶೇ ೫.೨೭ರಷ್ಟು ವೃದ್ಧಿಗೊಂಡಿದೆ. ಕೊಡಗಿನ ಸಾಕ್ಷರತಾ ಪ್ರಮಾಣ ಶೇ ೪.೫೩ರಷ್ಟು ವೃದ್ಧಿಸಿದೆ. ಮೈಸೂರಿನ ಸಾಕ್ಷರತಾ ಪ್ರಮಾಣ ಶೇ ೯.೦೮ ರಷ್ಟು ಅಭಿವೃದ್ಧಿಗೊಂಡಿದೆ. ಚಾಮರಾಜನಗರದ ಸಾಕ್ಷರತಾ ಪ್ರಮಾಣ ಶೇ ೧೦.೨೫ರಷ್ಟು ಬೆಳವಣಿಗೆ ಕಂಡಿದೆ. ಗುಲ್ಬರ್ಗಾದ ಸಾಕ್ಷರತಾ ಪ್ರಮಾಣ ಶೇ ೧೧.೩೧ ರಷ್ಟು ವೃದ್ಧಿಯಾಗಿದೆ. ಯಾದಗಿರಿಯ ಸಾಕ್ಷರತಾ ಪ್ರಮಾಣ ಶೇ ೧೨.೪೬ ರಷ್ಟು ಬೆಳವಣಿಗೆಯಾಗಿದೆ. ಕೋಲಾರದ ಸಾಕ್ಷರತಾ ಪ್ರಮಾಣ ಶೇ ೮.೪೯ ವೃದ್ಧಿಯಾಗಿದೆ. ಚಿಕ್ಕಬಳ್ಳಾಪುರದ ಸಾಕ್ಷರತಾ ಪ್ರಮಾಣ ಶೇ ೧೦.೮೪ ವೃದ್ಧಿಯಾಗಿದೆ. ಬೆಂಗಳೂರು ಗ್ರಾಮಾಂತರದ ಸಾಕ್ಷರತಾ ಪ್ರಮಾಣ ಶೇ ೮.೭೦ ವೃದ್ಧಿಯಾಗಿ ದೆ. ರಾಮನಗರದ ಸಾಕ್ಷರತಾ ಪ್ರಮಾಣ ಶೇ ೧೪.೮೯ರಷ್ಟು ವೃದ್ಧಿಗೊಂಡಿದೆ. ಕರ್ನಾಟಕದ ಸಾಕ್ಷರತಾ ಪ್ರಮಾಣ ೨೦೦೧ರಲ್ಲಿ ಶೇ ೬೬.೬೪ ಇದ್ದರೆ ೨೦೧೧ರಲ್ಲಿ ಶೇ ೭೫.೬೦ ಇದೆ. ಅಂದರೆ ಕರ್ನಾಟಕದ ಸಾಕ್ಷರತೆಯ ಒಟ್ಟು ವೃದ್ಧಿಯು ಒಂದು ದಶಕದಲ್ಲಿ ಶೇ ೮.೯೬ರಷ್ಟಿದೆ.

೨೦೦೧ರಲ್ಲಿ ಸಾಕ್ಷರತೆಯಲ್ಲಿ ಮುಂಚೂಣಿಯಲ್ಲಿದ್ದ ಜಿಲ್ಲೆಯು ದಕ್ಷಿಣ ಕನ್ನಡ(ಶೇ.೮೩.೩೫)ವಾಗಿದೆ. ಸಾಕ್ಷರತೆಯಲ್ಲಿ ಹಿಂದುಳಿದಿದ್ದ ಜಿಲ್ಲೆಯು ಯಾದಗಿರಿ(ಶೇ೩೯.೯೦) ಆಗಿದೆ. ೨೦೧೧ರಲ್ಲಿ ಸಾಕ್ಷರತೆಯಲ್ಲಿ ಮುಂಚೂಣಿಯಲ್ಲಿರುವ ಜಿಲ್ಲೆ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿರುವುದು ದಕ್ಷಿಣ ಕನ್ನಡ(ಶೇ.೮೮.೬೨)ವಾಗಿದೆ. ಯಾದಗಿರಿಯು ಹಿಂದುಳಿದ ಜಿಲ್ಲೆ (ಶೇ೫೨.೩೬) ಆಗಿದೆ. ಆದರೆ ೨೦೦೧ಕ್ಕೂ ಹಾಗೂ ೨೦೧೧ಕ್ಕೂ ಯಾದಗಿರಿಯ ಸಾಕ್ಷರತೆಯಲ್ಲಿರುವ ಅಂತರವು ಶೇ೧೨.೪೬ರಷ್ಟಿದೆ. ದಕ್ಷಿಣ ಕನ್ನಡ ಜಿಲ್ಲೆಯ ಸಾಕ್ಷರತೆಯ ಅಂತರವು ೨೦೦೧ಕ್ಕಿಂತ ೨೦೧೧ಕ್ಕೆ ಶೇ.೫.೨೭ರಷ್ಟಿದೆ.

**೪.೨.೩ ಕರ್ನಾಟಕದ ವಿಭಾಗವಾರು ಸಾಕ್ಷರತಾ ಪ್ರಮಾಣ ೨೦೦೧-೨೦೧೧ (ಶೇಕಡವಾರುಗಳಲ್ಲಿ)**

ಕರ್ನಾಟಕದ ಒಟ್ಟು ಸಾಕ್ಷರತೆಯ ೨೦೦೧ ಹಾಗೂ ೨೦೧೧ರ ಶೈಕ್ಷಣಿಕ ಅಂತರವು ೮.೯೬ ಇದೆ ಈ ಅಂತರವು ವಿಭಾಗಾವಾರು ಬೆಂಗಳೂರು ವಿಭಾಗದಲ್ಲಿ ೭.೮೪, ಮೈಸೂರು ವಿಭಾಗದಲ್ಲಿ ೭.೫೮, ದಕ್ಷಿಣ ಕನ್ನಡ ವಿಭಾಗದಲ್ಲಿ ೭.೮೪,

**ಕೋಷ್ಟಕ ೪.೨.೩: ಕರ್ನಾಟಕದ ವಿಭಾಗವಾರು ಸಾಕ್ಷರತಾ ಪ್ರಮಾಣ ೨೦೦೧-೨೦೧೧ (ಶೇಕಡವಾರುಗಳಲ್ಲಿ)**

| ವಿವರ | ಪುರುಷರ ಸಾಕ್ಷರತಾ ಪ್ರಮಾಣ | | ಮಹಿಳೆಯರ ಸಾಕ್ಷರತಾ ಪ್ರಮಾಣ | | , ಒಟ್ಟು ಸಾಕ್ಷರತಾ ಪ್ರಮಾಣ | |
|---|---|---|---|---|---|---|
| ವರ್ಷ | ೨೦೦೧ | ೨೦೧೧ | ೨೦೦೧ | ೨೦೧೧ | ೨೦೦೧ | ೨೦೧೧ |
| ವಿಭಾಗ | | | | | | |
| ಉತ್ತರ ಕನ್ನಡ | ೭೨.೦೧ | ೭೯.೬೫ | ೪೮.೩೦ | ೬೧.೧೨ | ೬೦.೩೫ | ೭೦.೫೧ |
| ಕಲಬುರ್ಗಿ | ೬೫.೮೭ | ೭೪.೮೯ | ೪೧.೦೭ | ೫೪.೭೬ | ೫೩.೬೪ | ೬೪.೯೩ |
| ಬೆಂಗಳೂರು | ೮೦.೩೦ | ೮೭.೦೪ | ೬೩.೯೮ | ೭೩.೮೫ | ೭೨..೩೭ | ೮೦.೨೧ |
| ಬೆಳಗಾವಿ | ೭೬.೩೭ | ೮೩.೨೨ | ೫೩.೪೮ | ೬೫.೯೨ | ೬೫.೧೪ | ೭೪.೬೯ |
| ಮೈಸೂರು | ೭೬.೬೨ | ೮೨.೬೯ | ೬೧.೩೧ | ೭೦.೩೯ | ೬೮.೯೨ | ೭೬.೫೦ |
| ದಕ್ಷಿಣ ಕನ್ನಡ | ೭೯.೦೩ | ೮೫.೧೪ | ೬೩.೦೨ | ೭೨.೬೯ | ೭೧.೧೫ | ೭೮.೯೯ |
| ಕರ್ನಾಟಕ | ೭೬.೦೧ | ೮೨.೮೬ | ೫೬.೮೭ | ೬೭.೮೭ | ೬೬.೬೪ | ೭೫.೪೬ |

ಕೃಪೆ: ಸಾಕ್ಷರ ಮಿಷನ್, ಕರ್ನಾಟಕ ಸರ್ಕಾರ

ಬೆಳಗಾವಿ ವಿಭಾಗದಲ್ಲಿ ೯.೫೫, ಗುಲ್ಬರ್ಗಾ ವಿಭಾಗದಲ್ಲಿ ೧೧.೨೯, ಉತ್ತರ ಕನ್ನಡ ವಿಭಾಗದಲ್ಲಿ ೧೦.೧೬ರಷ್ಟಿದೆ.

**ಕೋಷ್ಟಕ ೪.೨.೩: ಕರ್ನಾಟಕದ ವಿಭಾಗವಾರು ಸಾಕ್ಷರತಾ ಪ್ರಮಾಣ ೨೦೦೧-೨೦೧೧ (ಶೇಕಡವಾರುಗಳಲ್ಲಿ)**




## ೪.೨.೪: ಪರಿಶಿಷ್ಟ ಜಾತಿ, ಪಂಗಡದ ಸಾಕ್ಷರತಾ ಪ್ರಮಾಣ ಮತ್ತು ಸಾಕ್ಷರತಾ ಅಂತರ

೨೦೦೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆಯ ಸಾಕ್ಷರತಾ ಪ್ರಮಾಣವು ಶೇ ೬೭.೪ರಷ್ಟಿದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ ೫೭.೪೫ ಇದ್ದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ ೭೬.೨೯ರಷ್ಟಿದೆ. ರಾಜ್ಯದ ಪರಿಶಿಷ್ಟ ಪಂಗಡಗಳ ಸಾಕ್ಷರತಾ ಪ್ರಮಾಣವು ಶೇ ೫೨.೮೦ ಇದೆ. ಇದರಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ ೪೧.೭೦ ಇದ್ದರೆ ಪುರುಷರ ಸಾಕ್ಷರತಾ ಪ್ರಮಾಣ ಶೇ ೬೩.೮೦ರಷ್ಟಿದೆ. ಅಂದರೆ ಸಾಮಾನ್ಯ ಸಾಕ್ಷರತೆಗೂ ಪರಿಶಿಷ್ಟ ಪಂಗಡಗಳ ಸಾಕ್ಷರತೆಗೂ ಇರುವ ಅಂತರ ಒಟ್ಟು -೧೪.೧೪ರಷ್ಟಿದೆ. ಮಹಿಳೆಯರ ಅಂತರ ಶೇ-೧೫.೭೫, ಪುರುಷರ ಅಂತರ ಶೇ-೧೨.೪೯ರಷ್ಟಿದೆ.

೨೦೧೧ರ ಕರ್ನಾಟಕದ ಒಟ್ಟು ಸಾಕ್ಷರರ ಸಂಖ್ಯೆಯು ೪೦,೩೪೦,೯೬೫ ಇದೆ ಇದರಲ್ಲಿ ಪುರುಷರ ಸಂಖ್ಯೆಯು ೨೨೫೦೮೩೮೧, ಮಹಿಳೆಯರ ಸಂಖ್ಯೆಯು ೧೭೮೩೨೫೮೪ ಇದೆ.

## ೪.೨.೫ ೨೦೧೧ ಜನಸಂಖ್ಯಾ ವರದಿ ಪ್ರಕಾರ ಸಾಕ್ಷರತೆಯ ಮಾಹಿತಿ (ಶೇಕಡವಾರುಗಳಲ್ಲಿ)

೨೦೧೧ರ ಜನಗಣತಿ ವರದಿಯ ಪ್ರಕಾರ ರಾಜ್ಯದ ಒಟ್ಟು ಸಾಕ್ಷರತೆಯ ಪ್ರಮಾಣವು ಒಟ್ಟು ೭೫.೩೬ ಇದೆ. ಇದರಲ್ಲಿ ಪುರುಷರು ೮೨.೪೭ ಹಾಗೂ ಮಹಿಳೆಯರು ೬೮.೦೮ರಷ್ಟಿರುವರು.

| ಕೋಷ್ಟಕ: ೪.೨.೫ ೨೦೧೧ ಜನಸಂಖ್ಯಾ ವರದಿ ಪ್ರಕಾರ ಸಾಕ್ಷರತೆಯ ಮಾಹಿತಿ (ಶೇಕಡವಾರುಗಳಲ್ಲಿ) | | | | |
|---|---|---|---|---|
| ಕ್ರಸಂ | ವಿವರ | ಪುರುಷ | ಮಹಿಳೆ | ಒಟ್ಟು |
| ೧ | ರಾಜ್ಯದ ಸಾಕ್ಷರತೆ ಪ್ರಮಾಣ | ೮೨.೪೭ | ೬೮.೦೮ | ೭೫.೩೬ |
| | ಪ.ಜಾತಿ | ೧೭ | ೧೭.೨೯ | ೧೭.೧೫ |
| | ಪ.ಪಂಗಡ | ೬.೮೯ | ೭.೦೨ | ೬.೯೫ |

ಆಧಾರ: ಜನಗಣತಿ ವರದಿ, ೨೦೧೧, ಕರ್ನಾಟಕ ಸರ್ಕಾರ

ಇದರಲ್ಲಿ ಪರಿಶಿಷ್ಟ ಜಾತಿಯ ಸಾಕ್ಷರತೆಯ ಪ್ರಮಾಣ ಒಟ್ಟು ಶೇ. ೧೭.೧೫ ಇದೆ. ಪುರುಷ ಸಾಕ್ಷರರ ಪ್ರಮಾಣ ೧೭, ಮಹಿಳಾ ಸಾಕ್ಷರರ ಪ್ರಮಾಣ ೧೭.೨೯ ಇದೆ. ಪರಿಶಿಷ್ಟ ಪಂಗಡದ ರಾಜ್ಯದ ಒಟ್ಟು ಸಾಕ್ಷರತೆಯ ಪ್ರಮಾಣವು ಒಟ್ಟು ಶೇಕಡ ೬.೯೫ ಇದೆ. ಇದರಲ್ಲಿ ಪುರುಷರು ೬.೮೯ ಹಾಗೂ ಮಹಿಳೆಯರು ೭.೦೨ರಷ್ಟಿರುವರು. ರಾಜ್ಯದ ಒಟ್ಟು ಸಾಕ್ಷರತೆಗೆ ಹೋಲಿಸಿದರೆ ಪರಿಶಿಷ್ಟ ಜಾತಿ ಹಾಗೂ ಪಂಗಡದ ಸಾಕ್ಷರತೆಯ ಪ್ರಮಾಣ ಅತ್ಯಂತ ಕಡಿಮೆಯಿದೆ. ಆದರೆ ಆಶ್ಚರ್ಯವೆಂದರೆ ಪರಿಶಿಷ್ಟ ಜಾತಿ ಹಾಗೂ ಪಂಗಡದ ಪುರುಷರ ಸಾಕ್ಷರತೆಗಿಂತ ಮಹಿಳೆಯರ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿರುವುದನ್ನು ಜನಸಂಖ್ಯಾ ವರದಿ ದಾಖಲಿಸಿದೆ.

**೪.೨.೬ ಬಳ್ಳಾರಿ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣ**

ಬಳ್ಳಾರಿ ಜಿಲ್ಲೆಯಲ್ಲಿ ಸಮೀಕ್ಷೆಯಲ್ಲಿ ದೊರೆತ ಲೈಂಗಿಕ ಕಾರ್ಯಕರ್ತೆಯರಲ್ಲಿ ಪರಿಶಿಷ್ಟ ಜಾತಿಯ ಮಾದಿಗ ಸಮುದಾಯದಲ್ಲಿ ೨೨ ಜನರಲ್ಲಿ ೧೦ಜನ ಸಾಕ್ಷರರು, ಚಲವಾದಿಯಲ್ಲಿ ೧೨ರಲ್ಲಿ ೫ ಸಾಕ್ಷರರು ದೊರೆತಿದ್ದಾರೆ.

ಪರಿಶಿಷ್ಟ ಪಂಗಡದ ನಾಯಕ ಸಮುದಾಯದ ೨೫ ಲೈಂಗಿಕ ಕಾರ್ಯಕರ್ತೆಯರಲ್ಲಿ ೧೫ ಸಾಕ್ಷರರಿರುವುದು ಕಂಡುಬರುತ್ತದೆ.

| ಕೋಷ್ಟಕ ೪.೨.೬: ಬಳ್ಳಾರಿ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣದ ವಿವರ | | | | |
|---|---|---|---|---|
| ಕ್ರಸಂ | ಸಮುದಾಯ | ಒಟ್ಟು ಲೈಂಗಿಕ ಕಾರ್ಯಕರ್ತೆಯರ ಸಂಖ್ಯೆ | ಸಾಕ್ಷರತೆಗೊಂಡ ಲೈಂಗಿಕ ಕಾರ್ಯಕರ್ತೆಯರು | ಅನಕ್ಷರಸ್ಥ ಲೈಂಗಿಕ ಕಾರ್ಯಕರ್ತೆಯರು |
| ೧ | ಮಾದಿಗ | ೨೨ | ೧೦ | ೧೨ |
| ೨ | ಚಲವಾದಿ | ೧೨ | ೦೫ | ೦೭ |

| | | | | |
|---|---|---|---|---|
| ೩ | ನಾಯಕ | ೨೫ | ೧೫ | ೧೦ |
| ೪ | ಬೆಸ್ತ | ೧೮ | ೧೦ | ೦೮ |
| ೫ | ಕುರುಬ | ೦೩ | ೦೧ | ೦೨ |
| ೬ | ಕಾಪು | ೦೬ | ೦೫ | ೦೧ |
| ೭ | ಕಮ್ಮ | ೦೩ | ೦೩ | – |
| ೮ | ಲಿಂಗಾಯತ | ೦೨ | ೦೨ | – |
| ೯ | ಇತರೆ | ೦೯ | ೦೫ | ೦೪ |
| | ಒಟ್ಟು | ೧೦೦ | ೫೬ | ೪೪ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಪ್ರವರ್ಗ ಒಂದರಡಿ ಬರುವ ಬೆಸ್ತ ಸಮುದಾಯದ ೧೮ ಲೈಂಗಿಕ ಕಾರ್ಯಕರ್ತೆಯರಲ್ಲಿ ೧೦ ಸಾಕ್ಷರರು ದೊರೆತಿರುವರು.

**ಕೋಷ್ಟಕ ೪.೨.೬: ಬಳ್ಳಾರಿ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣದ ವಿವರ**




ಹಿಂದುಳಿದ ವರ್ಗಗಳಲ್ಲಿ ಬರುವ ಕುರುಬ ಸಮುದಾಯದ ೩ ಲೈಂಗಿಕ ಕಾರ್ಯಕರ್ತೆಯರಲ್ಲಿ ೧. ಕಾಪು ಸಮುದಾಯದ ೬ ಲೈಂಗಿಕ ಕಾರ್ಯಕರ್ತೆಯರಲ್ಲಿ ೫ ಸಾಕ್ಷರರು. ಕಮ್ಮ ಸಮುದಾಯದ ೩ ಲೈಂಗಿಕ ಕಾರ್ಯಕರ್ತೆಯರಲ್ಲಿ ೩ ಸಾಕ್ಷರರಾಗಿರುವರು. ಲಿಂಗಾಯತ ಸಮುದಾಯದ ೨ ಲೈಂಗಿಕ ಕಾರ್ಯಕರ್ತೆಯರಲ್ಲಿ ೨ ಸಾಕ್ಷರರಿರುವರು. ಮುಸ್ಲಿಂ ಹಾಗೂ ಇತರ ಸಮುದಾಯದ ೯ ಲೈಂಗಿಕ ಕಾರ್ಯಕರ್ತೆಯರಲ್ಲಿ ೫ ಸಾಕ್ಷರರು ದೊರೆತಿರುವರು.

| ಕೋಷ್ಟಕ: ೪.೨.೭: ಕೊಪ್ಪಳ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣ | | | | |
|---|---|---|---|---|
| ಕ್ರಸಂ | ಸಮುದಾಯ | ಒಟ್ಟು ಲೈಂಗಿಕ ಕಾರ್ಯಕರ್ತೆಯರ ಸಂಖ್ಯೆ | ಸಾಕ್ಷರತೆಗೊಂಡ ಲೈಂಗಿಕ ಕಾರ್ಯಕರ್ತೆಯರು | ಅನಕ್ಷರಸ್ಥ ಲೈಂಗಿಕ ಕಾರ್ಯಕರ್ತೆಯರು |
| ೧ | ಮಾದಿಗ | ೨೦ | ೧೦ | ೧೦ |
| ೨ | ಚಲವಾದಿ | ೧೨ | ೦೭ | ೦೫ |
| ೩ | ಲಂಬಾಣಿ | ೦೭ | ೦೨ | ೦೫ |
| ೪ | ನಾಯಕ | ೧೯ | ೧೦ | ೦೯ |
| ೫ | ಬೆಸ್ತ | ೧೧ | ೦೬ | ೦೫ |
| ೬ | ಕುರುಬ | ೦೪ | ೦೧ | ೦೩ |
| ೭ | ಕಾಪು | ೦೭ | ೦೬ | ೦೧ |
| ೮ | ಕಮ್ಮ | ೦೭ | ೦೭ | – |
| ೯ | ಲಿಂಗಾಯತ | ೦೩ | ೦೩ | – |
| ೧೦ | ಇತರೆ | ೧೦ | ೦೮ | ೦೨ |
| | ಒಟ್ಟು | ೧೦೦ | ೬೦ | ೪೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಕೊಪ್ಪಳ ಜಿಲ್ಲೆಯಲ್ಲಿ ಸಮೀಕ್ಷೆಯಲ್ಲಿ ದೊರೆತ ಲೈಂಗಿಕ ಕಾರ್ಯಕರ್ತೆಯರಲ್ಲಿ ಪರಿಶಿಷ್ಟ ಜಾತಿಯ ಮಾದಿಗ ಸಮುದಾಯದಲ್ಲಿ ೨೦ ಜನರಲ್ಲಿ ೧೦ಜನ ಸಾಕ್ಷರರು, ಚಲವಾದಿಯಲ್ಲಿ ೧೨ರಲ್ಲಿ ೭ ಸಾಕ್ಷರರು, ಲಂಬಾಣಿಗರ ೭ರಲ್ಲಿ ೨ ಸಾಕ್ಷರರಾಗಿರುವುದು ಕಂಡುಬರುತ್ತದೆ.

**೪.೨.೮ ಕೊಪ್ಪಳ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಜಾತಿವಾರು ಸಾಕ್ಷರತೆಯ ಪ್ರಮಾಣ**

ಪರಿಶಿಷ್ಟ ಪಂಗಡದ ನಾಯಕ ಸಮುದಾಯದ ೧೯ ಲೈಂಗಿಕ ಕಾರ್ಯಕರ್ತೆಯರಲ್ಲಿ ೧೦ ಸಾಕ್ಷರರಿದ್ದಾರೆ.

ಪ್ರವರ್ಗ ಒಂದರಡಿ ಬರುವ ಬೆಸ್ತ ಸಮುದಾಯದ ೧೧ ಲೈಂಗಿಕ ಕಾರ್ಯಕರ್ತೆಯರಲ್ಲಿ ೬ ಸಾಕ್ಷರರಿದ್ದಾರೆ.

ಹಿಂದುಳಿದ ವರ್ಗಗಳಲ್ಲಿ ಬರುವ ಕುರುಬ ಸಮುದಾಯದ ೪ ಲೈಂಗಿಕ ಕಾರ್ಯಕರ್ತೆಯರಲ್ಲಿ

ಒಬ್ಬರು ಸಾಕ್ಷರರು ದೊರೆತಿರುವರು. ಕಾಪು ಸಮುದಾಯದ ೭ ಲೈಂಗಿಕ ಕಾರ್ಯಕರ್ತೆಯರಲ್ಲಿ ೬ ಸಾಕ್ಷರರು ದೊರೆತಿರುವರು. ಕಮ್ಮ ಸಮುದಾಯದ ೭ ಲೈಂಗಿಕ ಕಾರ್ಯಕರ್ತೆಯರಲ್ಲಿ ೭ ಸಾಕ್ಷರರಾಗಿರುವರು. ಲಿಂಗಾಯತ ಸಮುದಾಯದ ೩ ಲೈಂಗಿಕ ಕಾರ್ಯಕರ್ತೆಯರಲ್ಲಿ ೩ ಸಾಕ್ಷರರಿರುವರು. ಮುಸ್ಲಿಂ ಹಾಗೂ ಇತರ ಸಮುದಾಯದ ೧೦ ಲೈಂಗಿಕ ಕಾರ್ಯಕರ್ತೆಯರಲ್ಲಿ ೮ ಸಾಕ್ಷರರು ದೊರೆತಿರುವರು.

| ಕೋಷ್ಟಕ: ೪.೨.೮: ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರ ಸಾಕ್ಷರತೆಯ ಪ್ರಮಾಣ | | | |
|---|---|---|---|
| ಕ್ರಸಂ | ಜಿಲ್ಲೆ | ಸಾಕ್ಷರತೆ ಹೊಂದಿದವರು | ಅನಕ್ಷರರು |
| ೧ | ಬಳ್ಳಾರಿ | ೫೬ | ೪೪ |
| ೨ | ಕೊಪ್ಪಳ | ೬೦ | ೪೦ |
| | ಒಟ್ಟು | ೧೧೬ | ೮೪ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ




ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯಿಂದ ಸಮೀಕ್ಷೆಗೆ ಒಳಪಡಿಸಿದ ೨೦೦ ಲೈಂಗಿಕ ಕಾರ್ಯಕರ್ತೆಯರಲ್ಲಿ ಸಾಕ್ಷರತೆ ಹೊಂದಿದವರು ಒಟ್ಟು ೧೧೬ ಜನರಿರುವರು. ಅಕ್ಷರಸ್ತರು ೮೪ ಜನರಿರುವರು.

ಶೇಕಡವಾರುಗಳಲ್ಲಿ ಹೇಳುವುದಾದರೆ ಎರಡೂ ಜಿಲ್ಲೆಗಳನ್ನೊಳಗೊಂಡು ಸಾಕ್ಷರತೆ ಹೊಂದಿದ ಲೈಂಗಿಕ ಕಾರ್ಯಕರ್ತೆಯರು ಶೇಕಡ ೫೮, ಅನಕ್ಷರಸ್ಥ ಲೈಂಗಿಕ ಕಾರ್ಯಕರ್ತೆಯರು ಶೇಕಡ ೪೨ರಷ್ಟಿರುವರು.

**೪.೨.೯: ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ ಹಾಗೂ ಇತರ ಸಮುದಾಯವಾರು ಸಾಕ್ಷರತೆ ಹೊಂದಿದ ಲೈಂಗಿಕ ಕಾರ್ಯಕರ್ತೆಯರ ವಿವರ**

ಎರಡು ಜಿಲ್ಲೆಗಳಲ್ಲಿ ಸಮೀಕ್ಷೆಗೊಳಪಟ್ಟ ಲೈಂಗಿಕ ಕಾರ್ಯಕರ್ತೆಯರಲ್ಲಿ ಪರಿಶಿಷ್ಟ ಜಾತಿಯಲ್ಲಿ ಶೇಕಡ ೨೯.೩೧, ಪರಿಶಿಷ್ಟ ಪಂಗಡದಲ್ಲಿ ಶೇಕಡ ೨೧.೫೫, ಹಿಂದುಳಿದ ಜಾತಿ ವರ್ಗಗಳಲ್ಲಿ ೩೭.೯೩ ಹಾಗೂ ಇತರೆ ಸಮುದಾಯಗಳಲ್ಲಿ ೧೧.೨೦ರಷ್ಟು ಲೈಂಗಿಕ ಕಾರ್ಯಕರ್ತೆಯರು ಸಾಕ್ಷರರಾಗಿರುವುದು ಕ್ಷೇತ್ರಕಾರ್ಯದ ಸಮೀಕ್ಷೆಯಿಂದ ತಿಳಿದುಬಂದಿದೆ.

**ಕೋಷ್ಟಕ: ೪.೨.೯: ಬಳ್ಳಾರಿ, ಕೊಪ್ಪಳ ಜಿಲ್ಲೆಗಳ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ ಹಾಗೂ ಇತರ ಸಮುದಾಯವಾರು ಸಾಕ್ಷರತೆ ಹೊಂದಿದ ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸಂ | ವಿವರ | ಸಾಕ್ಷರತೆಗೊಂಡ ಲೈಂಗಿಕ ಕಾರ್ಯಕರ್ತೆಯರು | | |
|---|---|---|---|---|
| | | ಬಳ್ಳಾರಿ | ಕೊಪ್ಪಳ | ಒಟ್ಟು |
| ೧ | ಪರಿಶಿಷ್ಟ ಜಾತಿ | ೧೫ | ೧೯ | ೩೪ |
| ೨ | ಪ.ಪಂಗಡ | ೧೫ | ೧೦ | ೨೫ |
| ೩ | ಹಿ.ಜಾತಿ/ವರ್ಗ | ೨೧ | ೨೩ | ೪೪ |
| ೪ | ಇತರೆ | ೦೫ | ೦೮ | ೧೩ |
| | ಒಟ್ಟು | ೫೬ | ೬೦ | ೧೧೬ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ



ಒಟ್ಟಾಗಿ ಹೇಳುವುದಾದರೆ ಬಳ್ಳಾರಿ ಜಿಲ್ಲೆಯಲ್ಲಿ ಶೇಕಡ ೪೮.೭೭ ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ಶೇಕಡ ೫೧.೭೩ರಷ್ಟು ಲೈಂಗಿಕ ಕಾರ್ಯಕರ್ತೆಯರು ಸಾಕ್ಷರರಾಗಿರುವರು.

### ೪.೨.೧೦ ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಮಟ್ಟ

ಬಳ್ಳಾರಿ ಹಾಗೂ ಕೊಪ್ಪಳದ ಒಟ್ಟು ೨೦೦ ಲೈಂಗಿಕ ಕಾರ್ಯಕರ್ತೆಯರಲ್ಲಿ ಸಾಕ್ಷರತೆಯನ್ನು ಹೊಂದಿದವರು ಒಟ್ಟು ೧೧೬. ಇದರಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯೊಳಗಿನ ಪ್ರಾಥಮಿಕ ಹಂತದ ಶಿಕ್ಷಣ ಪಡೆದವರು ಒಟ್ಟು ೪೯. ಇದರಲ್ಲಿ ಬಹುತೇಕ ೧ನೇ ತರಗತಿಯಿಂದ ೪ನೇ ತರಗತಿಯೊಳಗೆ ಶಾಲೆಯನ್ನು ತೊರೆದವರೇ ಹೆಚ್ಚು. ಐದನೇ ತರಗತಿಗೆ ಶಾಲೆ ತೊರೆದವರು ಬೆರಳೆಣಿಕೆಯಷ್ಟು ಜನ ಮಾತ್ರ. ಬಳ್ಳಾರಿ ಜಿಲ್ಲೆಯಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಶಾಲೆಗೆ ಹೋಗಿದ್ದ ಪರಿಶಿಷ್ಟ ಜಾತಿಯ ಲೈಂಗಿಕ ಕಾರ್ಯಕರ್ತೆಯರು ೮ ಜನ. ಕೊಪ್ಪಳ ಜಿಲ್ಲೆಯಲ್ಲಿ ಈ ಸಮುದಾಯಕ್ಕೆ ಸೇರಿದವರಲ್ಲಿ ಪ್ರಾಥಮಿಕ ಹಂತದವರೆಗೆ ಶಾಲೆಗೆ ಹೋದವರು ೧೧ ಜನ, ಪರಿಶಿಷ್ಟ ಪಂಗಡದಲ್ಲಿ ಈ ಹಂತದವರೆಗೆ ಶಾಲೆಗೆ ಹೋದವರು ಒಟ್ಟು ೧೨ ಜನ. ಇದರಲ್ಲಿ ಬಳ್ಳಾರಿಯ ೮ ಜನ, ಕೊಪ್ಪಳದ ೪ ಜನ ಪ್ರಾಥಮಿಕ ಹಂತದವರೆಗೆ ಶಾಲೆಗೆ ಹೋಗಿರುವವರು ಕಂಡುಬರುತ್ತದೆ. ಹಿಂದುಳಿದ ಜಾತಿಯ ಒಟ್ಟು ೧೫ ಜನ ಪ್ರಾಥಮಿಕ ಹಂತದವರೆಗೆ ಶಿಕ್ಷಣ ಪಡೆದಿದ್ದಾರೆ. ಇದರಲ್ಲಿ ಬಳ್ಳಾರಿಯ ೭, ಕೊಪ್ಪಳದ ೮ ಜನ ಮಹಿಳೆಯರು ಇಲ್ಲಿ ಸೇರಿದ್ದಾರೆ. ಇತರೆ ಸಮುದಾಯದವರಲ್ಲಿ ಬಳ್ಳಾರಿಯಲ್ಲಿ ಒಬ್ಬರು, ಕೊಪ್ಪಳದಲ್ಲಿ ಇಬ್ಬರು ಲೈಂಗಿಕ ಕಾರ್ಯಕರ್ತೆಯರು ಪ್ರಾಥಮಿಕ ಹಂತದವರೆಗೆ ಶಿಕ್ಷಣ ಪಡೆದವರಿರುವರು.

**ಕೋಷ್ಟಕ:೪.೨.೧೦ ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಮಟ್ಟ**

| ವಿವರ | ಪರಿಶಿಷ್ಟ ಜಾತಿ | | ಪರಿಶಿಷ್ಟ ಪಂಗಡ | | ಹಿಂ.ಜಾತಿ/ವರ್ಗ | | ಇತರೆ | | |
|---|---|---|---|---|---|---|---|---|---|
| | ಬಳ್ಳಾರಿ | ಕೊಪ್ಪಳ | ಬಳ್ಳಾರಿ | ಕೊಪ್ಪಳ | ಬಳ್ಳಾರಿ | ಕೊಪ್ಪಳ | ಬಳ್ಳಾರಿ | ಕೊಪ್ಪಳ | ಒಟ್ಟು |
| ಪ್ರಾಥಮಿಕ | ೦೮ | ೧೧ | ೦೮ | ೦೪ | ೦೭ | ೦೮ | ೦೧ | ೦೨ | ೪೯ |
| ಮಾಧ್ಯಮಿಕ | ೦೬ | ೦೬ | ೦೪ | ೦೩ | ೦೬ | ೦೬ | ೦೧ | ೦೨ | ೩೪ |
| ಪ್ರೌಢ | ೦೧ | ೦೨ | ೦೩ | ೦೩ | ೦೫ | ೦೬ | ೦೩ | ೦೩ | ೨೬ |
| ಸ್ನಾತಕ | – | – | – | – | ೦೩ | ೦೩ | – | ೦೧ | ೭ |
| ಇತರೆ | – | – | – | – | – | – | – | – | – |
| ಒಟ್ಟು | ೧೫ | ೧೯ | ೧೫ | ೧೦ | ೨೧ | ೨೩ | ೦೫ | ೦೮ | ೧೧೬ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

## ಕೋಷ್ಟಕ:೪.೨.೧೦ ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಮಟ್ಟ




- ಪರಿಶಿಷ್ಟ ಜಾತಿ ಬಳ್ಳಾರಿ ೮ ೬ ೧ - -
- ಪರಿಶಿಷ್ಟ ಜಾತಿ ಕೊಪ್ಪಳ ೧೧ ೬ ೨ - -
- ಪರಿಶಿಷ್ಟ ಪಂಗಡ ಬಳ್ಳಾರಿ ೮ ೪ ೩ - -
- ಪರಿಶಿಷ್ಟ ಪಂಗಡ ಕೊಪ್ಪಳ ೪ ೩ ೩ - -
- ಹಿಂ.ಜಾತಿ/ವರ್ಗ ಬಳ್ಳಾರಿ ೭ ೬ ೫ ೩ -
- ಹಿಂ.ಜಾತಿ/ವರ್ಗ ಕೊಪ್ಪಳ ೮ ೬ ೬ ೩
- ಇತರೆ ಬಳ್ಳಾರಿ ೧ ೧ ೩ - -
- ಇತರೆ ಕೊಪ್ಪಳ ೨ ೨ ೩ ೧ -

೬ರಿಂದ ೮ರವರಗಿನ ಮಾಧ್ಯಮಿಕ ಹಂತದ ಶಿಕ್ಷಣ ಪಡೆದವರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ೬ ಲೈಂಗಿಕ ಕಾರ್ಯಕರ್ತೆಯರು ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ೬ ಜನ ಕಂಡುಬಂದಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಬಳ್ಳಾರಿಯ ೪ ಹಾಗೂ ಕೊಪ್ಪಳದ ೩ ಜನರಿದ್ದಾರೆ. ಹಿಂದುಳಿದ ವರ್ಗ/ಜಾತಿಯವರಲ್ಲಿ ಬಳ್ಳಾರಿಯ ೬ ಜನ ಹಾಗೂ ಕೊಪ್ಪಳದ ೬ ಹಾಗೂ ಇತರೆ ಸಮುದಾಯದವರಲ್ಲಿ ಬಳ್ಳಾರಿಯಲ್ಲಿ ಒಬ್ಬರು, ಕೊಪ್ಪಳದಲ್ಲಿ ಇಬ್ಬರಿದ್ದಾರೆ.

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಪರಿಶಿಷ್ಟ ಜಾತಿ, ಪಂಗಡಗಳ ಲೈಂಗಿಕ ಕಾರ್ಯಕರ್ತೆಯರಲ್ಲಿ ಪಿಯುಸಿ ನಂತರದ ಪದವಿ ತರಗತಿಗಳವರೆಗೆ ವ್ಯಾಸಂಗ ಮಾಡಿದವರಲ್ಲಿ ಯಾರೂ ಕಂಡುಬಂದಿಲ್ಲ ಹಿಂದುಳಿದ ವರ್ಗ/ಜಾತಿಯವರಲ್ಲಿ ಬಳ್ಳಾರಿಯ ೩ ಹಾಗೂ ಕೊಪ್ಪಳದ ೩ ಜನ ಕಂಡುಬಂದಿದ್ದಾರೆ. ಇತರೆ ಸಮುದಾಯದವರಲ್ಲಿ ಕೊಪ್ಪಳದಲ್ಲಿ ಒಬ್ಬರು ಮಾತ್ರ ಪದವಿ ಶಿಕ್ಷಣ ಪಡೆದವರು ಕಂಡುಬಂದಿದ್ದಾರೆ.

೯ರಿಂದ ೧೨ರವರೆಗಿನ ಪ್ರೌಢ ಶಿಕ್ಷಣ ಪಡೆದವರಲ್ಲಿ ಹೋದವರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿಯ ಲೈಂಗಿಕ ಕಾರ್ಯಕರ್ತೆಯರು ಒಬ್ಬರು ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ಎರಡು ಜನರಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಬಳ್ಳಾರಿಯ ೩ ಜನ ಹಾಗೂ ಕೊಪ್ಪಳದ ೩ ಜನ ಇರುವರು. ಹಿಂದುಳಿದ ವರ್ಗ/ಜಾತಿಯವರಲ್ಲಿ ಬಳ್ಳಾರಿಯ ೫ ಜನ ಹಾಗೂ ಕೊಪ್ಪಳದ ೬ ಜನರಿದ್ದಾರೆ. ಇತರೆ ಸಮುದಾಯದವರಲ್ಲಿ ಬಳ್ಳಾರಿ ಹಾಗೂ ಕೊಪ್ಪಳದಲ್ಲಿ ತಲಾ ಮೂವರಿದ್ದಾರೆ. ಸ್ನಾತಕ ತರಗತಿಯ ಹೊರತಾಗಿ ಇತರ ತರಗತಿಗಳಲ್ಲಿ ವ್ಯಾಸಂಗ ಮಾಡಿದ ಒಬ್ಬ ಲೈಂಗಿಕ ಕಾರ್ಯಕರ್ತೆಯೂ ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ಕಂಡುಬರಲಿಲ್ಲ.

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಪ್ರಾಥಮಿಕ ಹಂತದ ಶಿಕ್ಷಣ ಪಡೆದ ಲೈಂಗಿಕ ಕಾರ್ಯಕರ್ತೆಯರು ಒಟ್ಟು ಶೇಕಡ ೪೨.೨೪. ಮಾಧ್ಯಮಿಕ ತರಗತಿಯವರೆಗೆ ವ್ಯಾಸಾಂಗ ಮಾಡಿದವರು ಶೇಕಡ ೨೯.೩೧, ಪ್ರೌಢ ಶಿಕ್ಷಣ ವ್ಯಾಸಂಗ ಮಾಡಿದವರು ಶೇಕಡ ೨೨.೪೧, ಸ್ನಾತಕ ತರಗತಿಗಳವರೆಗೆ ವ್ಯಾಸಂಗ ಮಾಡಿದ, ಮಾಡುತ್ತಿರುವವರು ಒಟ್ಟು ಶೇಕಡ ೬.೦೩ರಷ್ಟು ಮಹಿಳೆಯರಿರುವುದು ಕಂಡುಬಂದಿದೆ.

ಒಟ್ಟಾರೆಯಾಗಿ ನೋಡಿದರೆ ಲೈಂಗಿಕ ಕಾರ್ಯಕರ್ತೆಯರಾಗಿರುವವರು ಪದವಿ ನಂತರದ ಉನ್ನತ ವ್ಯಾಸಂಗವನ್ನು ಪೂರೈಸಿರುವುದು ಕಂಡುಬರಲಿಲ್ಲ. ಲೈಂಗಿಕ ಕಾರ್ಯಕರ್ತೆಯರು ಪ್ರಾಥಮಿಕ ಹಂತದ ಶಿಕ್ಷಣ ಪಡೆದವರು ಹೆಚ್ಚಿನ ಪ್ರಮಾಣದಲ್ಲಿರುವುದು ಇರುವಂತೆ ಕ್ಷೇತ್ರಕಾರ್ಯದ ಮೂಲಕ ತಿಳಿಯಿತು. ಅವರಲ್ಲಿ ಶೇಕಡ ೫೦ರಷ್ಟು ಮಹಿಳೆಯರು ಪ್ರಾಥಮಿಕ ಹಂತದ ಶಿಕ್ಷಣ ಪಡೆಯದೆ ಅರ್ಧಕ್ಕೆ ಶಾಲೆಬಿಟ್ಟಿರುವ ಮಾಹಿತಿಯೂ ದೊರೆಯಿತು. ಮಾಧ್ಯಮಿಕ ಹಂತಕ್ಕೆ ಬರುವಷ್ಟರಲ್ಲಿ ಪ್ರಾಥಮಿಕ ಹಂತದಲ್ಲಿಗಿಂತ ಕೆಳಗಿಳಿದಿರುವುದು ಕಂಡಿತು. ಹೀಗೆ ಶಿಕ್ಷಣವು ಮೇಲ್ಮುಖವಾಗಿ ಸಾಗಿದಂತೆಲ್ಲಾ ಶಿಕ್ಷಣ ಪಡೆದವರ ಪ್ರಮಾಣವು ಕೆಳಗೆ ಸರಿಯುತ್ತಾ ಸಾಗಿದೆ. ಶೇಕಡ ೬.೦೩ರಷ್ಟು ಮಹಿಳೆಯರು ಸ್ನಾತಕ (ಇಂಜಿನೀರಿಂಗ್, ಬಿಕಾಂ, ಬಿಎ) ತರಗತಿಗಳಲ್ಲಿ ಓದುವ ವಿದ್ಯಾರ್ಥಿನಿಯರಾಗಿದ್ದು ತಮ್ಮ ಕುಟುಂಬಕ್ಕೆ ಹೊರೆಯಾಗದಂತೆ ತಮ್ಮ ಕಾಲಮೇಲೆ ತಾವೇ ನಿಲ್ಲಬೇಕು ಹಾಗೂ ತಮ್ಮ ಅಗತ್ಯಗಳಿಗೆ ಅವಶ್ಯವಾದ ಹಣ ಸಂಪಾದನೆಯನ್ನು ಮಾಡಬೇಕೆಂಬ ಉದ್ದೇಶದಿಂದ ಬಿಡುವಿನ ಸಮಯದಲ್ಲಿ ವೇಶ್ಯಾವೃತ್ತಿ ಮಾಡುವುದಾಗಿ ತಿಳಿಸಿದ್ದಾರೆ.

ಮೇಲಿನ ಒಟ್ಟು ಮಾಹಿತಿಯು ವೇಶ್ಯಾವಾಟಿಕೆಯಲ್ಲಿ ತೊಡಗಿದ ಲೈಂಗಿಕ ಕಾರ್ಯಕರ್ತೆಯರ ಶೈಕ್ಷಣಿಕ ಸ್ಥಿತಿಗತಿಗಳ ಕುರಿತಾಗಿ ತಿಳಿಸುತ್ತದೆ. ಆದರೆ ವೇಶ್ಯಾವಾಟಿಕೆಯಲ್ಲಿ ತೊಡಗಿದ ಮಹಿಳೆಯರಿಗೂ ಒಂದು ವೈಯಕ್ತಿಕ ಜೀವನ ಇದೆ. ಈ ಜೀವನದಲ್ಲಿ ತಂದೆ–ತಾಯಿ, ಅತ್ತೆ–ಮಾವ, ಗಂಡ–ಮಕ್ಕಳು ಹೀಗೆ ನಾನಾ ಕಾರಣಗಳಿಗಾಗಿ ಸಂಸಾರದ ಬಂಧನದೊಳಗೆ ಇರುವರು. ವೇಶ್ಯಾವಾಟಿಕೆಯಲ್ಲಿದ್ದೂ ಮಕ್ಕಳ ಪಾಲನೆ–ಪೋಷಣೆಯ ಜವಾಬ್ದಾರಿಗಳಿವೆ. ಲೈಂಗಿಕ ಕಾರ್ಯಕರ್ತೆಯರು ಸಂಪೂರ್ಣವಾಗಿ ತಮ್ಮ ವಿಳಾಸ ನೀಡದೇ ಇದ್ದುದರಿಂದ ಅವರ ಕುಟುಂಬದ ಹಿನ್ನೆಲೆಯನ್ನು ನೇರವಾಗಿ ಅರಿಯಲು ಸಾಧ್ಯವಾಗಲಿಲ್ಲ. ಆದರೆ ಲೈಂಗಿಕ ಕಾರ್ಯಕರ್ತೆಯರ ಮೂಲಕ ಅವರ ಮಕ್ಕಳ ಶೈಕ್ಷಣಿಕ ಸ್ಥಿತಿಯನ್ನು ಅರಿಯಲು ಪ್ರಯತ್ನಿಸಲಾಯಿತು. ಅದರ ವಿವರ ಕೆಳಗೆ ನೀಡಲಾಗಿದೆ.

**೪.೨.೧೧ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಪ್ರಮಾಣ ಹಾಗೂ ಶೈಕ್ಷಣಿಕ ಸ್ಥಿತಿ.**

ಭಾರತದಲ್ಲಿ ವೈದ್ಯರ ಮಕ್ಕಳು ವೈದ್ಯರು, ವಕೀಲರ ಮಕ್ಕಳು ವಕೀಲರು, ಐಎಎಸ್ ಮಕ್ಕಳು ಐಎಎಸ್‌ಗಳೂ, ರಾಜಕಾರಣಿಗಳ ಮಕ್ಕಳು ರಾಜಕಾರಣಿಗಳಾಗಿರುವುದು ಗೋಚರಿಸುತ್ತದೆ. ಆದರೆ ಇದೇ ನಿಯಮವನ್ನು ಲೈಂಗಿಕ ಕಾರ್ಯಕರ್ತೆಯರು ಅನುಸರಿಸಲು ಹಿಂಜರಿಯುವರು. ಗಂಗಾವತಿಯ

ಬಸ್ ನಿಲ್ದಾಣದ ಹಿಂಭಾಗದಲ್ಲಿರುವ ವೇಶ್ಯಾವಾಟಿಕೆ ಅಡ್ಡೆಯಲ್ಲಿ ಭೇಟಿಯಾದ ವೇಶ್ಯೆಯೊಬ್ಬಳು ಪ್ರಸ್ತುತ ಗರ್ಭಿಣಿಯಾಗಿರುವಳು. (ಅವಳು ಮಗುವನ್ನು ತೆಗೆಸಲು ಪ್ರಯತ್ನಿಸಿದಳಂತೆ. ಆದರೆ ಮೂರು ತಿಂಗಳ ಮೇಲಾಗಿರುವುದರಿಂದ ಗರ್ಭಪಾತ ಮಾಡಿಸುವುದು ಸೂಕ್ತವಲ್ಲ ಎಂದು ವೈದ್ಯರು ಹೇಳಿರುವುದರಿಂದ ಅನಿವಾರ್ಯವಾಗಿ ಗರ್ಭಪಾತ ಮಾಡಿಸಿಕೊಳ್ಳಲಿಲ್ಲವಂತೆ) "ಅವಳು ತನಗೆ ಹೆಣ್ಣುಮಗು ಮಾತ್ರ ಹುಟ್ಟುವುದು ಬೇಡ. ಗಂಡುಮಗು ಹುಟ್ಟಿದರೆ ಕೊನೆಗೆ ಹಮಾಲಿ ಮಾಡಿಯೋ, ಆಟೋ ಡ್ರೈವರಾಗಿಯೋ, ರಿಕ್ಷಾ ತುಳಿದೋ ಬದುಕುವನು, ಹೆಣ್ಣಾದರೆ ತನ್ನಂಥ ವೇಶ್ಯೆಯ ಮಗಳನ್ನು ಮದುವೆಯಾಗುವವರು ಯಾರು. ಮದುವೆಯಾಗದೇ ಹೋದರೂ ಅವಳು ವಯಸ್ಸಿಗೆ ಬಂದ ತರುವಾಯ ತನ್ನಂತೆ ವೇಶ್ಯೆಯಾಗಬೇಕಾದ ಅನಿವಾರ್ಯತೆ ಉಂಟಾಗುವುದು ಎಂಬ ಭಯ ತನಗಿರುವುದಾಗಿ ಹೇಳಿದಳು."

ಪೂರ್ಣ ವೃತ್ತಿನಿರತ ವೇಶ್ಯೆಯರು ತಮಗೆ ಮಕ್ಕಳಾಗಲಿ ಎಂದು ಬಯಸುವುದಿಲ್ಲ. ಆದರೆ ಅನಿವಾರ್ಯವಾಗಿಯೋ, ಅಜಾಗ್ರತೆಯಿಂದಲೋ ಮಗುವಾಗುವುದು. ಮಗುವಾದ ಮೇಲೆ ಅದನ್ನು ಬೀಸಾಡಲಾಗುವುದಿಲ್ಲ. ಅನಿವಾರ್ಯವಾಗಿ ಸಾಕಬೇಕಾಗುವುದು. ಬಹುತೇಕ ಲೈಂಗಿಕ ಕಾರ್ಯಕರ್ತೆಯರು ತಮ್ಮ ಮಕ್ಕಳನ್ನು ತಮ್ಮ ಬಳಿ ಇರಿಸಿಕೊಳ್ಳದೆ ತಮ್ಮಿಂದ ದೂರವಿರುವ ತನ್ನ ಪಾಲಕರ ಬಳಿ ಬಿಡುವುದೇ ಹೆಚ್ಚು. ಮಗು ದೊಡ್ಡದಾದ ತರುವಾಯ ಅದನ್ನು ಯಾವುದಾದರೂ ಆಶ್ರಮ ಶಾಲೆಯಲ್ಲಿ ವ್ಯಾಸಂಗ ಮಾಡಲು ಹಚ್ಚುವುದೇ ಹೆಚ್ಚು.

**ಕೋಷ್ಟಕ:೪.೨.೧೧: ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರ**

| **ಜಿಲ್ಲೆಗಳು** | **ವಿವರ** | | |
|---|---|---|---|
| | **ಗಂಡು** | **ಹೆಣ್ಣು** | **ಒಟ್ಟು** |
| ಬಳ್ಳಾರಿ | ೨೫ | ೨೦ | ೪೫ |
| ಕೊಪ್ಪಳ | ೩೦ | ೧೮ | ೪೮ |
| **ಒಟ್ಟು** | **೫೫** | **೩೮** | **೯೩** |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಬಳ್ಳಾರಿ ಹಾಗೂ ಕೊಪ್ಪಳದ ಜಿಲ್ಲೆಗಳಿಂದ ಒಟ್ಟು ೨೦೦ ಲೈಂಗಿಕ ಕಾರ್ಯಕರ್ತೆಯರನ್ನು ಸಂದರ್ಶಿಸಿದಾಗ ಆ ೨೦೦ ಮಹಿಳೆಯರಲ್ಲಿ ಒಟ್ಟು ಎಪ್ಪತ್ತೈದು ಮಹಿಳೆಯರಿಗೆ ಒಟ್ಟು ೯೩ ಮಕ್ಕಳಿವೆ. ಈ ಮಕ್ಕಳಲ್ಲಿ ೦ ವಯಸ್ಸಿನ ಮಕ್ಕಳಿಂದ ೨೦ರ ವಯೋಮಾನದವರಿದ್ದಾರೆ. ಆ ಮಕ್ಕಳ ವಿವರ ಕೆಳಗೆ ನೀಡಲಾಗಿದೆ.

ಕೋಷ್ಟಕ:೪.೨.೧೧: ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರ




### ೪.೨.೧೨ ಶಾಲೆಗೆ ಹೋಗಲು ಅರ್ಹವಾದ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರ

ಸರ್ಕಾರದ ನಿಯಮದ ಪ್ರಕಾರ ೦–೬ ವಯೋಮಾನದ ಮಕ್ಕಳು ಪ್ರಾಥಮಿಕ ಹಂತದ ಶಾಲೆಗೆ ಸೇರಲು ಅರ್ಹವಲ್ಲ.

| ಕೋಷ್ಟಕ ೪.೨.೧೨: ಶಾಲೆಗೆ ಹೋಗಲು ಅರ್ಹವಾದ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ವಿವರ | | | | | | |
|---|---|---|---|---|---|---|
| ಜಿಲ್ಲೆ ಶಾಲೆಗೆ ಹೋಗಲು ಅರ್ಹರಲ್ಲದ ಮಕ್ಕಳು | | | | ಶಾಲೆಗೆ ಹೋಗಲು ಅರ್ಹವಾಗಿರುವ ಮಕ್ಕಳು | | |
| ಬಳ್ಳಾರಿ | ೦೭ | ೦೩ | ೧೦ | ೧೯ | ೧೬ | ೩೫ |
| ಕೊಪ್ಪಳ | ೧೦ | ೦೫ | ೧೫ | ೨೦ | ೧೩ | ೩೩ |
| ಒಟ್ಟು | ೧೭ | ೦೮ | ೨೫ | ೩೯ | ೨೯ | ೬೮ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಲೈಂಗಿಕ ಕಾರ್ಯಕರ್ತೆಯರ ಮಕ್ಕಳಲ್ಲಿ ೦–೬ ವಯೋಮಾನದದವರು ಬಳ್ಳಾರಿ ಜಿಲ್ಲೆಯಲ್ಲಿ ೧೦, ಕೊಪ್ಪಳ ಜಿಲ್ಲೆಯಲ್ಲಿ ೧೫ ಮಕ್ಕಳಿವೆಯೆಂದು ಕ್ಷೇತ್ರಕಾರ್ಯದ ಸಮೀಕ್ಷೆಯ ಸಂದರ್ಭದಲ್ಲಿ ತಿಳಿದುಬಂದಿತು. ಎರಡೂ ಜಿಲ್ಲೆಗಳಿಂದ ಶಾಲೆಗೆ ಹೋಗಲಾಗದ ಮಕ್ಕಳು ಒಟ್ಟು ೨೫ ಇವೆ. ಇವುಗಳ ಹೊರತಾಗಿ ೬ರ ವಯೋಮಾನ ಹಾಗೂ ಅದರ ಮೇಲ್ಪಟ್ಟ ವಯಸ್ಸಿನ ಮಕ್ಕಳು ಬಳ್ಳಾರಿಯಲ್ಲಿ ೩೫, ಕೊಪ್ಪಳದಲ್ಲಿ ೩೩, ಒಟ್ಟು ೬೮ ಮಕ್ಕಳಿವೆ. ಶಾಲೆಗೆ ಹೋಗಲು ಅರ್ಹವಾದ ಮಕ್ಕಳಲ್ಲಿ ಯಾವ ಯಾವ ಹಂತದ ತರಗತಿಗಳಿಗೆ ಹೋಗುತ್ತಿರುವರು, ಶಾಲೆಗೆ ಹೋಗುತ್ತಿರುವವರೆಷ್ಟು ಹಾಗೂ ಶಾಲೆಯಿಂದ ಹೊರಗುಳಿದ ಮಕ್ಕಳೆಷ್ಟು ಎಂಬುದನ್ನು ಗಮನಿಸಲಾಗಿದೆ.




### ೪.೨.೧೩: ಶಾಲೆಗೆ ಹೋಗುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಶೈಕ್ಷಣಿಕ ವಿವರ

ಲೈಂಗಿಕ ಕಾರ್ಯಕರ್ತೆಯರ ಮಕ್ಕಳಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಾಥಮಿಕ (೧ರಿಂದ ೫ನೇ ತರಗತಿ) ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಒಟ್ಟು ಮಕ್ಕಳು ೧೭, ಇದರಲ್ಲಿ ಗಂಡು ೯ ಮಕ್ಕಳಿದ್ದರೆ ಹೆಣ್ಣು ೮ ಮಕ್ಕಳಿವೆ. ಮಾಧ್ಯಮಿಕ (೬ರಿಂದ ೮ನೇ ತರಗತಿ) ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳು ಒಟ್ಟು ೧೩, ಇದರಲ್ಲಿ ೭ ಗಂಡು ಹಾಗೂ ೬ ಹೆಣ್ಣುಮಕ್ಕಳಿವೆ. ಪ್ರೌಢ ಹಂತದ ಹಂತದ ತರಗತಿಗಳಲ್ಲಿ (೯ರಿಂದ ೧೨ನೇ ತರಗತಿ) ವ್ಯಾಸಂಗ ಮಾಡುತ್ತಿರುವವರಲ್ಲಿ ೨ ಗಂಡು, ೨ ಹೆಣ್ಣುಮಕ್ಕಳಿರುವರು. ಇನ್ನು ಪದವಿ ತರಗತಿಗಳಲ್ಲಿ ವ್ಯಾಸಂಗ ಮಾಡುವವರಲ್ಲಿ ಒಬ್ಬ ಗಂಡು ಹುಡುಗನಿರುವನು.

**ಕೋಷ್ಟಕ:೪.೨.೧೩: ಶಾಲೆಗೆ ಹೋಗುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಶೈಕ್ಷಣಿಕ ವಿವರ**

| | ಬಳ್ಳಾರಿ ಜಿಲ್ಲೆ | | | ಕೊಪ್ಪಳ ಜಿಲ್ಲೆ | | |
|---|---|---|---|---|---|---|
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಪ್ರಾಥಮಿಕ | ೦೯ | ೦೮ | ೧೭ | ೧೦ | ೦೫ | ೧೫ |
| ಮಾಧ್ಯಮಿಕ | ೦೭ | ೦೬ | ೧೩ | ೦೭ | ೦೬ | ೧೩ |
| ಪ್ರೌಢ | ೦೨ | ೦೨ | ೦೪ | ೦೨ | ೦೨ | ೦೪ |
| ಸ್ನಾತಕ | ೦೧ | – | ೦೧ | ೦೧ | – | ೦೧ |
| ಒಟ್ಟು | ೧೯ | ೧೬ | ೩೫ | ೨೦ | ೧೩ | ೩೩ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

**ಕೋಷ್ಟಕ:೪.೨.೧೩: ಶಾಲೆಗೆ ಹೋಗುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳ ಶೈಕ್ಷಣಿಕ ವಿವರ**




ಕೊಪ್ಪಳ ಜಿಲ್ಲೆಯಲ್ಲಿ ಪ್ರಾಥಮಿಕ (೧ರಿಂದ ೫ನೇ ತರಗತಿ) ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಒಟ್ಟು ಮಕ್ಕಳು ೧೫, ಇದರಲ್ಲಿ ಗಂಡು ೧೦ ಮಕ್ಕಳಿದ್ದರೆ ೫ ಹೆಣ್ಣುಮಕ್ಕಳಿವೆ. ಮಾಧ್ಯಮಿಕ (೬ರಿಂದ ೮ನೇ ತರಗತಿ) ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳು ಒಟ್ಟು ೧೩, ಇದರಲ್ಲಿ ೭ ಗಂಡು ಹಾಗೂ ೬ ಹೆಣ್ಣುಮಕ್ಕಳಿವೆ. ಪ್ರೌಢ ಹಂತದ ಹಂತದ ತರಗತಿಗಳಲ್ಲಿ (೯ರಿಂದ ೧೨ನೇ ತರಗತಿ) ವ್ಯಾಸಂಗ ಮಾಡುತ್ತಿರುವವರಲ್ಲಿ ೨ ಗಂಡು, ೨ ಹೆಣ್ಣುಮಕ್ಕಳಿದ್ದಾರೆ. ಇನ್ನು (ಪದವಿ) ತರಗತಿಗಳಲ್ಲಿ ವ್ಯಾಸಂಗ ಮಾಡುವವರಲ್ಲಿ ಒಬ್ಬ ಪುರುಷನಿರುವುದು.

ಒಟ್ಟಾರೆಯಾಗಿ ಹೇಳುವುದಾದರೆ ಬಳ್ಳಾರಿ ಜಿಲ್ಲೆಯಲ್ಲಿ ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಒಟ್ಟು ಮಕ್ಕಳು ೩೫ ಇವೆ. ಇದರಲ್ಲಿ ಗಂಡು ೧೯ ಹಾಗೂ ಹೆಣ್ಣು ೧೬ ಹುಡುಗರಿರುವರು. ಕೊಪ್ಪಳ ಜಿಲ್ಲೆಯಲ್ಲಿ ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಒಟ್ಟು ಮಕ್ಕಳು ೩೩ ಇವೆ. ಇದರಲ್ಲಿ ಗಂಡು ೨೦ ಹಾಗೂ ಹೆಣ್ಣು ೧೩ ಹುಡುಗರಿದ್ದಾರೆ.

**೪.೨.೧೪: ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳು**

ಎರಡೂ ಜಿಲ್ಲೆಗಳನ್ನು ಸೇರಿ ಒಟ್ಟು ವ್ಯಾಸಂಗ ಮಾಡುತ್ತಿರುವ ಮಕ್ಕಳು ೬೮ ಜನರಿರುವರು. ಇದರಲ್ಲಿ ಶೇಕಡ ೫೭.೩೫ ಗಂಡುಮಕ್ಕಳಿದ್ದರೆ ಶೇಕಡ ೪೨.೬೫ ಮಹಿಳೆಯರಿರುವರು. ಅಂದರೆ ಲೈಂಗಿಕ ಕಾರ್ಯಕರ್ತೆಯರ ಮಕ್ಕಳಲ್ಲಿ ಗಂಡು-ಹೆಣ್ಣು ಮಕ್ಕಳ ನಡುವೆ ಶೇಕಡ ೧೪.೭ ಅಂತರವಿರುವುದು ತಿಳಿದುಬರುವುದು.

| ಕೋಷ್ಟಕ: ೪.೨.೧೪: ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳು | | | |
|---|---|---|---|
| ಜಿಲ್ಲೆ | ಗಂಡು | ಹೆಣ್ಣು | ಒಟ್ಟು |
| ಬಳ್ಳಾರಿ | ೧೯ | ೧೬ | ೩೫ |
| ಕೊಪ್ಪಳ | ೨೦ | ೧೩ | ೩೩ |
| ಒಟ್ಟು | ೩೯ | ೨೯ | ೬೮ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

**ಕೋಷ್ಟಕ: ೪.೨.೧೪: ವಿವಿಧ ಹಂತದ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ ಲೈಂಗಿಕ ಕಾರ್ಯಕರ್ತೆಯರ ಮಕ್ಕಳು**




ಭಾರತೀಯ ಸಮಾಜದಲ್ಲಿ ಲಿಂಗ ವ್ಯವಸ್ಥೆಯಲ್ಲಿ ಸಮಾನತೆ ಬರಬೇಕಾದರೆ ಮುಖ್ಯವಾಗಿ ಸಾಮಾಜಿಕವಾಗಿ ಶೋಷಣೆಗೆ ಒಳಗಾದ ಮಹಿಳೆಯರು ಹಾಗೂ ಅವರ ಮಕ್ಕಳು ಶಿಕ್ಷಣವನ್ನು ಪಡೆಯಲೇಬೇಕು. ಆ ಕಾರಣಕ್ಕಾಗಿಯೇ ಸಂವಿಧಾನದಲ್ಲಿ ಕಳಂಕಿತ, ಶೋಷಣೆಗೊಳಗಾದ ಮಹಿಳೆಯರು ಹಾಗೂ ಅವರ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಡಲಾಗುತ್ತಿದೆ. ಕಳಂಕಿತ ಮಹಿಳೆಯರೆಂದು ಸಮಾಜವು ಪರಿಗಣಿಸುತ್ತಿರುವ ಲೈಂಗಿಕ ಕಾರ್ಯಕರ್ತೆಯರು ಸ್ವಹಿತಾಸಕ್ತಿಯಿಂದೇನೂ ಆ ವೃತ್ತಿಯನ್ನು ಅಪ್ಪಿಕೊಂಡಿಲ್ಲ. ಜೀವನದ ಅನಿವಾರ್ಯತೆಗಳು ಅವರನ್ನು ಆ ವೃತ್ತಿಗೆ ಇಳಿಯುವಂತೆ ಮಾಡಿದೆ. ಜೀವನ ನಿರ್ವಹಣೆಗೆ ಅವಶ್ಯವಾದ ಎಲ್ಲಾ ಬಾಗಿಲುಗಳು ಮುಚ್ಚಿದಾಗ ಅನಿವಾರ್ಯವಾಗಿ ಲೈಂಗಿಕ ಕಾರ್ಯಕರ್ತೆಯರಾಗಲು ಮಹಿಳೆಯರು ದೃಢ ನಿರ್ಧಾರ ಮಾಡಿದ್ದಾರೆ ಎಂಬುದು ಕ್ಷೇತ್ರಕಾರ್ಯದ

ಮೂಲಕ ತಿಳಿದುದಂದಿದೆ. ಆದರೆ ತಮ್ಮಂತೆ ತಮ್ಮ ಮಕ್ಕಳು ಕಳಂಕಿತರೆಂದು ಸಮಾಜದಲ್ಲಿ ಗುರುತಿಸಬಾರದು ಎಂಬ ತಮ್ಮ ವಾತಾವರಣದಿಂದ ದೂರವಿರಿಸಿ ಶಿಕ್ಷಣ ಕೊಡಿಸುತ್ತಿರುವುದಾಗಿ ತಿಳಿಸಿದ್ದಾರೆ.

ಲೈಂಗಿಕ ಕಾರ್ಯಕರ್ತೆಯರೂ ಕೂಡ ತಮ್ಮ ಗಂಡುಮಕ್ಕಳ ಶಿಕ್ಷಣಕ್ಕೆ ನೀಡಿದ ಪ್ರಾಧಾನ್ಯತೆಯನ್ನು ಹೆಣ್ಣುಮಕ್ಕಳಿಗೆ ನೀಡುತ್ತಿಲ್ಲ ಎಂಬುದನ್ನು ಮೇಲಿನ ಅಂಕಿ ಅಂಶಗಳಿಂದ ತಿಳಿಯುವುದು.

**೪.೩. ಆರ್ಥಿಕ ಸ್ಥಿತಿಗತಿ**

ವೇಶ್ಯಾವಾಟಿಕೆಯಂಬುದು ತುಂಬಾ ಪ್ರಾಚೀನ ಪದ್ಧತಿಗಳಲ್ಲಿ ಒಂದು. ಭಾರತ, ಪಶ್ಚಿಮ ಏಷ್ಯಾ, ಬ್ಯಾಬಿಲೋನಿಯ, ಪೂರ್ವ ಪ್ರಾಂತ್ಯ, ಮಧ್ಯ ಅಮೇರಿಕಾ, ಪಶ್ಚಿಮ ಆಫ್ರಿಕಾ, ಸಿರಿಯಾ, ಫೊನೋಷಿಯಾ, ಅರೇಬಿಯಾ, ಈಜಿಪ್ಟ್, ಗ್ರೀಸ್ ಮತ್ತು ರೋಮ್ ಮೊದಲಾದ ದೇಶಗಳಲ್ಲಿ ವೇಶ್ಯಾ ಪದ್ಧತಿ ಆಸ್ತಿತ್ವದಲ್ಲಿದ್ದುದ್ದನ್ನು ಹಾಗೂ ಗೌರವದ ಸ್ಥಾನವನ್ನು ಹೊಂದಿದ ವೃತ್ತಿಯಾಗಿತ್ತು ಎಂಬುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಧರ್ಮ–ದೇವರುಗಳ ಹೆಸರಿನಲ್ಲಿ ಆಸ್ತಿತ್ವಕ್ಕೆ ಬಂದ ಈ ಪದ್ಧತಿ ಕ್ರಮೇಣಾ ಸಮಾಜಿಕ ಸ್ವರೂಪವನ್ನು ತಾಳಿತು. ಇಂದಿಗೂ ಭಾರತದಲ್ಲಿ ದೇವದಾಸಿ ಪದ್ಧತಿಯು ಅಸ್ತಿತ್ವದಲ್ಲಿದ್ದು ಅದರ ಹಿನ್ನೆಲೆಯಲ್ಲಿ ವೇಶ್ಯಾವಾಟಿಕೆ ನಡೆಯುವುದನ್ನು ಕಾಣುತ್ತಿದ್ದೇವೆ. ಹೀಗೆಂದ ಮಾತ್ರಕ್ಕೆ ದೇವದಾಸಿಯರೆಲ್ಲಾ ವೇಶ್ಯೆಯರೆಂದು ಪರಿಗಣಿಸಲಾಗುವುದಿಲ್ಲ. ಆದರೆ ಬಹುಪಾಲು ದೇವದಾಸಿಯರು ದುಡುಮೆಯ ಅನ್ಯ ಮಾರ್ಗ ಕಾಣದೆ ವೇಶ್ಯಾ ವೃತ್ತಿಗಿಳಿದಿರುವರು. ಹಾಗೆಯೇ ದೇವದಾಸಿಯಲ್ಲದ ಎಷ್ಟೋ ಸಾಮಾನ್ಯ ಮಹಿಳೆಯರೂ ವೇಶ್ಯಾವೃತ್ತಿಯನ್ನು ಅವಲಂಭಿಸಿಯೇ ಜೀವನ ನಿರ್ವಹಣೆ ಮಾಡುತ್ತಿರುವರು.

ಸಮಾಜ ವಿಜ್ಞಾನಿಗಳು ಇಂದು ವೇಶ್ಯೆಯರನ್ನು ಗೌರವಯುತವಾಗಿ ಲೈಂಗಿಕ ಕಾರ್ಯಕರ್ತೆಯರೆಂದು ಕರೆಯುತ್ತಾರೆ. ವಿಶ್ವದಲ್ಲಿಂದು ವೇಶ್ಯಾವೃತ್ತಿ ಇರದ ರಾಷ್ಟ್ರವಿಲ್ಲ, ವ್ಯಭಿಚಾರಿಗಳಿರದ ನಾಡಿಲ್ಲ ಎನ್ನುವ ಸ್ಥಿತಿ ಇಂದು ನಿರ್ಮಾಣಗೊಂಡಿದೆ. ಔದ್ಯೋಗೀಕರಣದ ಪರಿಣಾಮವಾಗಿ ದಿನೇ ದಿನೇ ನಗರಗಳು ಅಡ್ಡಾದಿಡ್ಡಿಯಾಗಿ ಬೆಳೆಯುತ್ತಿವೆ. ಇಂತಹ ನಗರೀಕರಣಗಳು ವೇಶ್ಯಾವೃತ್ತಿಗೆ ಹೆಚ್ಚು ಅವಕಾಶಗಳನ್ನು ಕಲ್ಪಿಸಿವೆ. ಇಂದಿನ ಆಧುನಿಕ ನಗರಗಳಲ್ಲಿ ಇತರ ಉದ್ಯೋಗಗಳಂತೆ ವೇಶ್ಯಾವೃತ್ತಿ ಒಂದು ಪ್ರಮುಖ ಉದ್ಯಮವಾಗಿ ಬೆಳೆಯತೊಡಗಿದೆ. ಆರ್ಥಿಕವಾಗಿ ಸಂಕಷ್ಟದಲ್ಲಿರುವ, ನಿರುದ್ಯೋಗದಲ್ಲಿರುವ ಮಹಿಳೆಯರಿಗೆ ವೇಶ್ಯಾವಾಟಿಕೆಯೆಂಬುದು ಬಂಡವಾಳ ತೊಡಗಿಸಬೇಕಿಲ್ಲದ, ಆರ್ಥಿಕವಾಗಿ ಸ್ವಲ್ಪ ಕೈಹಿಡಿಯಬಲ್ಲ ಉದ್ಯಮವಾಗಿದೆ. ನಗರಗಳಲ್ಲಿನ ಜನಸಂಖ್ಯೆ ಹೆಚ್ಚಿದಂತೆ ಅವುಗಳಲ್ಲಿನ ವೇಶ್ಯೆಯರ ಸಂಖ್ಯೆಯೂ ಹೆಚ್ಚುತ್ತಿದೆ. ಲೀಲಾ ಸಂಪಂಗಿಯವರು ತಿಳಿಸುವಂತೆ "ಪ್ರತಿದಿನ ಕನಿಷ್ಠ ೨೦೦ ಮಹಿಳೆಯರು ವೇಶ್ಯಾವೃತ್ತಿಯ ಜಾಲದೊಳಗೆ ಸಿಲುಕುತ್ತಿರುವರಂತೆ"[೬] ವೇಶ್ಯೆಯರನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಅವರ ಮೂಲಕ ಹಣ ಸಂಪಾದಿಸುವ ವೇಶ್ಯಾವಾಟಿಕೆ ಅಡ್ಡೆಗಳು, ಹೋಟೇಲುಗಳು, ವಸತಿ ಗೃಹಗಳು

ಇಂದು ಪ್ರತಿ ನಗರದಲ್ಲಿಯೂ ಕಾಣಸಿಗುತ್ತವೆ. ನಗರಗಳ ನಿರ್ದಿಷ್ಟ ಮನೆ, ವಸತಿ ಗೃಹ, ಬೀದಿ, ಬಡಾವಣೆಗಳು ವೇಶ್ಯಾವೃತ್ತಿಗೆ ತಾಣಗಳಾಗಿವೆ. ಜಗತ್ತಿನ ಅತ್ಯಂತ ಹಳೆಯ ಉದ್ಯೋಗಗಳಲ್ಲಿ ವೇಶ್ಯಾವೃತ್ತಿಯೂ ಒಂದಾಗಿದೆ. ಸಾಮಾಜಿಕ ಸಮಸ್ಯೆಯೆಂದು ವೇಶ್ಯಾವೃತ್ತಿಯನ್ನು ಸಮಾಜಶಾಸ್ತ್ರಜ್ಞರು ಪರಿಗಣಿಸುವರಾದರೂ ಅದೊಂದು ಆರ್ಥಿಕ ಮೂಲದ ವೃತ್ತಿಯಾಗಿದೆ. ವೇಶ್ಯಾವಾಟಿಕೆಯೆಂಬುದು ಪುರುಷ–ಸ್ತ್ರೀ ನಡುವೆ ನಡೆಯುವ ವ್ಯವಹಾರ. ಹಣಕೊಟ್ಟು ದೈಹಿಕ ಸುಖವನ್ನು ಕೊಳ್ಳುವಂಥದ್ದು. ಇಲ್ಲಿ ತಾತ್ಕಾಲಿಕವಾಗಿ ದೇಹವನ್ನು ಹಂಚಿಕೊಳ್ಳುವವಳ ಇಷ್ಟಾ ಇಷ್ಟಗಳನ್ನು ಯಾರೂ ಕೇಳುವುದಿಲ್ಲ. ಇಷ್ಟವಿಲ್ಲದಿದ್ದರೂ ಇಷ್ಟವಿದ್ದವಳಂತೆ ನಾಟಕ ಮಾಡಬೇಕಾದ ಅನಿವಾರ್ಯತೆ ಇಲ್ಲಿ ಲೈಂಗಿಕ ಕಾರ್ಯಕರ್ತೆಯದ್ದಾಗಿರುತ್ತದೆ. ಪ್ರೇಮ, ಪ್ರೀತಿ ಇತ್ಯಾದಿ ಪದಗಳಿಗೆ ಇಲ್ಲಿ ಆಸ್ಪದ ಇರುವುದಿಲ್ಲ. ಕಾಮೋದ್ರೇಕಿತ ಪುರುಷರನ್ನು ಹಣಪಡೆದು ತೃಪ್ತಿಗೊಳಿಸುವಷ್ಟಕ್ಕೆ ಮಾತ್ರ ಇವಳ ವ್ಯವಹಾರ ಸೀಮಿತವಾಗಿರುವುದು.

ಭಾರತದಲ್ಲಿನ ವೇಶ್ಯೆಯರು ಹಿಂದೊಮ್ಮೆ ಅತಿ ಉತ್ತಮ ಸ್ಥಿತಿಯ ಜೀವನ ನಡೆಸಿದ ಉದಾಹರಣೆಗಳಿವೆ. ಮಧ್ಯಕಾಲೀನ ಕರ್ನಾಟಕದಲ್ಲಿ ರಾಜ ಮಹಾರಾಜರಿಗೆ, ಪಾಳೆಯಗಾರರಿಗೆ, ಅವರ ಸೈನಿಕರಿಗೆ ತೃಪ್ತಿಪಡಿಸುವ ಕಾಯಕವನ್ನು ನಡೆಸುತ್ತಿದ್ದ ವೇಶ್ಯೆಯರ ಕುರಿತ ಉದಾಹರಣೆಗಳು ಸಾಕಷ್ಟಿವೆ. ಇವರು ವೇಶ್ಯಾವೃತ್ತಿಯನ್ನು ಪವಿತ್ರ ಕಾರ್ಯವೆಂದೇ ಭಾವಿಸಿದ್ದರು. ತಮ್ಮ ವೇಶ್ಯಾವೃತ್ತಿಯಿಂದ ಬಂದ ಸಂಪತ್ತನ್ನು ಜನೋಪಕಾರಕ್ಕಾಗಿ ವಿನಿಯೋಗಿಸಿದ ಉದಾಹರಣೆಗಳಿವೆ. ಲಕ್ಷ್ಮೇಶ್ವರದ ಬಾವಿ, ಶಾಂತಿಸಾಗರವೆಂದು ಕರೆಯುವ ಸೂಳೆಕೆರೆ ಇತ್ಯಾದಿಗಳು ವೇಶ್ಯೆಯರು ಸಾರ್ವಜನಿಕರಿಗಾಗಿ, ಪಶುಪಕ್ಷಿಗಳಿಗಾಗಿ ಒಳಿತನ್ನು ಮಾಡಿದ ಉದಾಹರಣೆಗೆ ಸಾಕ್ಷಿಯಾಗಿ ಇಂದಿಗೂ ಜೀವಂತವಾಗಿವೆ. ಆದರೆ ಪ್ರಸ್ತುತ ವೇಶ್ಯೆಯರು ತಮ್ಮ ಕುಟುಂಬದ ಉಳಿವಿಗಾಗಿ, ಬದುಕಿನ ಅನಿವಾರ್ಯತೆಗಾಗಿ ವೇಶ್ಯಾವೃತ್ತಿಯನ್ನು ಮಾಡುವುದು ಕಂಡುಬರುತ್ತಿದೆ.

ಕರ್ನಾಟಕದ ಲೈಂಗಿಕ ಕಾರ್ಯಕರ್ತರಲ್ಲಿ ಪೂರ್ಣಾವಧಿಯಾಗಿ ಲೈಂಗಿಕ ಕಾರ್ಯಕರ್ತೆಯಾಗಿ ಜೀವನ ನಿರ್ವಹಣೆ ಮಾಡುವವರು ಹಾಗೂ ವೇಶ್ಯಾವಾಟಿಕೆಯನ್ನು ಉಪಕಸುಬನ್ನಾಗಿಸಿಕೊಂಡ ಲೈಂಗಿಕ ಕಾರ್ಯಕರ್ತೆಯರನ್ನು ನೋಡುತ್ತೇವೆ. ಲೈಂಗಿಕ ಕಾರ್ಯಕರ್ತೆಯಾದವರ ಕೌಟಂಬಿಕ ಹಿನ್ನೆಯನ್ನು ನೋಡಲಾಗಿ ಕಂಡುಬಂದ ಅಂಶಗಳು ಈ ಕೆಳಗಿನಂತವೆ.

- ಲೈಂಗಿಕ ಕಾರ್ಯಕರ್ತೆಯರಲ್ಲಿ ಬಹುತೇಕ ಕುಟುಂಬದ ಪುರುಷರು ತಮ್ಮ ಕುಟುಂಬದ ಕುರಿತು ನಿಷ್ಕಾಳಜಿ ತೋರಿಸುವವನಾಗಿರುತ್ತಾನೆ ಇಲ್ಲವೇ ಗಂಡು ದಿಕ್ಕಿಲ್ಲದ ಕುಟುಂಬದಿಂದ ಮಹಿಳೆ ಬಂದಿರುತ್ತಾಳೆ.
- ದುಡಿದು ಸಾಕಲಾಗದ ಪುರುಷನು ಮನೆಯ ಒಡೆಯನಾಗಿರುತ್ತಾನೆ.

- ತಂದೆ ತಾಯಿಯರ ನಿರಂತರ ಜಗಳದಿಂದ ರೋಸಿ ಮನೆಬಿಟ್ಟು ಹೊರನಡೆದ ಮಹಿಳೆ
- ಪಾಲಕರ ಅತಿಯಾದ ಮಧ್ಯ ಸೇವನೆ
- ಬಡತನ
- ಧಾರ್ಮಿಕ ಕಾರಣಗಳಿಗಾಗಿ ವೇಶ್ಯೆಯರಾದವರು.
- ಹಣಕಾಸಿನ ದುಡುಮೆಗಾಗಿ ಸ್ವತಃ ಗಂಡ, ಪಾಲಕರು ಹೆಣ್ಣನ್ನು ಪಾಲಿಕೆಗೆ ಒಡ್ಡುವುದು
- ರಿಮ್ಯಾಂಡ್ ಹೋಮ್, ಮಹಿಳಾ ಸುರಕ್ಷತಾ ಕೇಂದ್ರಗಳ ಅಧಿಕಾರಿಗಳು ಅಲ್ಲಿರುವ ಮಹಿಳೆಯರನ್ನು ಒತ್ತಾಯಪೂರ್ವಕವಾಗಿ ವೇಶ್ಯಾವಾಟಿಕೆಯಲ್ಲಿ ·ತೊಡಗಲು ಪ್ರೋತ್ಸಾಹಿಸುವುದು
- ತಳಸಮುದಾಯಕ್ಕೆ ಸೇರಿ ಪರರಲ್ಲಿ ಕೆಲಸ ಮಾಡುವ ಕುಟುಂಬಕ್ಕೆ ಸೇರಿರುವುದು –ಹೀಗೆ ನಾನಾ ಕಾರಣಗಳಿಂದ ಹದಿಹರೆಯದ ಹೆಣ್ಣು ವೇಶ್ಯಾವಾಟಿಕೆಗೆ ಕಾಲಿರಿಸುವಂತಾಗಿದೆ.

ಇಂದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮಹಿಳಾ ಸಬಲೀಕರಣಕ್ಕಾಗಿಯೇ ಹತ್ತು ಹಲವು ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಿವೆ. ದುಡುಮೆಗೆ ಅನ್ಯ ಮಾರ್ಗಗಳಿದ್ದರೂ ಬಹುತೇಕ ಮಹಿಳೆಯರು ಸಮಾಜದಲ್ಲಿ ಕಳಂಕಿತವಾದ ವೇಶ್ಯಾವೃತ್ತಿಯನ್ನು ಆಯ್ಕೆಮಾಡಿಕೊಳ್ಳುವುದಕ್ಕೆ ಇರುವ ಕಾರಣಗಳೇನು ಎಂಬುದು ಪ್ರಶ್ನೆಯಾಗಿ ಕಾಡುತ್ತದೆ.

ಮುಖ್ಯವಾಗಿ ಮಹಿಳೆಯರನ್ನು ದ್ವಿತೀಯ ದರ್ಜೆಯಲ್ಲಿಯೇ ಇರಿಸಿ ನೋಡುವ ಪುರುಷಶಾಹಿಯು ಕೃಷಿ ಸಂಬಂಧಿ ಕೂಲಿಯಿಂದ ಹಿಡಿದು ಎಲ್ಲಾ ಶ್ರಮಶಕ್ತಿಯ ಕೆಲಸಗಳಿಗೂ ಪುರುಷರಿಗಿಂತ ಕಡಿಮೆ ಕೂಲಿಯನ್ನು ನಿಗದಿಪಡಿಸಿದೆ. ಪುರುಷರಿಗೆ ಸಮಾನವಾದ ಆಲೋಚನಾ ಕ್ರಮ, ಸಾಮಾರ್ಥ್ಯಗಳಿದ್ದರೂ ಮಹಿಳೆಗೆ ನೀಡುವ ಕೂಲಿ ಮಾತ್ರ ಕನಿಷ್ಠವಾಗಿರುತ್ತದೆ. ಒಂದರ್ಥದಲ್ಲಿ ಪುರುಷನಿಗಿಂತ ಹೆಚ್ಚು ದೈಹಿಕ ಶ್ರಮವನ್ನು ಉಪಯೋಗಿಸಿ ಕೆಲಸ ಕಾರ್ಯಗಳಲ್ಲಿ ತೊಡಗುವವಳು ಮಹಿಳೆಯೇ ಆಗಿರುವಳು.

**೪.೩.೧. ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮುಖ್ಯ ಕೆಲಸಗಾರರ ವಿವರ**

ಕರ್ನಾಟಕ ರಾಜ್ಯದಲ್ಲಿರುವ ಜನರು ವಿವಿಧ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವರು. ಕೆಲವರು ಮುಖ್ಯ ಕೆಲಸಗಾರರಾದರೆ, ಇನ್ನೂ ಕೆಲವರು ಕೆಳ ಅಂಚಿನ ಕೆಲಸಗಾರರಾಗಿರುವರು. ಬಹುತೇಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ ಇದೇ ಚಿತ್ರಣ ಕಂಡುಬರುವುದು. ಈ ಕೆಳಗೆ ಕರ್ನಾಟಕ ರಾಜ್ಯದೊಂದಿಗೆ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿರುವ ಮುಖ್ಯ ಕೆಲಸಗಾರರು ಹಾಗೂ ಅಂಚಿನ ಕೆಲಸಗಾರರ ವಿವರಗಳನ್ನು ನೋಡಲಾಗಿದೆ.

| ಕೋಷ್ಟಕ: ೪.೩.೧ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮುಖ್ಯ ಕೆಲಸಗಾರರ ವಿವರ | | | | | | | | | |
|---|---|---|---|---|---|---|---|---|---|
| | ಕರ್ನಾಟಕ ರಾಜ್ಯ | | | ಬಳ್ಳಾರಿ ಜಿಲ್ಲೆ | | | ಕೊಪ್ಪಳ ಜಿಲ್ಲೆ | | |
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಮುಖ್ಯ ಕೆಲಸಗಾರರು | ೧,೬೩,೪೯,೮೩೭ | ೭೦,೪೭,೩೪೪ | ೨,೩೩,೯೭,೧೮೧ | ೬,೪೧,೬೮೧ | ೩,೨೭,೭೦೭ | ೯,೬೯,೩೮೮ | ೩,೨೯,೦೯೨ | ೧,೭೮,೯೯೭ | ೫,೦೮,೦೮೯ |
| ಕೆಳ ಅಂಚಿನ ಕೆಲಸಗಾರರು | ೪೪,೭೫,೪೧೬ | ೧೯,೨೦,೨೭೯ | ೨೫,೫೫,೧೩೭ | ೬೧,೫೭೭ | ೮೫,೯೧೫ | ೧,೪೭,೪೯೨ | ೫೮,೮೮೨ | ೮೭,೭೯೫ | ೧,೪೬,೬೭೭ |

(ಆಧಾರ: ೨೦೧೧ರ ಜನಗಣತಿ ವರದಿ)

**ಕೋಷ್ಟಕ: ೪.೩.೧ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಮುಖ್ಯ ಕೆಲಸಗಾರರ ವಿವರ**




**ಮುಖ್ಯ ಕೆಲಸಗಾರರು**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಇರುವ ಮುಖ್ಯ ಕೆಲಸಗಾರರ ಸಂಖ್ಯೆ ಒಟ್ಟು ೨,೩೩,೯೭,೧೮೧, ಇದರಲ್ಲಿ ೧,೬೩,೪೯,೮೩೭ ಪುರುಷರು, ೭೦,೪೭,೩೪೪ ಮಹಿಳೆಯರಿರುವರು.

ಬಳ್ಳಾರಿ ಜಿಲ್ಲೆಯಲ್ಲಿರುವ ಮುಖ್ಯ ಕೆಲಸಗಾರರ ಸಂಖ್ಯೆ ಒಟ್ಟು ೯,೬೯,೩೮೮, ಇದರಲ್ಲಿ ೬,೪೧,೬೮೧ ಪುರುಷರು, ೩,೨೭,೭೦೭ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಮುಖ್ಯ ಕೆಲಸಗಾರರ ಸಂಖ್ಯೆ ಒಟ್ಟು ೫,೦೮,೦೮೯, ಇದರಲ್ಲಿ ೩,೭೯,೦೯೨ ಪುರುಷರು, ೧,೭೮,೯೯೭ ಮಹಿಳೆಯರಿರುವರು.

**ಅಂಚಿನ ಕೆಲಸಗಾರರು**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಇರುವ ಕೆಳ ಅಂಚಿನ ಕೆಲಸಗಾರರ ಸಂಖ್ಯೆ ಒಟ್ಟು ೨೫,೫೫,೧೩೭, ಇದರಲ್ಲಿ ೪೪,೭೫,೪೧೬ ಪುರುಷರು, ೧೯,೨೦,೨೭೯ ಮಹಿಳೆಯರಿರುವರು.

ಬಳ್ಳಾರಿ ಜಿಲ್ಲೆಯಲ್ಲಿರುವ ಕೆಳ ಅಂಚಿನ ಕೆಲಸಗಾರರ ಸಂಖ್ಯೆ ಒಟ್ಟು ೧,೪೭,೪೯೨, ಇದರಲ್ಲಿ ೬೧,೫೭೭ ಪುರುಷರು, ೮೫,೯೧೫ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಕೆಳ ಅಂಚಿನ ಕೆಲಸಗಾರರ ಸಂಖ್ಯೆ ಒಟ್ಟು ೧,೪೬,೬೭೭, ಇದರಲ್ಲಿ ೫೮,೮೮೨ ಪುರುಷರು, ೮೭,೭೯೫ ಮಹಿಳೆಯರಿರುವರು.

ಶೇಕಡವಾರುಗಳಲ್ಲಿ ಹೇಳುವುದಾದರೆ ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿರುವ ಮುಖ್ಯ ಕೆಲಸಗಾರರ ಪ್ರಮಾಣ ಶೇಕಡ ೩೮.೩, ಪುರುಷರ ಪ್ರಮಾಣವು ಶೇಕಡ ೫೧.೮೮, ಮಹಿಳೆಯರ ಪ್ರಮಾಣ ಶೇಕಡ ೨೩.೩೯ ಇದೆ. ಬಳ್ಳಾರಿ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿರುವ ಮುಖ್ಯ ಕೆಲಸಗಾರರ

ಪ್ರಮಾಣ ಶೇಕಡ ೩೯.೫೨, ಪುರುಷರ ಪ್ರಮಾಣವು ಶೇಕಡ ೪೭.೦೨, ಮಹಿಳೆಯರ ಪ್ರಮಾಣ ಶೇಕಡ ೨೬.೯೯ ಇದೆ. ಕೊಪ್ಪಳದ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿರುವ ಮುಖ್ಯ ಕೆಲಸಗಾರರ ಪ್ರಮಾಣ ಶೇಕಡ ೩೬.೫೬, ಪುರುಷರ ಪ್ರಮಾಣವು ಶೇಕಡ ೪೭.೦೨, ಮಹಿಳೆಯರ ಪ್ರಮಾಣ ಶೇಕಡ ೨೫.೯೪ ಇದೆ.

೨೦೧೧ ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಮುಖ್ಯ ಕೆಲಸಗಾರರ ಪ್ರಮಾಣಕ್ಕಿಂತ ಬಳ್ಳಾರಿಯ ಮುಖ್ಯ ಕೆಲಸಗಾರರ ಪ್ರಮಾಣ (ಶೇ. ೧.೨೨) ಹೆಚ್ಚಿದೆ. ಕೊಪ್ಪಳದ ಮುಖ್ಯ ಕೆಲಸಗಾರರ ಪ್ರಮಾಣವು ಕಡಿಮೆ (ಶೇ. ೧.೭೪) ಇರುವುದು ತಿಳಿದುಬರುವುದು. ಹಾಗೆಯೇ ಮುಖ್ಯ ಕೆಲಸಗಾರರಲ್ಲಿ ಮಹಿಳೆಯರಿಗಿಂತ ಪುರುಷರ ಪ್ರಮಾಣ ಹೆಚ್ಚಾಗಿದೆ. ಹಾಗೆಯೇ ಕರ್ನಾಟಕದ ಅಂಚಿನ ಕೆಲಸಗಾರರ ಒಟ್ಟು ಪ್ರಮಾಣ ಶೇಕಡ ೭.೩೩, ಪುರುಷರ ಪ್ರಮಾಣವು ಶೇಕಡ ೬.೨, ಮಹಿಳೆಯರ ಪ್ರಮಾಣ ಶೇಕಡ ೮.೪೮ ಇದೆ. ಬಳ್ಳಾರಿ ಜಿಲ್ಲೆಯ ಅಂಚಿನ ಕೆಲಸಗಾರರ ಒಟ್ಟು ಪ್ರಮಾಣ ಶೇಕಡ ೬.೦೧, ಪುರುಷರ ಪ್ರಮಾಣವು ಶೇಕಡ ೪.೯೮, ಮಹಿಳೆಯರ ಪ್ರಮಾಣ ಶೇಕಡ ೭.೦೭ ಇದೆ. ಕೊಪ್ಪಳದ ಜಿಲ್ಲೆಯ ಅಂಚಿನ ಕೆಲಸಗಾರರ ಒಟ್ಟು ಪ್ರಮಾಣ ಶೇಕಡ ೧೦.೫೫, ಪುರುಷರ ಪ್ರಮಾಣವು ಶೇಕಡ ೮.೪೧, ಮಹಿಳೆಯರ ಪ್ರಮಾಣ ಶೇಕಡ ೧೨.೭೨ ಇದೆ. ಅಂದರೆ ಇತರೆ ಕೆಲಸಗಳಲ್ಲಿ ತೊಡಗಿದವರಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣವು ಅಧಿಕವಾಗಿರುವುದು ಬಳ್ಳಾರಿ ಹಾಗೂ ಕೊಪ್ಪಳ ಜನಸಂಖ್ಯಾ ವರದಿಯಿಂದ ತಿಳಿದುಬರುವುದು.

೨೦೧೧ ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಮುಖ್ಯ ಕೆಲಸಗಾರರ ಪ್ರಮಾಣಕ್ಕಿಂತ ಬಳ್ಳಾರಿಯ ಮುಖ್ಯ ಕೆಲಸಗಾರರ ಪ್ರಮಾಣ (ಶೇ. ೧.೨೨) ಹೆಚ್ಚಿದೆ. ಕೊಪ್ಪಳದ ಮುಖ್ಯ ಕೆಲಸಗಾರರ ಪ್ರಮಾಣವು ಕಡಿಮೆ (ಶೇ. ೧.೭೪) ಇರುವುದು ತಿಳಿದುಬರುವುದು. ಹಾಗೆಯೇ ಮುಖ್ಯ ಕೆಲಸಗಾರರಲ್ಲಿ ಮಹಿಳೆಯರಿಗಿಂತ ಪುರುಷರ ಪ್ರಮಾಣ ಹೆಚ್ಚಾಗಿದೆ.

| ಕೋಷ್ಟಕ: ೪.೩.೨ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಕೃಷಿಕ ಹಾಗೂ ಇತರೆ ಕೆಲಸಗಾರರ ವಿವರ | | | | | | | | | |
|---|---|---|---|---|---|---|---|---|---|
| | ಕರ್ನಾಟಕ ರಾಜ್ಯ | | | ಬಳ್ಳಾರಿ ಜಿಲ್ಲೆ | | | ಕೊಪ್ಪಳ ಜಿಲ್ಲೆ | | |
| | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಕೃಷಿಕರು | ೪೭,೫೩,೭೦೮ | ೧೮,೨೬,೯೪೧ | ೬೫,೮೦,೬೪೯ | ೧,೮೦,೭೩೨ | ೭೭,೩೪೮ | ೨,೫೮,೦೮೦ | ೧,೨೦,೪೦೫ | ೪೩,೦೦೮ | ೧,೬೩,೪೧೩ |
| ಕೃಷಿ ಕೂಲಿಗಳು | ೩೨,೮೩,೨೭೯ | ೩೮,೭೨,೬೮೪ | ೭೧,೫೫,೯೬೩ | ೧,೭೫,೯೯೨ | ೨,೩೦,೧೦೦ | ೪,೦೬,೦೯೨ | ೧,೧೦,೧೬೧ | ೧,೬೨,೮೫೫ | ೨,೭೩,೦೧೬ |
| ಗೃಹ ಕೈಗಾರಿಕೆ | ೪,೩೮,೯೮೩ | ೪,೭೪,೨೪೪ | ೯,೧೩,೨೨೭ | ೧೩,೩೩೧ | ೯,೫೦೧ | ೨೨,೮೩೨ | ೧೦,೭೯೧ | ೮,೦೦೩ | ೧೮,೭೯೪ |
| ಇತರೆ | ೯೭,೯೪,೧೪೬ | ೩೪,೨೮,೬೧೨ | ೧,೩೨,೨೨,೭೫೮ | ೩,೩೩,೨೦೩ | ೯೬,೬೭೩ | ೪,೨೯,೮೭೬ | ೧,೪೬,೬೧೭ | ೫೨,೯೨೬ | ೧,೯೯,೫೪೩ |

(ಆಧಾರ: ೨೦೧೧ರ ಜನಗಣತಿ ವರದಿ)

**ಕೋಷ್ಟಕ:೪.೩.೨ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಕೃಷಿಕ ಹಾಗೂ ಇತರೆ ಕೆಲಸಗಾರರ ವಿವರ**




### ೪.೩.೨ ರಾಜ್ಯ ಹಾಗೂ ಬಳ್ಳಾರಿ, ಕೊಪ್ಪಳ ಜಿಲ್ಲೆಯ ಕೃಷಿಕ ಹಾಗೂ ಇತರೆ ಕೆಲಸಗಾರರ ವಿವರ

ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಇಲ್ಲಿ ಶೇಕಡ ೮೦ರಷ್ಟು ಜನ ಕೃಷಿ ಚಟುವಟಿಕೆಗಳಲ್ಲಿಯೇ ತೊಡಗಿರುವರು. ಹೀಗಿದ್ದೂ ಬಹುತೇಕ ಬೃಹತ್ ಭೂ-ಒಡೆತನ ಕೆಲವೇ ಕೆಲವು ಬಂಡವಾಳಶಾಹಿಗಳ ಹಿಡಿತದಲ್ಲಿದೆ. ಇನ್ನುಳಿದಂತೆ ತುಂಡು ಭೂಮಿಗಳನ್ನು ಹೊಂದಿದ ರೈತರೂ ಇರುವರು. ಇವುಗಳಾಚೆ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವ ಜನರು ಕಂಡುಬರುವರಾದರೂ ಅವರಾರೂ ಕೃಷಿಭೂಮಿ ಹೊಂದಿರದವರಾಗಿರುವರು. ಇದಕ್ಕೆ ಕರ್ನಾಟಕವೂ ಹೊರತಾಗಿಲ್ಲ. ಅದರ ವಿವರಗಳನ್ನು ಈ ಕೆಳಗೆ ನೀಡಲಾಗಿದೆ.

**ಕೃಷಿಕರು**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಇರುವ ಕೃಷಿಕರ ಒಟ್ಟು ಸಂಖ್ಯೆ ೬೫,೮೦,೬೪೯, ಇದರಲ್ಲಿ ೪೭,೫೩,೭೦೮ ಪುರುಷರು, ೧೮,೨೬,೯೪೧ ಮಹಿಳೆಯರಿರುವರು. ಬಳ್ಳಾರಿ ಜಿಲ್ಲೆಯಲ್ಲಿರುವ ಇರುವ ಕೃಷಿಕರ ಒಟ್ಟು ಸಂಖ್ಯೆ ೨,೫೮,೦೮೦, ಇದರಲ್ಲಿ ೧,೮೦,೭೩೨ ಪುರುಷರು, ೭೭,೩೪೮ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಕೃಷಿಕರ ಒಟ್ಟು ೧,೬೩,೪೧೩, ಇದರಲ್ಲಿ ೧,೨೦,೪೦೫ ಪುರುಷರು, ೪೩,೦೦೮ ಮಹಿಳೆಯರಿರುವರು.

**ಕೃಷಿಕೂಲಿಗಳು**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಇರುವ ಕೃಷಿ ಕೂಲಿಗಳ ಒಟ್ಟು ಸಂಖ್ಯೆ ೭೧,೫೫,೯೬೩, ಇದರಲ್ಲಿ ೩೨,೮೩,೨೭೯ ಪುರುಷರು, ೩೮,೭೨,೬೮೪ ಮಹಿಳೆಯರಿರುವರು. ಬಳ್ಳಾರಿ ಜಿಲ್ಲೆಯಲ್ಲಿರುವ ಇರುವ ಕೃಷಿ ಕೂಲಿಗಳ ಒಟ್ಟು ಸಂಖ್ಯೆ ೪,೦೬,೦೯೨, ಇದರಲ್ಲಿ ೧,೭೫,೯೯೨ ಪುರುಷರು, ೨,೩೦,೧೦೦ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಕೃಷಿಕರ ಒಟ್ಟು ೨,೭೩,೦೧೬, ಇದರಲ್ಲಿ ೧,೧೦,೧೬೧ ಪುರುಷರು, ೧,೬೨,೮೫೫ ಮಹಿಳೆಯರಿರುವರು.

ಗೃಹ ಕೈಗಾರಿಕೆಯಲ್ಲಿ ತೊಡಗಿದವರು

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಗೃಹ ಕೈಗಾರಿಕೆಯಲ್ಲಿ ತೊಡಗಿದವರ ಒಟ್ಟು ಸಂಖ್ಯೆ ೯,೧೩,೨೨೭, ಇದರಲ್ಲಿ ೪,೩೮,೯೮೩ ಪುರುಷರು, ೪,೭೪,೨೪೪ ಮಹಿಳೆಯರಿರುವರು. ಬಳ್ಳಾರಿ ಜಿಲ್ಲೆಯಲ್ಲಿರುವ ಗೃಹ ಕೈಗಾರಿಕೆಯಲ್ಲಿ ತೊಡಗಿದವರ ಒಟ್ಟು ಸಂಖ್ಯೆ ಸಂಖ್ಯೆ ೨೨,೮೩೨, ಇದರಲ್ಲಿ ೧೩,೩೩೧ ಪುರುಷರು, ೯,೫೦೧ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಗೃಹ ಕೈಗಾರಿಕೆಯಲ್ಲಿ ತೊಡಗಿದವರ ಒಟ್ಟು ಸಂಖ್ಯೆ ೧೮,೭೯೪, ಇದರಲ್ಲಿ ೧೦,೭೯೧ ಪುರುಷರು, ೮,೦೦೩ ಮಹಿಳೆಯರಿರುವರು.

**ಇತರೆ ಕೆಲಸಗಾರರು**

ಕರ್ನಾಟಕದ ಒಟ್ಟು ಜನಸಂಖ್ಯೆಯಲ್ಲಿ ಇತರೆ ಕೆಲಸಗಾರರ ಒಟ್ಟು ಸಂಖ್ಯೆ ೧,೩೨,೨೨,೭೫೮, ಇದರಲ್ಲಿ ೯೭,೯೪,೧೪೬ ಪುರುಷರು, ೩೪,೨೮,೬೧೨ ಮಹಿಳೆಯರಿರುವರು. ಬಳ್ಳಾರಿ ಜಿಲ್ಲೆಯಲ್ಲಿರುವ ಇತರೆ ಕೆಲಸಗಾರರ ಒಟ್ಟು ಸಂಖ್ಯೆ ಸಂಖ್ಯೆ ೪,೨೯,೮೭೬, ಇದರಲ್ಲಿ ೩,೩೩,೨೦೩ ಪುರುಷರು, ೯೬,೬೭೩ ಮಹಿಳೆಯರಿರುವರು. ಕೊಪ್ಪಳ ಜಿಲ್ಲೆಯಲ್ಲಿರುವ ಇತರೆ ಕೆಲಸಗಾರರ ಒಟ್ಟು ಸಂಖ್ಯೆ ೧,೯೯,೫೪೩, ಇದರಲ್ಲಿ ೧,೪೬,೬೧೭ ಪುರುಷರು, ೫೨,೯೨೬ ಮಹಿಳೆಯರಿರುವರು.

ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರನ್ನು ಇತರೆ ಕೆಲಸಗಾರರೆಂದು ಪರಿಗಣಿಸಲಾಗಿದೆ. ಚಿಕ್ಕ ಪುಟ್ಟ ಡಬ್ಬಿ ಅಂಗಡಿ ವ್ಯಾಪಾರಿಗಳು, ತಲೆಯ ಮೇಲೆಯೋ, ತಳ್ಳುವ ಕೈಗಾಡಿಯಲ್ಲಿಯೋ ತರಕಾರಿ ವ್ಯಾಪಾರ ಮಾಡುವವರು, ರಸ್ತೆ ಬದಿಯಲ್ಲಿ ಕಬ್ಬಿನ ಹಾಲನ್ನು ಮಾರುವವರು, ಬೀಡಿ ಕಟ್ಟುವ ಕೆಲಸ, ಧಾರ್ಮಿಕ ಭಿಕ್ಷಾಟನೆ ಇತ್ಯಾದಿಗಳಲ್ಲಿ ತೊಡಗುವವರು ಇತರೆ ಕೆಲಸಗಾರರೆಂದು ಪರಿಗಣಿಸಲ್ಪಟ್ಟಿದೆ.

- ಲೈಂಗಿಕ ಕಾರ್ಯಕರ್ತೆಯರಲ್ಲಿ ಮುಖ್ಯವಾಗಿ ಎರಡು ವಿಧದಲ್ಲಿ ಗುರುತಿಸಲಾಗಿದೆ. ಬೇರಾವುದೇ ವೃತ್ತಿಯಲ್ಲಿ ತೊಡಗದೆ ಪೂರ್ಣಾವಧಿ ವೇಶ್ಯಾವಾಟಿಕೆಯಲ್ಲಿ ತೊಡಗಿರುವವರು.
- ಇತರೆ ವೃತ್ತಿಗಳಲ್ಲಿ (ಉದಾಹರಣೆಗೆ ಕೂಲಿ ಕಾರ್ಮಿಕರಾಗಿ, ಮನೆಗೆಲಸಗಾರರಾಗಿ, ಅಂಗನವಾಡಿ ಕಾರ್ಯಕರ್ತೆ, ಸಹಾಯಕಿ ಇತ್ಯಾದಿ) ವೃತ್ತಿಗಳಲ್ಲಿ ತೊಡಗುವುದರೊಂದಿಗೆ ಲೈಂಗಿಕ ಕಾರ್ಯಕರ್ತೆಯಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡವರು.

ಸಾಮಾನ್ಯವಾಗಿ ಆಸ್ತಿಯಲ್ಲಿ ಮಹಿಳೆಯರಿಗೂ ಸಮಪಾಲು ನೀಡಬೇಕೆಂಬ ಕಾನೂನಿದ್ದರೂ ಇಂದಿಗೂ ಬಹುಪಾಲು ಕುಟುಂಬಗಳು ಆಸ್ತಿ ಹಂಚಿಕೆಯಲ್ಲಿ ಮಹಿಳೆಯರಿಗೆ ಪಾಲು ನೀಡದೆ ಪುರುಷರಿಗೆ ಮಾತ್ರ ಆಸ್ತಿ ಹಂಚಿಕೆ ಮಾಡುವುದು ವಾಡಿಕೆಯಾಗಿದೆ. ತಿಳುವಳಿಕೆಯ ಕೊರತೆಯಿಂದಲೋ, ತವರು ಮನೆಯ ಮೇಲಿನ ಮಮಕಾರದಿಂದಲೋ ಎಷ್ಟೂ ಮಹಿಳೆಯರು ಆಸ್ತಿಯ ಹಕ್ಕಿಗೆ ಬಾಯಿಹಾಕುವುದಿಲ್ಲ. ಆದರೆ ಗಂಡುವಂಶ ಇಲ್ಲದ ಕುಟುಂಬಗಳಲ್ಲಿ ಹುಟ್ಟಿದ ವಂಶದ ಹೆಸರು ಹೇಳಲು ದಿಕ್ಕಿಲ್ಲವೆಂದಾಗ ದೇವದಾಸಿಯಾದವರು ತಮ್ಮ ಪಾಲಕರ ಆಸ್ತಿಯ ಒಡೆತನದ ಹಕ್ಕನ್ನು ಪಡೆಯುವರು. ಅದೇ ರೀತಿಯಾಗಿ ಮನೆಯಲ್ಲಿ ಗಂಡುಮಕ್ಕಳಿದ್ದೂ ಬೇರೆ ಯಾವುದೋ ಕಾರಣಕ್ಕೆ ದೇವದಾಸಿಯಾಗಿದ್ದರೂ ಅವಳನ್ನು ಸಹೋದರನೆಂದೇ ಪರಿಗಣಿಸಿ ಆಸ್ತಿಯಲ್ಲಿ ಸಮಪಾಲನ್ನು ನೀಡುವರು. ಆದರೆ ದುರ್ದೈವವೆಂದರೆ ದೇವದಾಸಿ ಬಿಡುವವರ ಕುಟುಂಬಗಳು ತಳಸಮುದಾಯಕ್ಕೆ ಸೇರಿದವಾಗಿರುತ್ತವೆ ಮತ್ತು ಭೂಮಿ ಇತ್ಯಾದಿ ಆಸ್ತಿ ಇದ್ದರೂ ತುಂಡುಭೂಮಿಯನ್ನು ಹೊಂದಿರುತ್ತವೆ.

**ಭೂ ಹಿಡುವಳಿ**

"ಪರಿಶಿಷ್ಟ ಜಾತಿ, ಪಂಗಡಗಳು ಹೊಂದಿರುವ ಭೂಮಿಗಳು ಸಣ್ಣ ಹಿಡುವಳಿಯ ತುಂಡು ಭೂಮಿಗಳಾಗಿವೆ. ಅದರಲ್ಲೂ ಇವರ ಕೃಷಿ ಭೂಮಿಗಳು ಕೆಳಮಟ್ಟದ ಉತ್ಪಾದನೆಯನ್ನು ನೀಡುವ ಭೂಮಿಗಳೇ ಹೆಚ್ಚಾಗಿವೆ. ಇವರು ಹೆಚ್ಚಿನ ಆದಾಯ ತರುವ ಯಾವ ಹುದ್ದೆಯಲ್ಲೂ ಇರದಿರುವುದಕ್ಕೆ ಕಾರಣ ಇವರ ಕೆಳಮಟ್ಟದ ಸಾಕ್ಷರತೆ, ವೃತ್ತಿ ಕೌಶಲ್ಯಗಳ ಕೊರತೆ ಇರುವುದರಿಂದ ಕಡಿಮೆ ಸಂಭಾವನೆ ಬರುವಂಥ ಕೆಲಸಗಳಿಗೆ ಅವರು ತಳ್ಳಲ್ಪಟ್ಟಿದ್ದಾರೆ. ಅವರ ತಲಾವಾರು ಮಾಸಿಕ ವೆಚ್ಚವು ತಮ್ಮ ಅಗತ್ಯಕ್ಕಿಂತಲೂ ಕಡಿಮೆ ಕೂಲಿ ಪಡೆಯುತ್ತಿರುವುದನ್ನು ಪ್ರತಿನಿಧಿಸುತ್ತದೆ"[೭] ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಪರಿಶಿಷ್ಟ ಜಾತಿ, ಪಂಗಡದ ಕುಟುಂಬಗಳಿಗೆ ಹೋಲಿಸಿದರೆ ನಗರ ಪ್ರದೇಶಗಳಲ್ಲಿರುವ ಪರಿಶಿಷ್ಟ ಜಾತಿ, ಪಂಗಡದ ಕುಟುಂಬಗಳು ಸ್ವಲ್ಪ ಉತ್ತಮ ಸ್ಥಿತಿಯಲ್ಲಿವೆ.

ಪರಿಶಿಷ್ಟ ಜಾತಿ, ಪಂಗಡದ ಮಹಿಳೆಯರಲ್ಲಿ ಅಧಿಕ ಮಹಿಳೆಯರು ಗೃಹ ಸಂಬಂದಿ ಕೈಗಾರಿಕೆ ಹಾಗೂ ಇತರೆ ಕೆಲಸಗಳಲ್ಲಿ ತೊಡಗಿದ್ದಾರೆ.

"ಮಾದರಿ ಸಮೀಕ್ಷೆಯು ತಿಳಿಸುವಂತೆ ಗ್ರಾಮೀಣ ಪ್ರದೇಶದ ಪರಿಶಿಷ್ಟ ಜಾತಿಯ ಶೇಕಡ ೩೨ರಷ್ಟು ಕುಟುಂಬಗಳು ಮಾತ್ರ ಭೂ ಒಡೆತನ ಹೊಂದಿವೆ. ಪರಿಶಿಷ್ಟ ಪಂಗಡದ ಶೇಕಡ ೫೭.೩೯ ರಷ್ಟು ಕುಟುಂಬಗಳು ಭೂ ಒಡೆತನ ಹೊಂದಿವೆ. ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳು ಹೊಂದಿದ ಭೂಮಿಯಲ್ಲಿ ಶೇಕಡ ೭೪.೩೫ ರಷ್ಟು ಒಣಭೂಮಿಯಾಗಿದೆ. ರಾಜ್ಯದಲ್ಲಿ ಬಿತ್ತನೆಗೊಳ್ಳುವ ನೀರಾವರಿ ಕೃಷಿ ಭೂಮಿಯು ಶೇಕಡ ೨೧ ರಷ್ಟು ಮಾತ್ರವಾಗಿದೆ." (ಕೃಷಿ ಗಣತಿ ವರದಿ ೨೦೦೧)

೨೦೧೧ ರ ಕರ್ನಾಟಕ ಕೃಷಿ ಗಣತಿಯ ಪ್ರಕಾರ ಪರಿಶಿಷ್ಟ ಪಂಗಡದವರಲ್ಲಿ ಶೇಕಡ ೩೦.೯ ರಷ್ಟು ಅತಿ ಸಣ್ಣ ಹಿಡುವಳಿದಾರರು ಮತ್ತು ಶೇಕಡ ೧೯.೪ ರಷ್ಟು ಅರೆ ಮಧ್ಯಮ ಗಾತ್ರದ ಹಿಡುವಳಿದಾರರಿದ್ದಾರೆ ಈ ವಿಷಯದಲ್ಲಿ ಪರಿಶಿಷ್ಟ ಜಾತಿ, ಪಂಗಡದವರಿಗೆ ಮತ್ತು ಇತರರಿಗೆ ಅಷ್ಟೇನೂ ವ್ಯತ್ಯಾಸವಿಲ್ಲ.

ಗಮನಿಸಬೇಕಾದ ಅತಿ ಮುಖ್ಯವಾದ ಅಂಶವೆಂದರೆ ಬಹುಪಾಲು ಪರಿಶಿಷ್ಟ ಜಾತಿ, ಪಂಗಡಗಳು ಕಡಿಮೆ ಉತ್ಪಾದಕತೆಯ ಸಣ್ಣ ಘಟಕಗಳನ್ನು ಹೊಂದಿವೆ. ಅವು ಆರ್ಥಿಕವಾಗಿಯೂ ಲಾಭಕರವಲ್ಲ. ಆದ್ದರಿಂದಲೇ ಬಹುತೇಕ ಸಣ್ಣ ಹಿಡುವಳಿದಾರರು ಜೀವನ ನಿರ್ವಹಣೆಗಾಗಿ ಕೂಲಿ ಕಾರ್ಮಿಕರಾಗಿಯೋ, ಇತರ ವೃತ್ತಿಗಳಿಗೆ ತಳ್ಳಲ್ಪಟ್ಟಿದ್ದಾರೆ.

ವರಮಾನದ ವಿಚಾರವಾಗಿ ತಿಳಿಸಬಹುದೇನೆಂದರೆ ೧೯೯೯–೨೦೦೦ ಅಂಕಿ ಅಂಶಗಳ ಪ್ರಕಾರ ಬಹುಪಾಲು ಗ್ರಾಮೀಣ ಪರಿಶಿಷ್ಟ ಜಾತಿ ಪಂಗಡದ ಕುಟುಂಬಗಳ ವರಮಾನದ ಮೂಲವೆಂದರೆ ಕೃಷಿ ಕಾರ್ಮಿಕರಾಗಿ ಕೆಲಸಮಾಡುವುದು. (ಶೇಕಡ ೯.೭) ಸಾಗುವಳಿ (ಶೇಕಡ ೭.೭) ಮೀನುಗಾರಿಕೆ ಹಾಗೂ ಇತರ ಸಣ್ಣ ಪುಟ್ಟ ಉದ್ದಿಮೆಗಳು (ಶೇಕಡ ೧೧.೪) ಅವರ ವರಮಾನದ ಮೂಲಗಳಾಗಿವೆ.

"ಗ್ರಾಮೀಣ ಪ್ರದೇಶದಲ್ಲಿರುವ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗದ ಕುಟುಂಬಗಳು ಶೇಕಡ ೪೦ ಬಡತನ ರೇಖೆಯ ಕೆಳಗಿನ ಕುಟುಂಬಗಳಾಗಿವೆ. ಇದೇ ನಗರ ಪ್ರದೇಶದ ಪರಿಶಿಷ್ಟ ಪಂಗಡದ ಕುಟುಂಬಗಳಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಪ್ರಮಾಣ ಶೇಕಡ ೨೫ ರಷ್ಟಾಗಿದೆ"[೮]

ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ತಾಲೂಕಿನ ತುಂಗಾಭದ್ರಾ ಆಣೆಕಟ್ಟಿನಿಂದ ಮೇಲ್ಭಾಗಕ್ಕೆ, ಒಣಬೇಸಾಯವನ್ನು ಅವಲಂಬಿಸಿದ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗದ ಬಹುತೇಕ ಕುಟುಂಬಗಳು ಸುಗ್ಗಿಕಾಲದ ತರುವಾಯ ಗೋವಾ, ಚಿಕ್ಕಮಗಳೂರು ಮುಂತಾದ ಕಡೆ ಕೂಲಿಯನ್ನು ಹುಡುಕಿಕೊಂಡು ವಲಸೆ ಹೋಗುವುದು ಸಹಜ. ಈ ರೀತಿ ವಲಸೆ ಹೋದವರು ಮರಳಿ ತಮ್ಮ ಗ್ರಾಮಗಳಿಗೆ ಮರಳುವುದು ಮಳೆಗಾಲಕ್ಕೆ.

ಪ್ರಸ್ತುತ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಆರ್ಥಿಕ ಸ್ಥಿತಿ–ಗತಿಗಳನ್ನು ಇಲ್ಲಿ ಗಮನಿಸಲಾಗಿದೆ. ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಒಟ್ಟು ೨೦೦ ಲೈಂಗಿಕ ಕಾರ್ಯಕರ್ತೆಯರನ್ನು ಸಮೀಕ್ಷಿಸಲಾಗಿದೆ. ಇದರಲ್ಲಿ ಬಹುತೇಕ ಲೈಂಗಿಕ ಕಾರ್ಯಕರ್ತೆಯರ ಹೆಸರಿನಲ್ಲಿ ಯಾವುದೇ ಭೂ ಹಿಡುವಳಿ ಇಲ್ಲದಿರುವುದು ಕಂಡು ಬರುತ್ತದೆ. ಅದರಲ್ಲಿ ಬೆರಳೆಣಿಕೆಯಷ್ಟು ಲೈಂಗಿಕ ಕಾರ್ಯಕರ್ತೆಯರ ಹೆಸರಿನಲ್ಲಿದ್ದರೂ ಅವೆಲ್ಲವೂ ತುಂಡು ಭೂಮಿಗಳಾಗಿವೆ.

**ಕೋಷ್ಟಕ: ಕೋಷ್ಟಕ:೪.೩.೩ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಭೂ ಹಿಡುವಳಿ**

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಸಮೀಕ್ಷೆಗೊಳಪಡಿಸಿದ ಲೈಂಗಿಕ ಕಾರ್ಯಕರ್ತೆಯರಲ್ಲಿ ಭೂಹಿಡುವಳಿ ಹೊಂದಿರುವುದಾಗಿ ತಿಳಿಸಿದವರು ಒಟ್ಟು ೫೫, ಭೂಮಿ ಇಲ್ಲವೆಂದು ತಿಳಿಸಿದವರು ೧೪೫ ಜನರಿರುವರು.

| ೪.೩.೩ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಭೂ ಹಿಡುವಳಿ ವಿವರ | | |
|---|---|---|
| ಜಿಲ್ಲೆ | ಭೂಹಿಡುವಳಿ ಹೊಂದಿದವರು | ಭೂಹಿಡುವಳಿ ಇಲ್ಲದಿರುವವರು |
| ಬಳ್ಳಾರಿ | ೨೫ | ೭೫ |
| ಕೊಪ್ಪಳ | ೩೦ | ೭೦ |
| ಒಟ್ಟು | ೫೫ | ೧೪೫ |




ಇದರಲ್ಲಿ ಬಳ್ಳಾರಿ ಜಿಲ್ಲೆಯ ೨೫ ಲೈಂಗಿಕ ಕಾರ್ಯಕರ್ತೆಯರು ಕೊಪ್ಪಳದ ೩೦ ಲೈಂಗಿಕ ಕಾರ್ಯಕರ್ತೆಯರು ತಮಗೆ ಸಣ್ಣಪ್ರಮಾಣದ ಭೂಹಿಡುವಳಿ ಇರುವುದಾಗಿ ತಿಳಿಸಿದ್ದಾರೆ.

**೪.೩.೪ ಭೂ ಹಿಡುವಳಿ ಹೊಂದಿದ ಬಳ್ಳಾರಿ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರು**

ಬಳ್ಳಾರಿ ಜಿಲ್ಲೆಯ ಸಮೀಕ್ಷಿಸಲಾದ ಲೈಂಗಿಕ ಕಾರ್ಯಕರ್ತೆಯರಲ್ಲಿ ಭೂಹಿಡುವಳಿ ಹೊಂದಿದದವರ ವಿವರಗಳನ್ನು ನೋಡಿದಾಗ ಕಂಡುಬಂದ ಅಂಶಗಳು ಈ ಕೆಳಗಿನಂತಿವೆ.

ಮಾದಿಗ ಸಮುದಾಯದ ೪, ಚಲುವಾದಿ ಸಮುದಾಯದ ೩, ನಾಯಕ ಸಮುದಾಯದ ೧೦, ಬೆಸ್ತ ಸಮುದಾಯದ ೩, ಕುರುಬ ಸಮುದಾಯದ ೧, ಕಾಪು ಸಮುದಾಯದ ೨, ಕಮ್ಮ ಸಮುದಾಯದ ಒಬ್ಬರು ಸಣ್ಣ ಪ್ರಮಾಣದ ಭೂಹಿಡುವಳಿ ಇರುವುದಾಗಿ ತಿಳಿಸಿದರು.

**೨.೩.೫ ಭೂ ಹಿಡುವಳಿ ಹೊಂದಿದ ಕೊಪ್ಪಳ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರು**

ಅದೇ ರೀತಿಯಾಗಿ ಕೊಪ್ಪಳ ಜಿಲ್ಲೆಯ ಸಮೀಕ್ಷಿಸಲಾದ ಲೈಂಗಿಕ ಕಾರ್ಯಕರ್ತೆಯರಲ್ಲಿ ಭೂಹಿಡುವಳಿ

**ಕೋಷ್ಟಕ:೪.೩.೫ ಭೂ ಹಿಡುವಳಿ ಹೊಂದಿದ ಕೊಪ್ಪಳ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸಂ | ಸಮುದಾಯ | ಒಟ್ಟು ಸಂಖ್ಯೆ | ಭೂಹಿಡುವಳಿ ಇರುವವರು | ಭೂಹಿಡುವಳಿ ಇಲ್ಲದಿರುವವರು |
|---|---|---|---|---|
| ೧ | ಮಾದಿಗ | ೨೦ | ೦೩ | ೧೭ |
| ೨ | ಚಲವಾದಿ | ೧೨ | ೦೪ | ೦೮ |
| ೩ | ಲಂಬಾಣಿ | ೦೭ | – | ೦೭ |
| ೪ | ನಾಯಕ | ೧೯ | ೧೦ | ೦೯ |
| ೫ | ಬೆಸ್ತ | ೧೧ | ೦೪ | ೦೭ |
| ೬ | ಕುರುಬ | ೦೪ | ೦೧ | ೦೩ |
| ೭ | ಕಾಪು | ೦೭ | ೦೩ | ೦೪ |
| ೮ | ಕಮ್ಮ | ೦೭ | ೦೨ | ೦೫ |
| ೯ | ಲಿಂಗಾಯತ | ೦೩ | ೦೨ | ೦೧ |
| | ಇತರೆ | ೧೦ | ೦೧ | ೦೯ |
| | | ೧೦೦ | ೩೦ | ೭೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಭೂಮಿ ಹೊಂದಿದವರ ಜಾತಿವಾರು ನೋಡಿದಾಗ ಮಾದಿಗ ಸಮುದಾಯದ ೩, ಚಲುವಾದಿ ಸಮುದಾಯದ ೪, ನಾಯಕ ಸಮುದಾಯದ ೧೦, ಬೆಸ್ತ ಸಮುದಾಯದ ೪, ಕುರುಬ ಸಮುದಾಯದ ೧, ಕಾಪು ಸಮುದಾಯದ ೩, ಕಮ್ಮ ಸಮುದಾಯದ ೨, ಇತರೆ ಸಮುದಾಯಗಳಲ್ಲಿ ಒಬ್ಬರಿಗೆ ಸಣ್ಣ ಪ್ರಮಾಣದ ಭೂಹಿಡುವಳಿ ಇರುವುದಾಗಿ ತಿಳಿಸಿದರು.

ಒಟ್ಟಾರೆಯಾಗಿ ಸಣ್ಣ ಪ್ರಮಾಣದಲ್ಲಾದರೂ ಭೂಹಿಡುವಳಿ ಹೊಂದಿದವರು ಶೇಕಡ ೨೭.೫ ಜನರಿರುವರು. ಇನ್ನು ಶೇಕಡ ೭೨.೫ ಲೈಂಗಿಕ ಕಾರ್ಯಕರ್ತೆಯರಿಗೆ ಭೂಮಿ ಇಲ್ಲದಿರುವುದು ಕ್ಷೇತ್ರಕಾರ್ಯದ ಸಮೀಕ್ಷೆಯಿಂದ ತಿಳಿದುಬಂದಿದೆ.

ಕೋಷ್ಟಕ:೪.೩.೫ ಭೂ ಹಿಡುವಳಿ ಹೊಂದಿದ ಕೊಪ್ಪಳ ಜಿಲ್ಲೆಯ ಜಾತಿವಾರು ಲೈಂಗಿಕ ಕಾರ್ಯಕರ್ತೆಯರ ವಿವರ




ಭೂಹಿಡುವಳಿ ಹೊಂದಿದ ಹಾಗೂ ಹೊಂದಿರದ ಲೈಂಗಿಕ ಕಾರ್ಯಕರ್ತೆಯರ ಪ್ರಮಾಣ ಗಮನಿಸಿದಾಗ ಅದರಲ್ಲಿ ನಾಯಕ ಸಮುದಾಯದಕ್ಕೆ ಸೇರಿದ ಲೈಂಗಿಕ ಕಾರ್ಯಕರ್ತೆಯರು ಹೆಚ್ಚಿನ ಸಂಖ್ಯೆಯಲ್ಲಿ ಭೂಮಿಯನ್ನು ಹೊಂದಿರುವವರಾಗಿದ್ದು, ಬಹುತೇಕ ಅವರೆಲ್ಲ ದೇವದಾಸಿಗಳಾಗಿದ್ದಾರೆ. ಮಾದಿಗ ಹಾಗೂ ಚಲವಾದಿ ಸಮುದಾಯದ ದೇವದಾಸಿಯರು ವೇಶ್ಯಾವಾಟಿಕೆಯಲ್ಲಿ ತೊಡಗಿದ್ದು ಅವರಿಗೂ ತುಂಡು ಭೂಮಿಗಳಿರುವುದಾಗಿ ಕ್ಷೇತ್ರಕಾರ್ಯದಲ್ಲಿ ತಿಳಿದುಬಂದಿತು. ಕಮ್ಮ, ಕಾಪು ಇತ್ಯಾದಿ ಸಮುದಾಯದ ಭೂಹಿಡುವಳಿ ಹೊಂದಿರುವ ಮಹಿಳೆಯರು ವಿಧವೆಯರಾಗಿದ್ದು ಅವರ ಗಂಡಂದಿರ ಸಾವಿನ ತರುವಾಯ ಭೂಮಿಯ ಹಕ್ಕುಭಾದ್ಯತೆ ಅವರ ಹೆಸರಿಗೆ ವರ್ಗಾವಣೆಯಾಗಿರುವುದಾಗಿ ತಿಳಿಸಿದರು.

**ಕರ್ನಾಟಕದ ಲೈಂಗಿಕ ಕಾರ್ಯಕರ್ತೆಯರ ವಸತಿ ವಿವರ**

ಕರ್ನಾಟಕದ ಒಟ್ಟು ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ಜಾತಿ, ವರ್ಗ ಇತ್ಯಾದಿ ಸಮುದಾಯಗಳಲ್ಲಿ ಈ ಹಿಂದೆ ಶಾಶ್ವತ ಮನೆಗಳು ಕಂಡು ಬರುವುದು ಅತ್ಯಲ್ಪವಾಗಿತ್ತು. ಕೇವಲ ಹುಲ್ಲಿನ ಗುಡಿಸಲು, ತಾಳೆಗರಿ ಗುಡಿಸಲುಗಳ ಪ್ರಮಾಣವೇ ಶೇಕಡ ತೊಂಭತ್ತರಷ್ಟಿದ್ದಿತು. ಆದರೆ "ಇತ್ತೀಚಿನ ಎರಡು ದಶಕಗಳೀಚೆಗೆ ಸರ್ಕಾರ ಕೊಡಮಾಡುವ ಆಶ್ರಯ, ಅಂಬೇಡ್ಕರ್, ಇಂದಿರಾ ಆವಾಸ್ ಮುಂತಾದ ವಸತಿ ಯೋಜನೆಗಳ ಲಾಭ ಪಡೆದ ಸಮುದಾಯದ ಕುಟುಂಬಗಳು ತಮ್ಮ ಹುಲ್ಲು ಮನೆಯ ಬದಲಾಗಿ ಶಾಶ್ವತವಾದ ಮನೆಗಳನ್ನು ಕಾಣುವಂತಾಗಿದೆ"[7]

**೪.೩.೬ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವ ಲೈಂಗಿಕ ಕಾರ್ಯಕರ್ತೆಯರು**

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ನಗರಪ್ರದೇಶಗಳಲ್ಲಿ ಶೇಕಡ ೬೦ರಷ್ಟು ಲೈಂಗಿಕ ಕಾರ್ಯಕರ್ತೆಯರು ನೆಲೆಸಿರುವರು. ಗ್ರಾಮೀಣ ಪ್ರದೇಶಗಳಲ್ಲಿ ಶೇಕಡ ೪೦ರಷ್ಟು ಲೈಂಗಿಕ ಕಾರ್ಯಕರ್ತೆಯರು ನೆಲೆಸಿರುವರು.

ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿದ್ದರೂ ವೇಶ್ಯಾ ವೃತ್ತಿಯನ್ನು ಮಾಡಲು ಬಹುತೇಕ ನಗರ ಪ್ರದೇಶಗಳನ್ನೇ ಇವರು ಆಶ್ರಯಿಸಿರುವರು.

| ಕೋಷ್ಟಕ: ೪.೩.೬ ನಗರ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವ ಲೈಂಗಿಕ ಕಾರ್ಯಕರ್ತೆಯರು(ಶೇಕಡವಾರು) | |
|---|---|
| **ನಗರ ಪ್ರದೇಶಗಳಲ್ಲಿ ನೆಲೆಸಿದವರು** | **ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿದವರು** |
| ೬೦ | ೪೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ನಗರ ಪ್ರದೇಶಗಳಲ್ಲಿ ನೆಲೆಸಿದವರು ಬಹುತೇಕ ಕೊಳಚೆ ಪ್ರದೇಶಗಳಲ್ಲಿಯೇ ಆಶ್ರಯವನ್ನು ಪಡೆದಿರುವರು. ಉದಾಹರಣೆಗೆ ಬಳ್ಳಾರಿ ನಗರದಲ್ಲಿ ಡಿ.ಸಿ ಕಾಲೋನಿ, ಬಸವನಕುಂಟೆಗಳಲ್ಲಿ, ಹೊಸಪೇಟೆಯಲ್ಲಿ ಜಬ್ಬಲ, ಚಪ್ಪರದಹಳ್ಳಿ, ರೈಲ್ವೆಸ್ಟೇಷನ್ ಪರಿಸರದ ಕೊಳಚೆ ಪ್ರದೇಶ, ಕೂಡ್ಲಿಗಿಯ ಹೊಸಪೇಟೆ ರಸ್ತೆಯಲ್ಲಿರುವ ೭ನೇ ವಾರ್ಡಿನ ಕೊಳಚೆ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತರು ನೆಲೆಗಳನ್ನು ಹೊಂದಿರುವರು. ಅದೇ ರೀತಿಯಾಗಿ ಕೊಪ್ಪಳದ ಮುಂಡ್ರಿಗಿ ರಸ್ತೆಯಲ್ಲಿರುವ ಕೊಳಚೆ ಪ್ರದೇಶ, ಬಸ್ ಸ್ಟಾಂಡ್ ಮುಂಭಾಗ, ಹಿಂಭಾಗದ ಕೊಳಚೆ ಪ್ರದೇಶ, ಭಾಗ್ಯನಗರ, ಗಂಗಾವತಿಯ ಇಸ್ಲಾಂಪುರ, ಜೂಲೈನಗರ, ಬಸ್ ನಿಲ್ದಾಣದ ಹಿಂಭಾಗ, ಮಾರ್ಕೆಟ್ ಪ್ರದೇಶದ ಕೊಳಚೆ ಪ್ರದೇಶಗಳಲ್ಲಿ ಲೈಂಗಿಕ ಕಾರ್ಯಕರ್ತೆಯರ ನೆಲೆಗಳಿವೆ. ಇನ್ನು ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವವರು ಮಾದಿಗಕೇರಿ, ಚಲವಾದಿಕೇರಿ, ನಾಯಕರಕೇರಿ ಇತ್ಯಾದಿ ಪ್ರದೇಶಗಳ ನೆಲೆಗಳಲ್ಲಿಯೂ ನೆಲೆಸಿರುವರು.

**೪.೩.೭ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ನಗರ ಹಾಗೂ ಗ್ರಾಮೀಣ ಪ್ರದೇಶಗಳ ಲೈಂಗಿಕ ಕಾರ್ಯಕರ್ತೆಯರ ಮನೆಗಳ ಸ್ವರೂಪ**

ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿರುವ ಲೈಂಗಿಕ ಕಾರ್ಯಕರ್ತೆಯರು ತಿಳಿಸಿರುವಂತೆ ಅವರು ನೆಲೆಸಿರುವ ಮನೆಗಳ ಸ್ವರೂಪದ ವಿವರ ಇಲ್ಲಿ ನೀಡಲಾಗಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ಚಪ್ಪರದಹಳ್ಳಿ ಕೊಳಚೆ ಪ್ರದೇಶದಲ್ಲಿ ಲೈಂಗಿಕ ಕಾರ್ಯಕರ್ತೆ ಒಂದು ಗುಡಿಸಲನ್ನು ಹೊಂದಿರುವರು ಹಾಗೂ ಇದೇ ಜಿಲ್ಲೆಯ ಗ್ರಾಮೀಣ ಭಾಗ ಬೇರೆ ಬೇರೆ ಗ್ರಾಮಗಳಲ್ಲಿ ಒಟ್ಟು ೭ ಗುಡಿಸಲನ್ನು ಹೊಂದಿರುವರು. ಕೊಪ್ಪಳ ಜಿಲ್ಲೆಯ ನಗರ ಪ್ರದೇಶದಲ್ಲಿ ಲೈಂಗಿಕ ಕಾರ್ಯಕರ್ತೆಯರು ಒಂದು ಗುಡಿಸಿಲನ್ನೂ ಹೊಂದಿರುವುದಿಲ್ಲ. ಆದರೆ ಗ್ರಾಮೀಣ ಭಾಗದ ಬೇರೆ ಬೇರೆ ಕಡೆ ೯ ಗುಡಿಸಲುಗಳನ್ನು ಹೊಂದಿರುವರು.

| ಕೋಷ್ಟಕ: ೪.೩.೭ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ನಗರ ಹಾಗೂ ಗ್ರಾಮೀಣ ಪ್ರದೇಶಗಳ ಲೈಂಗಿಕ ಕಾರ್ಯಕರ್ತೆಯರ ಮನೆಗಳ ಸ್ವರೂಪ | | | | |
|---|---|---|---|---|
| ವಿವರ | ಬಳ್ಳಾರಿ ಜಿಲ್ಲೆ | | ಕೊಪ್ಪಳ ಜಿಲ್ಲೆ | |
| | ನಗರ | ಗ್ರಾಮೀಣ | ನಗರ | ಗ್ರಾಮೀಣ |
| ಗುಡಿಸಲು | ೦೧ | ೦೭ | – | ೦೯ |
| ಟೆಂಟ್ | ೦೩ | – | ೦೪ | – |
| ಕಚ್ಚಾ ಮನೆ | ೨೪ | ೩೦ | ೨೬ | ೨೯ |
| ಪಕ್ಕಾ ಮನೆ | ೦೨ | ೦೧ | ೦೨ | ೦೨ |
| ಬಾಡಿಗೆ | ೩೦ | ೦೨ | ೨೫ | ೦೩ |
| ಒಟ್ಟು | ೬೦ | ೪೦ | ೫೭ | ೪೩ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಕೋಷ್ಟಕ: ೪.೩.೭ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ನಗರ ಹಾಗೂ ಗ್ರಾಮೀಣ ಪ್ರದೇಶಗಳ ಲೈಂಗಿಕ ಕಾರ್ಯಕರ್ತೆಯರ ಮನೆಗಳ ಸ್ವರೂಪ




ಬಳ್ಳಾರಿ ಜಿಲ್ಲೆಯ ನಗರ ಪ್ರದೇಶದಲ್ಲಿ ಮೂವರು ಹಾಗೂ ಕೊಪ್ಪಳದ ನಗರ ಪ್ರದೇಶದಲ್ಲಿ ನಾಲ್ಕು ಜನರು ಟೆಂಟ್‌ಗಳಲ್ಲಿ ವಾಸವಾಗಿರುವುದಾಗಿ ತಿಳಿಸಿದರು.

ಬಳ್ಳಾರಿ ಜಿಲ್ಲೆಯ ಕೊಳಚೆ ಪ್ರದೇಶಗಳಲ್ಲಿ (ಉದಾ: ಡಿ ಸಿ ನಗರ ಇತ್ಯಾದಿ) ಸರ್ಕಾರದ ವಸತಿ ಯೋಜನೆಯಡಿ ಕಚ್ಚಾ ಮನೆಗಳನ್ನು ನಿರ್ಮಿಸಿಕೊಂಡವರು ೨೪ ಜನ, ಕೊಪ್ಪಳ ಜಿಲ್ಲೆಯ ಕೊಳಚೆ ಪ್ರದೇಶಗಳಲ್ಲಿ ಸರ್ಕಾರದ ವಸತಿ ಯೋಜನೆಯಡಿ ಕಚ್ಚಾ ಮನೆಗಳನ್ನು ನಿರ್ಮಿಸಿಕೊಂಡವರು ೨೬ ಜನರಿದ್ದಾರೆ.

ಬಳ್ಳಾರಿ ಜಿಲ್ಲೆಯ ಗ್ರಾಮೀಣ ಭಾಗದ ನಾನಾ ಗ್ರಾಮಗಳಲ್ಲಿ ಸರ್ಕಾರದ ವಸತಿ ಯೋಜನೆಯಡಿ ಕಚ್ಚಾ ಮನೆಗಳನ್ನು ನಿರ್ಮಿಸಿಕೊಂಡವರು ೩೦ ಜನರಿದ್ದಾರೆ. ಕೊಪ್ಪಳ ಜಿಲ್ಲೆಯಲ್ಲಿ ೨೯ ಜನರಿದ್ದಾರೆ.

ಬಳ್ಳಾರಿ ಜಿಲ್ಲೆಯ ನಗರ ಪ್ರದೇಶದಲ್ಲಿ ಪಕ್ಕಾ ಮನೆ ಹೊಂದಿದವರು ೨ ಜನ ಹಾಗೂ ಗ್ರಾಮೀಣ ಭಾಗದಲ್ಲಿ ಒಬ್ಬರು, ಕೊಪ್ಪಳ ಜಿಲ್ಲೆಯ ನಗರ ಪ್ರದೇಶದಲ್ಲಿ ಪಕ್ಕಾ ಮನೆ ಹೊಂದಿದವರು ೨ ಜನ ಹಾಗೂ ಗ್ರಾಮೀಣ ಭಾಗದಲ್ಲಿ ೨ ಜನ ಲೈಂಗಿಕ ಕಾರ್ಯಕರ್ತೆಯರಿರುವರು.

ಬಳ್ಳಾರಿ ಜಿಲ್ಲೆಯ ನಗರ ಪ್ರದೇಶದಲ್ಲಿ ಬಾಡಿಗೆ ಮನೆ ಆಶ್ರಯಿಸಿದ ಲೈಂಗಿಕ ಕಾರ್ಯಕರ್ತೆಯರು ೩೦ ಜನ ಹಾಗೂ ಗ್ರಾಮೀಣ ಭಾಗದಲ್ಲಿ ಇಬ್ಬರು, ಕೊಪ್ಪಳ ಜಿಲ್ಲೆಯ ನಗರ ಪ್ರದೇಶದಲ್ಲಿ ಬಾಡಿಗೆ ಮನೆ ಆಶ್ರಯಿಸಿದ ಲೈಂಗಿಕ ಕಾರ್ಯಕರ್ತೆಯರು ೨೫ ಜನ ಹಾಗೂ ಗ್ರಾಮೀಣ ಭಾಗದಲ್ಲಿ ಇಬ್ಬರು ೩ ಜನ ಲೈಂಗಿಕ ಕಾರ್ಯಕರ್ತೆಯರಿರುವರು.

ಶೇಕಡವಾರುಗಳಲ್ಲಿ ಹೇಳುವುದಾದರೆ ೨೦೦ ಲೈಂಗಿಕ ಕಾರ್ಯಕರ್ತೆಯರಲ್ಲಿ ಗುಡಿಸಲುವಾಸಿಗಳು ಶೇಕಡ ೮.೫, ಶೇಕಡ ೩.೫ ಟೆಂಟ್, ಶೇಕಡ ೫೪.೫ ಶೇಕಡ ಕಚ್ಚಾ ಮನೆ, ಶೇಕಡ ೩.೫ ಪಕ್ಕಾ ಮನೆ, ಶೇಕಡ ೩೦ ಬಾಡಿಗೆ ಮನೆ ಆಶ್ರಯಿಸಿರುವುದು ತಿಳಿದುಬಂದಿದೆ.

**೪.೩.೮ ಲೈಂಗಿಕ ಕಾರ್ಯಕರ್ತೆಯರ ಶೌಚಾಲಯಗಳ ಸ್ವರೂಪ**

ಮನೆಗಳಿಗೆ ಶೌಚಾಲಯ ಹೊಂದಿರುವುದಾಗಿ ತಿಳಿಸಿದವರು ಒಟ್ಟು ೧೨೭ ಲೈಂಗಿಕ ಕಾರ್ಯಕರ್ತೆಯರು. ಇದರಲ್ಲಿ ಬಳ್ಳಾರಿಯ ೬೫, ಕೊಪ್ಪಳದ ೬೨ ಜನರಿರುವರು

ಶೌಚಾಲಯ ಹೊಂದಿಲ್ಲವೆಂದು ತಿಳಿಸಿದವರು ಒಟ್ಟು ೭೩ ಲೈಂಗಿಕ ಕಾರ್ಯಕರ್ತೆಯರು. ಇದರಲ್ಲಿ ಬಳ್ಳಾರಿಯ ೩೫, ಕೊಪ್ಪಳದ ೩೮ ಜನರಿರುವರು.

**ಕೋಷ್ಟಕ: ೪.೩.೮ ಲೈಂಗಿಕ ಕಾರ್ಯಕರ್ತೆಯರ ಶೌಚಾಲಯಗಳ ಸ್ವರೂಪ**

| ಕ್ರಸ ವಿವರ | ಬಳ್ಳಾರಿ ಜಿಲ್ಲೆ | ಕೊಪ್ಪಳ ಜಿಲ್ಲೆ | ಒಟ್ಟು |
|---|---|---|---|
| ೧ ಶೌಚಾಲಯ ಹೊಂದಿದವರು | ೬೫ | ೬೨ | ೧೨೭ |
| ೨ ಶೌಚಾಲಯ ಹೊಂದದವರು | ೩೫ | ೩೮ | ೭೩ |
| ಒಟ್ಟು | ೧೦೦ | ೧೦೦ | ೨೦೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

**ಕೋಷ್ಠಕ: ೪.೩.೭ ಲೈಂಗಿಕ ಕಾರ್ಯಕರ್ತೆಯರ ಶೌಚಾಲಯಗಳ ಸ್ವರೂಪ**




ಬಹುಪಾಲು ಲೈಂಗಿಕ ಕಾರ್ಯಕರ್ತೆಯರು ಇತ್ತೀಚೆಗೆ ಸರ್ಕಾರವು ಶೌಚಾಲಯ ನಿರ್ಮಾಣಕ್ಕಾಗಿ ಕೊಟ್ಟಿರುವ ಸಹಾಯಧನ (ರೂ ೧೨,೦೦೦/-)ವನ್ನು ಬಳಕೆಮಾಡಿಕೊಂಡು ಶೌಚಾಲಯ ನಿರ್ಮಿಸಿಕೊಂಡಿರುವುದಾಗಿ ಹೇಳಿದರು. ಶೌಚಾಲಯ ನಿರ್ಮಾಣಕ್ಕೆ ಸರ್ಕಾರವು ನೀಡುತ್ತಿರುವ ಹಣ ಸಾಲದೆ ತಾವು ಸ್ವಲ್ಪ ಹಣ ಹಾಕಿ ಶೌಚಾಲಯ ನಿರ್ಮಿಸಿಕೊಂಡಿದ್ದೇವೆ ಎಂದು ಬಹಳ ಜನ ಲೈಂಗಿಕ ಕಾರ್ಯಕರ್ತೆಯರು ತಿಳಿಸಿದ್ದಾರೆ.

**೪.೩.೮. ಲೈಂಗಿಕ ಕಾರ್ಯಕರ್ತೆಯರ ದುಡುಮೆಯ ಸ್ವರೂಪ**

ಲೈಂಗಿಕ ಕಾರ್ಯಕರ್ತೆಯರ ದುಡುಮೆಯು ಅವರ ವಯಸ್ಸು ಹಾಗೂ ಸೌಂದರ್ಯ, ಮಾತಿನ ಚಾಕಚಕ್ಯತೆಯನ್ನು ಅವಲಂಭಿಸಿದೆ. ಮಹಿಳೆಯು ಎಷ್ಟು ಕಡಿಮೆ ವಯೋಮಾನದವಳಾಗಿರುವಳೋ ಅಷ್ಟು ಹೆಚ್ಚಿನ ವ್ಯಾಪಾರವಾಗುವುದೆಂದು ಗಂಗಾವತಿಯ ಮಾರುಕಟ್ಟೆಯ ಪರಿಸರದಲ್ಲಿರುವ ಅಡ್ಡೆಯ ಯಜಮಾನಿ ತಿಳಿಸಿದಳು. ಲೈಂಗಿಕ ಕಾರ್ಯಕರ್ತೆಯರ ಆದಾಯವು ನಿರ್ಧಿಷ್ಟವಾಗಿರುವುದಿಲ್ಲ. ದಿನಕ್ಕೆ ಕನಿಷ್ಠ ಒಬ್ಬ ಗಿರಾಕಿಯಿಂದ ಗರಿಷ್ಠ ಹತ್ತು ಗಿರಾಕಿಗಳವರೆಗೂ ದೇಹವನ್ನು ಹಂಚಿಕೊಳ್ಳುವುದಾಗಿ ಲೈಂಗಿಕ ಕಾರ್ಯಕರ್ತೆಯೊಬ್ಬಳು ಹೇಳಿದಳು.

ಲೈಂಗಿಕ ಕಾರ್ಯಕರ್ತೆಯರ ದುಡುಮೆಯನ್ನು ಮಾನದಂಡವಾಗಿರಿಸಿಕೊಂಡು ಮೂರು ವರ್ಗಗಳನ್ನಾಗಿ ಮಾಡಲಾಗಿದೆ

- ಗಿರಾಕಿಯೊಬ್ಬನಿಂದ ಒಂದು ಬಾರಿಗೆ ಮೈಹಂಚಿಕೊಳ್ಳಲು ಕನಿಷ್ಠ ರೂ ೫೦/-ರಿಂದ ರೂ ೧೦೦/ -ಪಡೆಯುವವರನ್ನು ಕೆಳದರ್ಜೆಯವರು

- ಗಿರಾಕಿಯೊಬ್ಬನಿಂದ ಒಂದು ಬಾರಿಗೆ ಮೈಹಂಚಿಕೊಳ್ಳಲು ಕನಿಷ್ಠ ರೂ ೫೦೦/-ರಿಂದ ರೂ ೧೦೦೦/-ಪಡೆಯುವವರನ್ನು ಮಧ್ಯಮದರ್ಜೆಯವರು
- ಗಿರಾಕಿಯೊಬ್ಬನಿಂದ ಒಂದು ಬಾರಿಗೆ ಮೈಹಂಚಿಕೊಳ್ಳಲು ಕನಿಷ್ಠ ರೂ ೧೦೦೦/-ಕ್ಕೂ ಮೇಲ್ಪಟ್ಟು ಹಣ ಪಡೆಯುವವರನ್ನು ಮೇಲ್ದರ್ಜೆಯವರು

### ೪.೩.೯. ಪೂರ್ಣಾವಧಿ ಹಾಗೂ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ

ಲೈಂಗಿಕ ಕಾರ್ಯಕರ್ತೆಯರಲ್ಲಿ ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು ಒಟ್ಟು ೧೫೫ ಇದ್ದು. ಇವರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೮೫, ಕೊಪ್ಪಳ ಜಿಲ್ಲೆಯಲ್ಲಿ ೭೦ ಮಹಿಳೆಯರಿದ್ದಾರೆ. ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರು ಒಟ್ಟು ೪೫ ಜನರಿರುವರು. ಇವರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೧೫, ಕೊಪ್ಪಳ ಜಿಲ್ಲೆಯಲ್ಲಿ ೩೦ ಜನರಿದ್ದಾರೆ.

**ಕೋಷ್ಟಕ:೪.೩.೯ ಪೂರ್ಣಾವಧಿ ಹಾಗೂ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸ | ಜಿಲ್ಲೆ | ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರು | ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರು |
|---|---|---|---|
| ೧ | ಬಳ್ಳಾರಿ | ೮೫ | ೧೫ |
| ೨ | ಕೊಪ್ಪಳ | ೭೦ | ೩೦ |
| | ಒಟ್ಟು | ೧೫೫ | ೪೫ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

**ಕೋಷ್ಟಕ:೪.೩.೯ ಪೂರ್ಣಾವಧಿ ಹಾಗೂ ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರ ವಿವರ**



ಪೂರ್ಣಾವಧಿ ಲೈಂಗಿಕ ಕಾರ್ಯಕರ್ತೆಯರಲ್ಲಿ ಕೆಳದರ್ಜೆ ಹಾಗೂ ಮಧ್ಯಮ ದರ್ಜೆಯ ಮಹಿಳೆಯರಿರುವರು. ಅಲ್ಪಾವಧಿ ಲೈಂಗಿಕ ಕಾರ್ಯಕರ್ತೆಯರಲ್ಲಿ ಮೇಲ್ದರ್ಜೆಯ ಮಹಿಳೆಯರಿರುವರು.

**೪.೩.೧೦. ಕೆಳದರ್ಜೆ, ಮಧ್ಯಮ ದರ್ಜೆ, ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರ ವಿವರ**

ಲೈಂಗಿಕ ಕಾರ್ಯಕರ್ತೆಯರು ಗಳಿಸುವ ಆದಾಯದ ಮೇಲೆ ಅವರನ್ನು ಕೆಳದರ್ಜೆ, ಮಧ್ಯಮ ದರ್ಜೆ, ಮೇಲ್ದರ್ಜೆಯವರೆಂದು ಗುರುತಿಸಲಾಗಿದೆ. ಸಮೀಕ್ಷಿಸಲಾದ ಲೈಂಗಿಕ ಕಾರ್ಯಕರ್ತೆಯರಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಿಂದ ಒಟ್ಟು ೧೦೬ ಜನರಿರುವರು. ಇದರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೬೦ ಹಾಗೂ ಕೊಪ್ಪಳ

**ಕೋಷ್ಟಕ: ೪.೩.೧೦. ಕೆಳದರ್ಜೆ, ಮಧ್ಯಮ ದರ್ಜೆ, ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರ ವಿವರ**

| ಕ್ರಸ | ವಿವರ | ಬಳ್ಳಾರಿ ಜಿಲ್ಲೆ | ಕೊಪ್ಪಳ ಜಿಲ್ಲೆ | ಒಟ್ಟು |
|---|---|---|---|---|
| ೧ | ಕೆಳದರ್ಜೆ | ೬೦ | ೪೬ | ೧೦೬ |
| ೨ | ಮಧ್ಯಮ ದರ್ಜೆ | ೨೫ | ೨೪ | ೪೯ |
| ೩ | ಮೇಲ್ದರ್ಜೆ | ೧೫ | ೩೦ | ೪೫ |
| | **ಒಟ್ಟು** | ೧೦೦ | ೧೦೦ | ೨೦೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಜಿಲ್ಲೆಯಲ್ಲಿ ೪೬ ಲೈಂಗಿಕ ಕಾರ್ಯಕರ್ತೆಯರಿರುವರು. ಮಧ್ಯಮ ದರ್ಜೆಯ ಲೈಂಗಿಕ ಕಾರ್ಯಕರ್ತೆಯರಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಿಂದ ಒಟ್ಟು ೪೯ ಜನರಿರುವರು. ಇದರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೨೫ ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ೨೪ ಲೈಂಗಿಕ ಕಾರ್ಯಕರ್ತೆಯರಿರುವರು. ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಿಂದ ಒಟ್ಟು ೪೫. ಇದರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೧೫ ಹಾಗೂ ಕೊಪ್ಪಳ ಜಿಲ್ಲೆಯಲ್ಲಿ ೩೦ ಲೈಂಗಿಕ ಕಾರ್ಯಕರ್ತೆಯರಿರುವರು.

ರಸ್ತೆಬದಿ, ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ ಇತ್ಯಾದಿ ಕಡೆ ವ್ಯಾಪಾರಕ್ಕೆ ನಿಂತ ಲೈಂಗಿಕ ಕಾರ್ಯಕರ್ತೆಯರು ಸಾಮಾನ್ಯವಾಗಿ ರೂ ೫೦/-ರಿಂದ ರೂ ೧೦೦/-ಪಡೆಯುವುದಾಗಿ ತಿಳಿಸಿದ್ದಾರೆ. ಇವರಿಗೆ ಸಾಮಾನ್ಯವಾಗಿ ಅಂದಿನ ಜೀವನ ಸಾಗಿದರೆ ಸಾಕು ಎಂದು ಆಶಿಸುವರು. ಇವರಲ್ಲಿ ಕೆಲವರು ನೇರವಾಗಿ ಗಿರಾಕಿಗಳನ್ನು ಹಿಡಿಯುವರು ಇಲ್ಲವೆ ಸ್ಥಳೀಯವಾಗಿ ಹಮಾಲಿ ಕೆಲಸ ಮಾಡುವವರನ್ನು ಮಧ್ಯವರ್ತಿಗಳಾಗಿಸಿಕೊಂಡು ಗಿರಾಕಿ ಹಿಡಿಯುವರು. ಒಂದು ನೂರು ರೂಪಾಯಿ

**ಕೋಷ್ಟಕ: ೪.೩.೧೦. ಕೆಳದರ್ಜೆ, ಮಧ್ಯಮ ದರ್ಜೆ, ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರ ವಿವರ**




ಕೊಡುವ ಗಿರಾಕಿಯೊಂದನ್ನು ಹಿಡಿದು ತಂದರೆ ಅಂತಹ ಮಧ್ಯವರ್ತಿಗೆ ಗಿರಾಕಿ ನೀಡುವ ಹಣದಲ್ಲಿ ಶೇಕಡ ೨೫ರಷ್ಟು ಹಣವನ್ನು ಕಮಿಷನ್ ನೀಡುವರೆಂದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿತು. ಸಾಮಾನ್ಯವಾಗಿ ಬಸ್‌ನಿಲ್ದಾಣ, ರೈಲ್ವೆನಿಲ್ದಾಣಗಳಲ್ಲಿ ಸಾಯಂಕಾಲದಿಂದ ಮಧ್ಯರಾತ್ರಿಯವರೆಗೂ ವಹಿವಾಟು ನಡೆಯುತ್ತದೆಂದು ಹೇಳುವರು. ಮಧ್ಯವರ್ತಿಗೆ ಕಮಿಷನ್ ರೂಪದಲ್ಲಿ ಹಣಕೊಡುವುದಲ್ಲದೆ ಪೋಲಿಸರಿಗೂ ಇಂತಿಷ್ಟೆಂದು ಹಣ ಸಂದಾಯ ಮಾಡಲೇಬೇಕು. ಪೋಲೀಸ್ ಹಾಗೂ ಮಧ್ಯವರ್ತಿಗಳಿಗೆ ಕೊಡುವ ಹಣ ಕಳೆದರೆ ಲೈಂಗಿಕ ಕಾರ್ಯಕರ್ತೆಗೆ ಉಳಿಯುವುದು ಶೇಕಡ ೫೦ರಷ್ಟು ಹಣ ಮಾತ್ರ, ಇದರಲ್ಲಿ ಅವಳ ಊಟ, ಕುಡಿತ ಇತ್ಯಾದಿಗಳಿಗೆ ಖರ್ಚು ಮಾಡಿ ಉಳಿದ ಹಣವನ್ನು ಮನೆಗೆ ಒಯ್ಯಬೇಕಾಗುವುದು.

ಅಡ್ಡೆಗಳಲ್ಲಿದ್ದು ವ್ಯವಹರಿಸುವ ಲೈಂಗಿಕ ಕಾರ್ಯಕರ್ತೆಯರು ಸಹ ಗಿರಾಕಿಯೊಂದಿಗೆ ಒಮ್ಮೆ ಮಲಗಲು ರೂ ೧೦೦/–ರಿಂದ ರೂ ೧೫೦/–ರವರೆಗೂ ಹಣ ಪಡೆಯುವರು. ಇಲ್ಲಿ ಗಿರಾಕಿಗಳಿಂದ ಹಣ ಪಡೆಯುವ ಹಾಗೂ ಬೆಲೆ ನಿಗದಿಪಡಿಸುವವಳು ಅಡ್ಡೆಯ ಮಾಲಿಕ (ಘರವಾಲಿ)ಳಾಗಿರುತ್ತಾಳೆ. ಗಿರಾಕಿಯೊಬ್ಬನಿಂದ ರೂ ೧೦೦/–ಪಡೆದರೆ ರೂ ೫೦/–ನ್ನು ಲೈಂಗಿಕ ಕಾರ್ಯಕರ್ತೆಗೆ ನೀಡಲಾಗುವುದು. ಇನ್ನುಳಿದ ಹಣದಲ್ಲಿ ತನ್ನ ಕಮಿಷನ್, ಪೋಲಿಸ್ ಮಾಮೂಲು, ಗೂಂಡಾಗಳ ಮಾಮೂಲು, ಸ್ಥಳದ ಬಾಡಿಗೆ ಇತ್ಯಾದಿಗಳನ್ನು ಅಡ್ಡೆಯ ಮಾಲಿಕಳು ಪಡೆಯುವಳು. ಅಂದರೆ ದಿನವೊಂದಕ್ಕೆ ೧೦ ಗಿರಾಕಿಗಳಿಂದ ಒಂದು ಸಾವಿರ ರೂಪಾಯಿ ಪಡೆದರೆ ರೂ ೫೦೦/– ಲೈಂಗಿಕ ಕಾರ್ಯಕರ್ತೆಗೂ ಇನ್ನುಳಿದ ರೂ ೫೦೦/– ಘರವಾಲಿಯ ಲೆಕ್ಕದಲ್ಲಿಯೂ ಸಂದಾಯವಾಗುವುದು.

ಮಧ್ಯಮ ದರ್ಜೆಯ ಲೈಂಗಿಕ ಕಾರ್ಯಕರ್ತೆಯು ಗಿರಾಕಿಯೊಬ್ಬನಿಂದ ಒಂದುಬಾರಿಗೆ ಮೈಹಂಚಿಕೊಳ್ಳಲು ಕನಿಷ್ಠ ರೂ ೫೦೦/–ರಿಂದ ರೂ ೧೦೦೦/–ಪಡೆಯುವರು. ಇವರು ೧೨ ತಾಸು ಗಿರಾಕಿಯೊಂದಿಗೆ ಸಮಯ ಕಳೆಯಲು ರೂ ೫೦೦೦/–ದವರೆಗೂ ಹಣಪಡೆಯುವುದಾಗಿ ಹೇಳುತ್ತಾರೆ. ಇವರು ಬಹುತೇಕ ಮಧ್ಯವರ್ತಿಗಳನ್ನೇ ಆಶ್ರಯಿಸಿರುವರು. ಬಹುತೇಕ ಇಂತಹ ಲೈಂಗಿಕ ಕಾರ್ಯಕರ್ತೆಯರಿಗೆ ಲಾಡ್ಜ್‌ನೊಳಗಿನ ಸರ್ವರ್ಸ್‌ಗಳು, ಮ್ಯಾನೇಜರ್, ಟೂರಿಸ್ಟ್ ಗೈಡ್‌ಗಳು ಇತ್ಯಾದಿ ಮಧ್ಯವರ್ತಿಗಳನ್ನು ಆಶ್ರಯಿಸಿರುವರು. ಇವರೂ ಸಹ ಶೇಕಡ ೨೦ರಿಂದ ೨೫ರಷ್ಟನ್ನು ಮಧ್ಯವರ್ತಿಗಳಿಗೆ ನೀಡುವರು. ಈ ದರ್ಜೆಯ ಲೈಂಗಿಕ ಕಾರ್ಯಕರ್ತೆಯರು ಸ್ಥಳೀಯವಾಗಿ ಗಿರಾಕಿಗಳೊಂದಿರಲು ಒಂದು ಬೆಲೆಯನ್ನು ನಿಗದಿಪಡೆಸಿದರೆ ಪರಸ್ಥಳಗಳಿಗೆ (ಉದಾ: ಗೋವಾ, ಗೋಕರ್ಣ ಇತ್ಯಾದಿ) ಹೋಗಲು ಮತ್ತೊಂದು ದರವನ್ನೇ ನಿಗದಿಪಡಿಸುವರು. ಇವರು ಸಾಮಾನ್ಯವಾಗಿ ತಮ್ಮ ಊಟ, ಕುಡಿತ ಇತ್ಯಾದಿ ಖರ್ಚನ್ನು ಗಿರಾಕಿಗಳು ಪೂರೈಸುವಂತೆ ನೋಡಿಕೊಳ್ಳುವರು.

ಮೇಲ್ದರ್ಜೆಯ ಲೈಂಗಿಕ ಕಾರ್ಯಕರ್ತೆಯರು ಒಂದುಬಾರಿಗೆ ಮೈಹಂಚಿಕೊಳ್ಳಲು ಕನಿಷ್ಠ ರೂ ೧೦೦೦/–ಕ್ಕೂ ಮೇಲ್ಪಟ್ಟು ಹಣವನ್ನು ಪಡೆಯುವರು. ಇವರು ೧೨ ತಾಸು ಗಿರಾಕಿಯೊಂದಿಗೆ ಸಮಯ ಕಳೆಯಲು ರೂ ೫೦೦೦/–ದಿಂದ ರೂ ೧೦,೦೦೦/–ದವರೆಗೂ ಹಣಪಡೆಯುವುದಾಗಿ ಹೇಳುತ್ತಾರೆ. ಇವರು ಬಹುತೇಕ ಮಧ್ಯವರ್ತಿಗಳನ್ನು ಹಾಗೂ ಇಂಟರ್‌ನೆಟ್ ಬಳಸಿ ಗಿರಾಕಿಗಳನ್ನು ಹಿಡಿಯುವುದಾಗಿ ಹೇಳುವರು. ಬಹುತೇಕ ಈ ಲೈಂಗಿಕ ಕಾರ್ಯಕರ್ತೆಯರು ಗಿರಾಕಿಗಳೊಂದಿಗೆ ಕಾಲ ಕಳೆಯಲು ದೊಡ್ಡ ದೊಡ್ಡ ಲಾಡ್ಜ್, ಶ್ರೀಮಂತರು ವಾಸಿಸುವ ಕಾಲೋನಿಗಳ ದೊಡ್ಡ ಮನೆಗಳಂತಿರುವ ಅಡ್ಡೆಗಳ ಬಳಕೆ ಮಾಡಿಕೊಳ್ಳುವರು. ಇವರೂ ಸಹ ಮಧ್ಯವರ್ತಿಗಳನ್ನು ಬಳಸಿಕೊಂಡರೆ ಮಧ್ಯವರ್ತಿಗಳಿಗೆ ತಾವು ಗಿರಾಕಿಗಳಿಂದ ಪಡೆದ ಹಣದಲ್ಲಿ ಶೇಕಡ ೨೦ರಿಂದ ೨೫ರಷ್ಟು ಹಣವನ್ನು ಸಂದಾಯ ಮಾಡುವರು. ಈ ದರ್ಜೆಯ ಲೈಂಗಿಕ ಕಾರ್ಯಕರ್ತೆಯರು ಸಹ ಸ್ಥಳೀಯವಾಗಿಯಲ್ಲದೆ ಗಿರಾಕಿಗಳು ಇಷ್ಟ ಪಟ್ಟರೆ ಪರಸ್ಥಳಗಳಿಗೂ (ಉದಾ: ಗೋವಾ, ಗೋಕರ್ಣ ಇತ್ಯಾದಿ) ಹೋಗುವರು. ಇತ್ತೀಚೆಗೆ ತಮಗೆ ಗುರುತಿಲ್ಲದ ಲಾಡ್ಜ್‌ಗಳಲ್ಲಿ ಗುರುತಿನ ಚೀಟಿ, ಆಧಾರ್ ಕಾರ್ಡ್ ಇತ್ಯಾದಿ ಕೇಳುವುದರಿಂದ ಸ್ವಲ್ಪ ತೊಂದರೆ ಆಗುತ್ತಿದೆಯಂದು ಹೇಳುತ್ತಾರೆ. ಆದರೆ ಗೋವಾ, ಗೋಕರ್ಣ ಇತ್ಯಾದಿ ಕಡೆ ನಿರಂತರವಾಗಿ ಗಿರಾಕಿಗಳೊಂದಿಗೆ ಹೋಗುವುದರಿಂದ ಲಾಡ್ಜ್‌ನವರು ಪರಿಚಿತರಾಗಿರುವುದರಿಂದ ಹೆಚ್ಚು ತೊಂದರೆಯಾಗುತ್ತಿಲ್ಲ ಎಂದೂ ಹೇಳಿದ್ದಾರೆ.

ಶೇಕಡವಾರುಗಳಲ್ಲಿ ಹೇಳುವುದಾದರೆ ಎರಡೂ ಜಿಲ್ಲೆಗಳಲ್ಲಿರುವ ಕೆಳದರ್ಜೆಯ ಲೈಂಗಿಕ ಕಾರ್ಯ ಕಾರ್ಯಕರ್ತೆಯರು ಒಟ್ಟು ಶೇಕಡ ೫೩ರಷ್ಟಿರುವರು. ಬಳ್ಳಾರಿ ಜಿಲ್ಲೆಯಲ್ಲಿ ಶೇಕಡ ೩೦, ಕೊಪ್ಪಳ ಜಿಲ್ಲೆಯಲ್ಲಿ ಶೇಕಡ ೨೩ರಷ್ಟಿರುವರು. ಮಧ್ಯಮ ದರ್ಜೆಯ ಲೈಂಗಿಕ ಕಾರ್ಯಕರ್ತೆಯರು ಶೇಕಡ ೨೪.೫ ಇರುವರು. ಇವರು ಬಳ್ಳಾರಿಯಲ್ಲಿ ಶೇಕಡ ೧೨.೫, ಕೊಪ್ಪಳದಲ್ಲಿ ಶೇಕಡ ೧೨ ಇರುವರು.

ಮೇಲ್ದರ್ಜೆ ಲೈಂಗಿಕ ಕಾರ್ಯಕರ್ತೆಯರು ಒಟ್ಟು ಶೇಕಡ ೨೨.೫ ಇರುವರು. ಇವರು ಬಳ್ಳಾರಿಯಲ್ಲಿ ಶೇಕಡ ೭.೫, ಕೊಪ್ಪಳದಲ್ಲಿ ಶೇಕಡ ೧೫ ಇರುವರು.

### ೪.೩.೧೧ ಲೈಂಗಿಕ ಕಾರ್ಯಕರ್ತೆ ವೃತ್ತಿಯೊಂದಿಗೆ ಇತರ ವೃತ್ತಿಗಳನ್ನು ನಿರ್ವಹಿಸುವವರು

ವೇಶ್ಯಾವಾಟಿಕೆಯಲ್ಲಿ ತೊಡಗಿದ ಲೈಂಗಿಕ ಕಾರ್ಯಕರ್ತೆಯರು ಬಹುಪಾಲು ಬಡತನ ರೇಖೆಗಿಂತ ಕೆಳಗಿನವರು. ಶೇಕಡ ೫೩ರಷ್ಟು ಲೈಂಗಿಕ ಕಾರ್ಯಕರ್ತೆಯರು ಕೆಳದರ್ಜೆಯ ಲೈಂಗಿಕ ಕಾರ್ಯಕರ್ತೆಯರಾಗಿದ್ದು ಇವರು ವೇಶ್ಯಾವಾಟಿಕೆಯಿಂದ ಕಡಿಮೆ ಆದಾಯವನ್ನು ಪಡೆಯುವರು ಹಾಗೂ ಆದಾಯವು ಅನಿಶ್ಚಿತವಾಗಿರುವುದು. ಆದರೆ ವೇಶ್ಯಾವಾಟಿಕೆಯ ವೃತ್ತಿಯ ಆಚೆಗೆ ಇತರ ವೃತ್ತಿಯ ಕೌಶಲ್ಯಗಳು ಇವರಿಗೆ ಬರುವುದಿಲ್ಲ. ಇತರ ವೃತ್ತಿ ಕೌಶಲ್ಯಗಳನ್ನು ಕಲಿಯುವ ಆಸಕ್ತಿಯೂ ಇವರಿಗಿಲ್ಲ. ಬಡತನ, ಮದ್ಯ ಸೇವನೆ ಇತ್ಯಾದಿ ದುರ್ವ್ಯಸನಗಳು ಇವರನ್ನು ಬೇರೆ ವೃತ್ತಿ ಕೌಶಲ್ಯಗಳತ್ತ ಆಕರ್ಷಿಸದಂತೆ ಮಾಡಿವೆ. ಹೆಚ್ಚು ದುಡುಮೆಯಾದಾಗ ದುಂದುವೆಚ್ಚ ಮಾಡುವ, ಗಿರಾಕಿಗಳು ಸಿಗದಿದ್ದಾಗ ಬರೀ ತಣ್ಣೀರನ್ನು ಕುಡಿದು ಮಲಗುವ ಜೀವನ ಇವರದಾಗಿದೆ. ಹೀಗಿದ್ದೂ ಇವರಲ್ಲಿಯೇ ಕೆಲವರು ನಗರ ಪ್ರದೇಶಗಳಲ್ಲಿ ಬೇರೆಯವರ ಮನೆಗಳಲ್ಲಿ ಮನೆಗೆಲಸವನ್ನು (ಕಸ, ಮುಸುರೆ, ಬಟ್ಟೆ ತೊಳೆಯುವುದು ಇತ್ಯಾದಿ) ನಿರ್ವಹಿಸಿ ತರುವಾಯ ವೇಶ್ಯಾವೃತ್ತಿಯ ಚಟುವಟಿಕೆಯಲ್ಲಿ ನಿರತರಾಗುವರು. ಇನ್ನೂ ಕೆಲವರು ಹಂಪೆ, ಹುಲಿಗಿಯಂತಹ ಪ್ರವಾಸಿ ಕೇಂದ್ರಗಳಲ್ಲಿ ಹಡ್ಡಲಿಗಿ ಹಿಡಿದು ಭಿಕ್ಷಾಟನೆ ಮಾಡುತ್ತಲೇ ವೇಶ್ಯಾ ಚಟುವಟಿಕೆಯಲ್ಲಿ ತೊಡಗಿರುವುದು ಕಂಡುಬರುತ್ತಿದೆ.

### ೪.೩.೧೨ ಲೈಂಗಿಕ ಕಾರ್ಯಕರ್ತೆಯರ ವಿವಿಧ ವೃತ್ತಿಗಳ ವಿವರ

ಕೆಲವರು ಬೆಳಗ್ಗೆ ತಲೆಮೇಲೆ ತರಕಾರಿ ಹೊತ್ತು ವ್ಯಾಪಾರ ಮಾಡಿ, ಮಧ್ಯಾಹ್ನದ ನಂತರ ವೇಶ್ಯಾವೃತ್ತಿಯಲ್ಲಿ ತೊಡಗುವರು. ವೇಶ್ಯಾವೃತ್ತಿಯಲ್ಲಿ ಗಿರಾಕಿಗಳಿಲ್ಲದ ಸಮಯದಲ್ಲಿ ಬೀಡಿ ಕಟ್ಟುವುದು, ಖಾನಾವಳಿಯಲ್ಲಿ ರೊಟ್ಟಿ ಬಡಿಯುವುದು, ನೀರು ತರುವುದು ಇತ್ಯಾದಿ ಕೆಲಸಗಳನ್ನು ನಿರ್ವಹಿಸುವರು. ಆಂಧ್ರ ಮೂಲದ ಲೈಂಗಿಕ ಕಾರ್ಯಕರ್ತೆಯರು ಎಮ್ಮೆ ದನಗಳನ್ನು ಸಾಕಿ ಹಾಲು, ಮೊಸರಿನ ವ್ಯಾಪಾರ ಮಾಡುವುದು ಕಂಡುಬರುತ್ತದೆ.

**ಕೋಷ್ಟಕ: ೪.೩.೧೨: ಲೈಂಗಿಕ ಕಾರ್ಯಕರ್ತೆಯರ ವಿವಿಧ ವೃತ್ತಿಗಳ ವಿವರ**

| ಕ್ರಸ | ವಿವರ | ಬಳ್ಳಾರಿ ಜಿಲ್ಲೆ | ಕೊಪ್ಪಳ ಜಿಲ್ಲೆ | ಒಟ್ಟು |
|---|---|---|---|---|
| ೧ | ಪೂರ್ಣವಾಗಿ ವೇಶ್ಯಾವೃತ್ತಿ | ೩೫ | ೨೫ | ೬೦ |
| ೨ | ಧಾರ್ಮಿಕ ಭಿಕ್ಷಾಟನೆ | ೦೫ | ೦೭ | ೧೨ |
| ೩ | ಮನೆಗೆಲಸ | ೧೧ | ೧೧ | ೨೨ |

| | | | | |
|---|---|---|---|---|
| ೪ | ತರಕಾರಿ ವ್ಯಾಪಾರ | ೬ | ೦೩ | ೯ |
| ೫ | ಬೀಡಿ ಕಟ್ಟುವುದು | – | ೦೪ | ೪ |
| ೬ | ಕೃಷಿಕೂಲಿ | ೦೮ | ೦೬ | ೧೪ |
| ೭ | ಖಾನಾವಳಿ ಕೆಲಸ | ೬ | ೦೯ | ೧೫ |
| ೮ | ಪಶುಸಂಗೋಪನೆ | ೦೫ | ೦೫ | ೧೦ |
| ೯ | ಗೃಹಿಣಿ | ೨೦ | ೨೩ | ೪೩ |
| ೧೦ | ಇತರೆ | ೦೪ | ೦೭ | ೧೧ |
| | ಒಟ್ಟು | ೧೦೦ | ೧೦೦ | ೨೦೦ |

ಆಧಾರ: ಕ್ಷೇತ್ರಕಾರ್ಯ ಸಮೀಕ್ಷೆ

ಕೆಲ ಲೈಂಗಿಕ ಕಾರ್ಯಕರ್ತೆಯರು ವಾರಕ್ಕೊಮ್ಮೆ ಸಂತೆಯ ದಿನ ಇಲ್ಲವೆ ತಮಗೆ ಬಿಡುವು ಇದ್ದಾಗ ನಗರದಲ್ಲಿರುವ ವೇಶ್ಯಾವಾಟಿಕೆ ಅಡ್ಡೆಗಳಲ್ಲಿ ಬಂದು ವೇಶ್ಯಾವೃತ್ತಿಯಲ್ಲಿ ತೊಡಗುವವರೂ ಕಂಡುಬಂದಿದ್ದಾರೆ. ಅದೇ ರೀತಿ ಮನೆಯಲ್ಲಿ ಗೃಹಿಣಿಯಾಗಿ ಕುಟುಂಬ ಸಲಹುವ ಜವಾಬ್ದಾರಿಯನ್ನು ಹೊತ್ತ ಮಹಿಳೆಯರು ಕುಟುಂಬ ನಿರ್ವಹಣೆಗಾಗಿ ವಾರದಲ್ಲಿ ಕೆಲವೊಂದು ದಿನಗಳಲ್ಲಿ ನಗರ ಪ್ರದೇಶಗಳಿಗೆ ಹೋಗಿ ವೇಶ್ಯಾವೃತ್ತಿಯಲ್ಲಿ ತೊಡಗಿರುವದು ಕಂಡುಬಂದಿದೆ.

ಬೇರಾವುದೇ ವೃತ್ತಿಯಲ್ಲಿ ತೊಡಗದೆ ವೇಶ್ಯಾವೃತ್ತಿಯನ್ನೇ ಆಧರಿಸಿ ಇರುವವರು ಬಳ್ಳಾರಿ, ಕೊಪ್ಪಳ ಎರಡೂ ಜಿಲ್ಲೆಗಳಿಂದ ಒಟ್ಟು ಶೇಕಡ ೩೦ರಷ್ಟಿರುವರು. ಬಳ್ಳಾರಿಯಲ್ಲಿ ೧೭.೫ ಹಾಗೂ ಕೊಪ್ಪಳದಲ್ಲಿ ಶೇಕಡ ೧೨.೫ ಜನರಿರುವರು.

ಧಾರ್ಮಿಕ ಭಿಕ್ಷಾಟನೆಯಲ್ಲಿ ತೊಡಗಿಯೇ ವೇಶ್ಯಾವೃತ್ತಿಯನ್ನು ಮಾಡುವವರು ಶೇಕಡ ೬ ರಷ್ಟಿದ್ದರೆ ಜನರಿರುವರು. ಇದರಲ್ಲಿ ಬಳ್ಳಾರಿಯಲ್ಲಿ ಶೇಕಡ ೨.೫, ಕೊಪ್ಪಳದಲ್ಲಿ ೩.೫ ರಷ್ಟಿದ್ದಾರೆ. ಬೇರೆಯವರ ಮನೆಗಳಲ್ಲಿ ಕಸಮುಸುರೆ, ಬಟ್ಟೆ ತೊಳೆಯುವ ಇತ್ಯಾದಿ ಕೆಲಸ ಮಾಡುತ್ತಲೇ ವೇಶ್ಯಾವೃತ್ತಿಯಲ್ಲಿ ನಿರತರಾದವರು ಶೇಕಡ ೧೧ ಜನರಿರುವರು. ಇದರಲ್ಲಿ ಬಳ್ಳಾರಿಯಲ್ಲಿ ಶೇಕಡ ೫.೫ ಹಾಗೂ ಕೊಪ್ಪಳದಲ್ಲಿಯೂ ಶೇಕಡ ೫.೫ ಜನರಿರುವರು. ತಲೆಯಮೇಲೆ ಪುಟ್ಟಿಹೊತ್ತು ತರಕಾರಿ ವ್ಯಾಪಾರ ಮಾಡುತ್ತಲೇ ವೇಶ್ಯಾವೃತ್ತಿಯಲ್ಲಿ ತೊಡಗಿರುವವರು ಶೇಕಡ ೪.೫ ಜನರಿರುವರು. ಇದರಲ್ಲಿ ಬಳ್ಳಾರಿಯಲ್ಲಿ ಶೇಕಡ ೩ರಷ್ಟಿದ್ದರೆ ಕೊಪ್ಪಳದಲ್ಲಿ ಶೇಕಡ ೧.೫ರಷ್ಟಿರುವರು. ಬೀಡಿಕಟ್ಟುವ ಕಾಯಕದಲ್ಲಿ ನಿರತರಾಗಿರುವವರು ಶೇಕಡ ೨ರಷ್ಟಿರುವರು. ಕೊಪ್ಪಳದಲ್ಲಿ ಮಾತ್ರ ಈ ಕಾರ್ಯಕರ್ತೆಯರಿದ್ದಾರೆ.

ಬೆಳಗಿನ ಸಮಯದಲ್ಲಿ ಕೃಷಿಕೂಲಿ ಮಾಡಿ ನಂತರ ವೇಶ್ಯಾವೃತ್ತಿಯಲ್ಲಿ ನಿರತರಾಗುವವರು ಒಟ್ಟು ಶೇಕಡ ೭ರಷ್ಟಿರುವರು. ಬಳ್ಳಾರಿಯಲ್ಲಿ ಶೇಕಡ ೪, ಕೊಪ್ಪಳದಲ್ಲಿ ಶೇಕಡ ೩ರಷ್ಟಿದ್ದಾರೆ.

ಹೊಸಪೇಟೆ, ಗಂಗಾವತಿ, ಕೊಪ್ಪಳ ನಗರದ ಕೆಲವು ಖಾನಾವಳಿಗಳು ವೇಶ್ಯಾವೃತ್ತಿಯ ಅಡ್ಡೆಗಳೂ ಆಗಿರುವುದು ಕಂಡುಬರುತ್ತದೆ. ಮುಂಭಾಗದಲ್ಲಿ ಖಾನಾವಳಿ ನಡೆಯುತ್ತಿದ್ದರೆ ಹಿಂಭಾಗದಲ್ಲಿ ಲೈಂಗಿಕ ಚಟುವಟಿಕೆಯ ತಾಣವಾಗಿರುತ್ತವೆ. ಇಂತಹ ಕಡೆ ಖಾನಾವಳಿಯ ಕೆಲಸಗಳ ಜೊತೆ ಜೊತೆಗೆ ಲೈಂಗಿಕ ಕಾರ್ಯಕರ್ತೆಯರಾಗಿಯೂ ಕೆಲಸ ನಿರ್ವಹಿಸುತ್ತಿರುವರು. ಇಂಥವರು ಒಟ್ಟು ಶೇಕಡ ೭.೫ ರಷ್ಟಿದ್ದಾರೆ. ಇವರು ಬಳ್ಳಾರಿಯಲ್ಲಿ ಶೇಕಡ ೩ ರಷ್ಟಿದ್ದರೆ, ಕೊಪ್ಪಳದಲ್ಲಿ ೪.೫ ರಷ್ಟಿರುವರು. ಆಂಧ್ರದಿಂದ ವಲಸೆಬಂದು ಕ್ಯಾಂಪ್‌ಗಳಲ್ಲಿ ನೆಲೆಸಿದ ಕೆಲವು ಮಹಿಳೆಯರು ಎಮ್ಮೆ, ದನಗಳನ್ನು ಸಾಕಿ ಅದರ ಉತ್ಪನ್ನಗಳಾದ ಹಾಲು, ಮೊಸರು ಮಾರುವುದರೊಂದಿಗೆ ವೇಶ್ಯಾವೃತ್ತಿಯಲ್ಲಿ ತೊಡಗಿರುವುದನ್ನು ಗಮನಿಸಿದ್ದೇನೆ. ಇಂತಹ ಮಹಿಳೆಯರು ಒಟ್ಟು ಶೇಕಡ ೫ರಷ್ಟಿರುವರು. ಇವರು ಬಳ್ಳಾರಿಯಲ್ಲಿ ಶೇಕಡ ೨.೫ ಹಾಗೂ ಕೊಪ್ಪಳದಲ್ಲಿ ಶೇಕಡ ೨.೫ರಷ್ಟಿರುವರು. ಇನ್ನು ಮನೆಯಲ್ಲಿ ಗೃಹಿಣಿಯಾಗಿದ್ದು ಮನೆಯ ಖರ್ಚುವೆಚ್ಚಗಳನ್ನು ಪೂರೈಸಲು ವೇಶ್ಯಾವಾಟಿಕೆಯಲ್ಲಿ ತೊಡಗಿರುವರು. ಇವರು ಒಟ್ಟು ಶೇಕಡ ೨೧.೫ರಷ್ಟಿರುವರು. ಬಳ್ಳಾರಿಯಲ್ಲಿ ಶೇಕಡ ೧೦ ಹಾಗೂ ಕೊಪ್ಪಳದಲ್ಲಿ ಶೇಕಡ ೧೧.೫ರಷ್ಟಿರುವರು.

ವಿದ್ಯಾಭ್ಯಾಸ ಮಾಡುತ್ತಲೇ ತಮ್ಮ ಖರ್ಚುವೆಚ್ಚಗಳನ್ನು ಸರಿದೂಗಿಸಿಕೊಳ್ಳಲು ವೇಶ್ಯಾವೃತ್ತಿಯಲ್ಲಿ ತೊಡಗಿದ ಯುವತಿಯರು ಒಟ್ಟು ಶೇಕಡ ೩ರಷ್ಟಿರುವರು. ಇದರಲ್ಲಿ ಬಳ್ಳಾರಿಯಲ್ಲಿ ಶೇಕಡ ಶೇಕಡ ೧ ಹಾಗೂ ಕೊಪ್ಪಳ ಶೇಕಡ ೨ರಷ್ಟಿದೆ. ಅಂಗನವಾಡಿ, ಖಾಸಗಿ ಆಸ್ಪತ್ರೆಗಳಲ್ಲಿ ನರ್ಸ್ ಇತ್ಯಾದಿ ಇತರೆ ವೃತ್ತಿಗಳನ್ನು ಮಾಡುತ್ತ ವೇಶ್ಯಾವೃತ್ತಿಯಲ್ಲಿ ತೊಡಗಿದವರು ಶೇಕಡ ೨.೫. ಇದರಲ್ಲಿ ಶೇಕಡ ೧ ಬಳ್ಳಾರಿಯಲ್ಲಿಯೂ ಶೇಕಡ ೧.೫ ಕೊಪ್ಪಳ ಜಿಲ್ಲೆಗಳಲ್ಲಿಯೂ ಕಾಣುತ್ತೇವೆ.

ಬಹುತೇಕ ಲೈಂಗಿಕ ಕಾರ್ಯಕರ್ತೆಯರಾರು ಆರ್ಥಿಕವಾಗಿ ಬಲಿಷ್ಠರಾಗಿಲ್ಲ. ಸರಾಸರಿಯಾಗಿ ನೋಡಿದಾಗ ಬಡತನ ರೇಖೆಯ ಕೆಳಗಿರುವ ಲೈಂಗಿಕ ಕಾರ್ಯಕರ್ತೆಯರ ಪ್ರಮಾಣವೇ ಹೆಚ್ಚಿದೆ. ಇತರೆ ವೃತ್ತಿಗಳಲ್ಲಿ ತೊಡಗಿಯೂ ಲೈಂಗಿಕ ಕಾರ್ಯಕರ್ತೆಯರಾಗಿರುವವರು ಹೇಳಿಕೊಳ್ಳುವಷ್ಟು ಆರ್ಥಿಕ ಸಬಲತೆ ಹೊಂದದೇ ಇರುವುದರಿಂದಲೇ ಅವರು ಅನಿವಾರ್ಯವಾಗಿ ಜೀವನ ನಿರ್ವಹಣೆಗಾಗಿ ತಮಗಿಷ್ಟವಿಲ್ಲದಿದ್ದರೂ ವೇಶ್ಯಾವಾಟಿಕೆಯಂತಹ ಕಳಂಕಿತ ವೃತ್ತಿಯನ್ನು ಅನುಸರಿಸಿರುವುದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿತು. ಅಂಗನವಾಡಿ ಕಾರ್ಯಕರ್ತೆ, ಖಾಸಗಿ ನರ್ಸ್ ಇತ್ಯಾದಿ ಸಾರ್ವಜನಿಕ ವಲಯಗಳಲ್ಲಿ ಕಾರ್ಯನಿರ್ವಹಿಸುವವರು ಉತ್ತಮ ವೇತನವಿಲ್ಲದೆ ಜೀವನ ನಿರ್ವಹಣೆ ಮಾಡುವವರಾಗಿದ್ದಾರೆ. ಜೊತೆಗೆ ಮೇಲಾಧಿಕಾರಿಗಳ ದೈಹಿಕ ಆಮಿಷಗಳನ್ನು ಒಮ್ಮೆ ತೀರಿಸಬೇಕಾದ ಸಂದರ್ಭ ಬಂದು ತರುವಾಯ ದೇಹವನ್ನೇ ಬಂಡವಾಳವಾಗಿಸಿಕೊಂಡು ದುಡುಮೆಗೆ ದಾರಿಯನ್ನು ಕಂಡುಕೊಂಡವರಾಗಿರುವವರು ಕಂಡುಬಂದಿದ್ದಾರೆ. ಒಟ್ಟಾರೆಯಾಗಿ ಹೇಳುವುದಾದರೆ ಇಂದು ಮನುಷ್ಯನನ್ನು ಆಳುವುದು ಹಣವಾಗಿದೆ. ಹಣದ ಮುಂದೆ ಯಾವುದೇ ಜಾತಿ ಧರ್ಮಗಳ ಕಟ್ಟುಪಾಡುಗಳೂ ಅಡ್ಡಬಾರವು. ಹಣಗಳಿಕೆಯನ್ನೇ ಕೇಂದ್ರವಾಗಿಸಿಕೊಂಡು ವೇಶ್ಯಾವೃತ್ತಿಯಲ್ಲಿ

ತೊಡಗಿಕೊಂಡವರಾರೂ ಆ ವೃತ್ತಿಯನ್ನು ಅನುಸರಿಸಿ ಆರ್ಥಿಕವಾಗಿ ಸುಸ್ಥಿತಿಯಲ್ಲಿ ಇರುವರೆಂದು ಭಾವಿಸಲಾಗದು. ವೇಶ್ಯಾವೃತ್ತಿಯು ಲೈಂಗಿಕ ಕಾರ್ಯಕರ್ತೆಯರಿಗೆ ಆರ್ಥಿಕ ಸಬಲತೆಯನ್ನು ಪೂರ್ಣವಾಗಿ ನೀಡದೇ ಹೋದರೂ ಅವರ ತಾತ್ಕಾಲಿಕ ಸಂಕಷ್ಟಗಳನ್ನು ಪೂರೈಸುವಲ್ಲಿ ಪೂರ್ಣವಲ್ಲದಿದ್ದರೂ ಸ್ವಲ್ಪಮಟ್ಟಿಗಾದರೂ ಕಾರಣವಾಗಿದೆಯಂದಷ್ಟೇ ಹೇಳಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಲೈಂಗಿಕ ಕಾರ್ಯಕರ್ತೆಯರು ಸಾಮಾಜಿಕವಾಗಿ ಶೋಷಣೆಗೆ ಒಳಗಾಗಿದ್ದು ಅವರನ್ನು ಬಳಕೆ ಮಾಡಿಕೊಳ್ಳುವ ಸಮಾಜವೇ ಲೈಂಗಿಕ ಕಾರ್ಯಕರ್ತೆಯರ ಬದುಕಿನ ಎಡರುತೊಡರು, ಭಾವನೆಗಳನ್ನು ಅರ್ಥಮಾಡಿಕೊಳ್ಳದೇ ಕಳಂಕಿತರೆಂದೇ ಪರಿಗಣಿಸುತ್ತದೆ. ಬಡತನವನ್ನೇ ಹಾಸುಂಡು ಬದುಕುವ ಲೈಂಗಿಕ ಕಾರ್ಯಕರ್ತೆಯರು ಆರ್ಥಿಕವಾಗಿಯೂ ಸಬಲರಾಗಿರುವುದು ಕಂಡುಬರುವುದಿಲ್ಲ. ಕೆಲವೊಬ್ಬ ಲೈಂಗಿಕ ಕಾರ್ಯಕರ್ತೆಯರಿಗೆ ತುಂಡು ಭೂಮಿಗಳಿವೆಯಾದರೂ ಅವು ಕೃಷಿಗೆ ಯೋಗ್ಯವಾಗಿಲ್ಲದಂತಹ ತುಂಡುಭೂಮಿಗಳಾಗಿವೆ. ಇನ್ನು ಹೆಣ್ಣು ಎಂದು ತಿರಸ್ಕಾರದಿಂದ ಕಾಣುವ ಸಮಾಜದಲ್ಲಿ ಬಡತನ, ಶಿಕ್ಷಣದ ಕೊರತೆಗಳಿಂದಲೂ ಲೈಂಗಿಕ ಕಾರ್ಯಕರ್ತೆಯರು ಬಳಲುತ್ತಿರುವುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಯಿತು.

**ಕೊನೆ ಟಿಪ್ಪಣಿ**

೧ ಲೀಲಾಸಂಪಿಗೆ, ಬುಡಕಟ್ಟು ಮತ್ತು ಜನಪದ ಸಮುದಾಯಗಳಲ್ಲಿ ವೇಶ್ಯಾವಾಟಿಕೆಗಳು, ಪರಂಪರೆ ಮತ್ತು ಸಮಸ್ಯೆಗಳು(ಪಿಎಚ್‌ಡಿ ಮಹಾಪ್ರಬಂಧ), ೨೦೦೪, ಪುಟ – ೫೫

೨ ವೆಂಕಟೇಶ ಕೆ, ಅಂಬೇಡ್ಕರ್, ೨೦೧೦, ಪುಟ – ೯೪

೩ ನಿರಂಜನಾರಾಧ್ಯ, ಪ್ರಾಥಮಿಕ ಶಿಕ್ಷಣ, ೨೦೧೬, ಪುಟ – ೮೪

೪ ಚಂದ್ರಶೇಖರ ಟಿ ಆರ್, ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ, ೨೦೦೧, ಪುಟ – ೯೬

೫ ಅದೇ, ಪುಟ–೧೮

೬ ಲೀಲಾ ಸಂಪಿಗೆ, ಬುದ್ಧನಿಲ್ಲದ ಆಮ್ರಪಾಲಿ, ೨೦೧೪, ಪುಟ – ೨೩

೭ ಅಬ್ದುಲ್ ಅಜೀಜ್ (ಸಂ), ಮಾನವಾಭಿವೃದ್ಧಿ ವರದಿ, ೨೦೦೫, ಪುಟ – ೨೬೦

೮ ಅದೇ, ಪುಟ– ೨೬೧

೯ ಅದೇ, ಪುಟ– ೨೦೫

## ಅಧ್ಯಾಯ : ಐದು

# ವೇಶ್ಯಾವಾಟಿಕೆ ಮತ್ತು ರಾಜಕಾರಣ

ರಾಜಕಾರಣ ಇಂದು ಯಾವ ಕ್ಷೇತ್ರವನ್ನೂ ಬಿಡದೆ ಎಲ್ಲಾ ಕಡೆ ಮೂಗನ್ನು ತೂರಿಸಿ ತನ್ನ ಅಸ್ತಿತ್ವವನ್ನು ಪ್ರತಿಷ್ಠಾಪಿಸುವುದರ ಮೂಲಕ ಹೊಟ್ಟೆಪಾಡಿಗಾಗಿ ಮೈಮಾರಿ ಜೀವಿಸುವ ಮಹಿಳೆಯರ ಮೇಲೂ ತನ್ನ ಕಬಂಧಬಾಹುಗಳನ್ನು ಹರಿಬಿಟ್ಟಿದೆ. ಬಹುತೇಕ ವೇಶ್ಯಾವಾಟಿಕೆಗೆ ಮೂಲ ನೆಲೆ ರಾಜಕೀಯದಲ್ಲಿದೆಂಬುದಲ್ಲಿ ಚರಿತ್ರೆಯಿಂದ ತಿಳಿಯಬಹುದು. ಇತ್ತೀಚೆಗೆ ಕ್ಯಾಬಿನೆಟ್ ದರ್ಜೆಯ ಮಂತ್ರಿಣಿಯೊಬ್ಬಳಿಗೆ ಮಂತ್ರಿ ಪದವಿ ಹೇಗೆ ಸಿಕ್ಕಿತು ಎಂದು ಹೇಳಿ ವಿರೋಧ ಪಕ್ಷದ ನಾಯಕನೊಬ್ಬ ಕುಚೋದ್ಯ ಮಾಡಿದ್ದ. ಅದಕ್ಕೆ ಪ್ರತಿಯಾಗಿ ಪ್ರತ್ಯುತ್ತರವನ್ನೂ ಆ ಮಹಿಳಾ ಮಂತ್ರಿ ನೀಡಿದರು. ಆದರೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಂಡವಾಳಶಾಹಿಗೆ ಸಿಕ್ಕಷ್ಟೇ ಮಾನ್ಯತೆ ಪ್ರಭುತ್ವದಲ್ಲಿರುವವರ ಮೆಚ್ಚಿಸುವ ಕಾರ್ಯವೂ ಅಷ್ಟೇ ಮುಖ್ಯವೆಂಬುದು ತೆರೆದಿಟ್ಟ ಗೌಪ್ಯ. ಪ್ರಭುತ್ವದಲ್ಲಿರುವ ಪ್ರಭಾವಿ ವ್ಯಕ್ತಿಗಳಿಗೆ ಕೇವಲ ಲಂಚರೂಪದ ಹಣ ಸಂದಾಯ ಮಾತ್ರವಾಲ್ಲದೆ ಅದರೊಂದಿಗೆ ಮಧ್ಯ ಮಾನಿನಿಯರ ಸೇವೆಯೂ ಮುಖ್ಯವಾಗಿರುತ್ತದೆ. ರಾಜಕಾರಣಿಗಳ ಇದೇ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಕಳೆದ ದಶಕದಲ್ಲಿ ತೆಹಲ್ಕಾ ಪ್ರಕರಣವನ್ನು ಪತ್ರಿಕೋದ್ಯಮ ಹೊರಹಾಕಿದ್ದು ಜಗಜ್ಜಾಹೀರಾಯಿತು. "೨೦೦೧ರ ಮಾರ್ಚ್ ೧೩ರಂದು ಜಸ್ಟೀಸ್ ವೆಂಕಟಸ್ವಾಮಿ ಆಯೋಗದ ಮುಂದೆ ತೆಹಲ್ಕಾ ಡಾಟ್ ಕಾಮ್ ಸಿಡಿಸಿದ ಸುದ್ದಿ ಇಡೀ ರಾಜಕೀಯ ರಂಗವನ್ನೇ ತಲ್ಲಣಗೊಳಿಸಿತು."[೧] ಬ್ರಿಟನ್ ಮೂಲದ ಶಸ್ತ್ರ ತಯಾರಿಕಾ 'ವೆಸ್ಟ್ ಅಂಡ್ ಇಂಟರನ್ಯಾಷನಲ್' ಕಂಪನಿಯೊಂದಿಗಿನ ಒಪ್ಪಂದದಲ್ಲಿ ಭಾರತದ ಆಡಳಿತಾರೂಢ ಸರ್ಕಾರ ಮಾಡಿಕೊಂಡಿದ್ದ ಒಪ್ಪಂದ, ಅದು ಸರಬರಾಜು ಮಾಡಿದ ಶಸ್ತ್ರಾಸ್ತ್ರ, ಟ್ಯಾಂಕರ್‌ಗಳು ಇತ್ಯಾದಿ ಖರೀದಿಯಲ್ಲಿ ನಡೆದ ಅಕ್ರಮವನ್ನು ತೆಹಲ್ಕಾ ಡಾಟ್ ಕಾಂ ಹೊರಗೆಳೆಯಿತು. ಈ ಸಂಬಂಧ ಮಾಹಿತಿಯನ್ನು ಹೊರಗೆಳೆಯಲು ಬಳಸಿಕೊಂಡಿದ್ದು ಹಣದ ಆಮಿಷ ಹಾಗೂ ಮಧ್ಯ, ಲೈಂಗಿಕ ವೃತ್ತಿನಿರತ ಮಹಿಳೆಯರನ್ನೂ ಮಧ್ಯವರ್ತಿಯಾಗಿ ಬಳಸಿಕೊಂಡಿತು. ರಕ್ಷಣ ಇಲಾಖೆಯ

ಕೆಳಗಿನ ಅಧಿಕಾರಿಗಳಿಗೆ ಮದ್ಯವನ್ನೂ ಹಾಗೂ ಲೈಂಗಿಕ ಕಾರ್ಯಕರ್ತೆಯರ ದೈಹಿಕ ಸೇವೆಯನ್ನೂ ಒದಗಿಸುವ ಮೂಲಕ ಅವರ ಸಂಪರ್ಕವನ್ನು ಯಶಸ್ವಿಯಾಗಿ ಸಾಧಿಸಿತ್ತು. ಅಂದರೆ ಸರ್ಕಾರದ ಮಟ್ಟದಲ್ಲಿ ಗೌಪ್ಯವಾಗಿ ನಡೆದ ಒಪ್ಪಂದ ವ್ಯವಹಾರಗಳನ್ನು ಹೊರಹಾಕಲು ಹೆಣ್ಣುಮಕ್ಕಳ ದೈಹಿಕ ಸೇವೆಯ ಲಾಭವನ್ನು ಪಡೆಯುವಂತಾಯಿತು.

ಪೌರಾಣಿಕ ಕಥೆಗಳಲ್ಲಿಯೂ ಎದುರಾಳಿಯನ್ನು ನಾಶಗೊಳಿಸಲು ಹೆಣ್ಣನ್ನು ಬಳಸಿರುವುದಾಗಿ ತಿಳಿದುಬರುವುದು. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹರಿಶ್ಚಂದ್ರನ ವ್ರತಭಂಗ ಮಾಡಲು ವಿಶ್ವಾಮಿತ್ರನು ತನ್ನ ಮಾನಸಪುತ್ರಿಯರಾದ ಹೊಲತೆಯರನ್ನು ಹರಿಶ್ಚಂದ್ರನ ಮುಂದೆ ಹರಿಬಿಡುವ ಪ್ರಸಂಗವೊಂದು ಬರುತ್ತದೆ. ಅದೇರೀತಿಯಾಗಿ ಶತ್ರುಗಳ ನಾಶಕ್ಕೆ ವಿಷಕನ್ಯೆಯರನ್ನು ರಾಜವ್ಯವಸ್ಥೆ ಬಳಸುತ್ತಿತ್ತು ಎಂಬ ಕಥೆಗಳನ್ನು ಚರಿತ್ರೆಯ ಮೂಲಕ ತಿಳಿಯುವುದು. ಇಂತಹದ್ದೇ ಪ್ರಸಂಗವನ್ನು ತೊರವೆ ರಾಮಾಯಣದಲ್ಲಿ ನೋಡಬಹುದು. “ಯಾವುದೇ ಕೆಲಸವು ಪರಪುರುಷನಿಂದ ಆಗಬೇಕೆಂದಿದ್ದಾಗ ರಾಜನು ವೇಶ್ಯೆಯರನ್ನು ರಾಜಕೀಯ ಸೂತ್ರವಾಗಿ ಬಳಸಿಕೊಳ್ಳುವನು ಎಂದು ಕವಿ ನರಹರಿಯು ತಿಳಿಸುವನು”[೨] “ವೇಶ್ಯಾವಾಟಿಕೆಗೂ ರಾಜಕೀಯಕ್ಕೂ ನಿಕಟವಾದ ಸಂಬಂಧವಿದೆ”[೩] ಎಂಬುದು ಕೋಸಾಂಬಿಯವರ ಅಭಿಪ್ರಾಯವಾಗಿದೆ. ವೇಶ್ಯೆಯರಲ್ಲಿ ಹಲವಾರು ಹಂತಗಳಿದ್ದು ಅವುಗಳನ್ನು ಮಹಾನಿರ್ವಾಣ ತಂತ್ರದಲ್ಲಿ ರಾಜ್ಯವೇಶ್ಯೆ ನಗರಿವೇಶ್ಯೆ, ಗುಪ್ತವೇಶ್ಯೆ, ದೇವವೇಶ್ಯೆ, ಬ್ರಹ್ಮವೇಶ್ಯೆ ಎನ್ನುವ ವಿಭಾಗಗಳಾಗಿ ವಿಂಗಡಿಸಲಾಗಿದೆ.”[೪] ಇಲ್ಲಿ ರಾಜ್ಯವೇಶ್ಯೆ ಎಂಬುದು ರಾಜನ ಆಸ್ಥಾನದ ವೇಶ್ಯೆ, ನಗರಿವೇಶ್ಯೆ ಎಂಬುದು ನಾಗರೀಕರೊಂದಿಗೆ ವ್ಯವಹರಿಸುವ ವೇಶ್ಯೆ, ದೇವ ವೇಶ್ಯೆಯು ದೇವಸ್ಥಾನಗಳಲ್ಲಿದ್ದು ದೇವರ ಸೇವೆಯೊಂದಿಗೆ ವೇಶ್ಯಾವಾಟಿಕೆ ಮಾಡುವವಳು, ಬ್ರಹ್ಮ ವೇಶ್ಯೆಯು ಪವಿತ್ರ ಸ್ಥಳಗಳಲ್ಲಿದ್ದು ವೇಶ್ಯಾವಾಟಿಕೆಯಿಂದ ಬಂದ ಜನರನ್ನು ಸಂತೃಪ್ತಿಪಡಿಸುವ ಕಾರ್ಯ ಮಾಡುತ್ತಿದ್ದರು ಎಂದು ಹೇಳಲಾಗಿದೆ. ರಾಜವೇಶ್ಯೆಯು ರಾಜನಿಗೆ ಅವಶ್ಯವಾಗಿದ್ದಲ್ಲಿ ಅವನ ಸೇವೆಯನ್ನು ಮಾಡುವುದಲ್ಲದೆ ಅವನ ನಿರ್ದೇಶನದಂತೆ ರಾಜಕಾರ್ಯದಲ್ಲಿ ಅವಶ್ಯವಿದ್ದ ವ್ಯಕ್ತಿಗಳಿಗೂ ತನ್ನ ಸೇವೆಯನ್ನು ನೀಡಬೇಕಾಗಿದ್ದಿತು.

ಇತಿಹಾಸದುದ್ದಕ್ಕೂ ಹೆಣ್ಣು ರಾಜಕಾರ್ಯಗಳಲ್ಲಿ ತನ್ನ ಸೇವೆಯನ್ನು ಸಲ್ಲಿಸುತ್ತಿದ್ದಳು ಎಂಬುದಕ್ಕೆ ಹಲವು ನಿದರ್ಶನಗಳು ದೊರೆಯುತ್ತವೆ. ಎಲ್ಲಾ ಕಾಲಘಟ್ಟಗಳಲ್ಲಿಯೂ ರಾಜಕೀಯ ವ್ಯವಸ್ಥೆಯ ಒಂದು ಅಂಗವಾಗಿ ವೇಶ್ಯೆ ಇದ್ದೇ ಇರುವಳು. ವಿಶೇಷವಾಗಿ ಹಿಂದೆ ನಡೆಯುತ್ತಿದ್ದ ಯುದ್ಧ ಪ್ರಸಂಗಗಳಲ್ಲಿ ವೇಶ್ಯೆಯರು ಅವಶ್ಯವಾಗಿದ್ದರು. ಆಹಾರ, ಯುದ್ದ ಸಾಮಾಗ್ರಿ, ಆನೆ, ಒಂಟೆ, ಕುದುರೆಗಳಂತೆ ವೇಶ್ಯೆಯರನ್ನೂ ಯುದ್ಧ ತಂಡದೊಂದಿಗೆ ಕರೆದೊಯ್ಯುತ್ತಿದ್ದರು. ಇದಕ್ಕೆ ಉತ್ತಮ ಉದಾಹರಣೆ ಕೂಡ್ಲಿಗಿ, ಹೊಸಪೇಟೆ, ಕಮಲಾಪುರದ ನಾಯಕಸಾನಿಯರನ್ನು ನೋಡಬಹುದು. ಈ ಪ್ರದೇಶದ ಮಹಿಳೆಯರು ಯುದ್ಧದಲ್ಲಿ ತೊಡಗುವ ಸೈನಿಕರ ಕಾಮತೃಷೆಯನ್ನು ತೀರಿಸಲು ಬಳಕೆಗೊಳ್ಳುತ್ತಿದ್ದರು. ಕೂಡ್ಲಿಗಿಯು ಸೈನಿಕರ ತಂಗುವ ದಂಡು ಪ್ರದೇಶವಾಗಿತ್ತೆಂದು ಹೇಳಲಾಗುವುದು. ರಾಜರು ಪರರಾಜರಿಗೆ

ಉಡುಗೊರೆ ಸಲ್ಲಿಸುವಾಗ ಆ ಉಡುಗೊರೆಗಳಲ್ಲಿ ಇಂತಹ ವೇಶ್ಯಾಮಹಿಳೆಯರೂ ಇರುತ್ತಿದ್ದರಂತೆ. ಹಿಂದೆ ಈ ರಾಜ್ಯದ ಮುಖ್ಯಮಂತ್ರಿಯಾದವರೊಬ್ಬರು ಸಾರ್ವಜನಿಕವಾಗಿಯೇ ಮಾನಿನಿ, ಮದಿರೆ ನನ್ನ ಜೀವನದ ಭಾಗ ಎಂಬ ಹೇಳಿಕೆ ನೀಡಿದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಸಾಮಾನ್ಯವಾಗಿ "ಇಂದಿಗೂ ವಿಧಾನಸೌಧದಲ್ಲಿ ವಿಧಾನಸಭಾ ಕಲಾಪಗಳು ನಡೆಯುವಾಗ ಬೆಂಗಳೂರಿನ ಅದೆಷ್ಟೋ ವೇಶ್ಯಾಗೃಹಗಳು ಗಿಜಿಗುಡುತ್ತವೆ. ಅದೆಷ್ಟೋ ಹೆಣ್ಣುಗಳು ಮೊದಲೇ ಕಾಯ್ದಿರಿಸಿರುತ್ತಾರೆ. ಎನ್ನುವುದು ಮಂತ್ರಿ ಮಹೋದಯರು, ಶಾಸಕರು, ಅವರ ಚೇಲಾಗಳು, ಹುಡಿಮುಡಿ ರಾಜಕಾರಣಿಗಳು ಹೀಗೆ ಅದೆಷ್ಟು ಗರಿ ಗರಿಯಾದ ಖಾದಿಗಳಿಗೆ, ಕಾಟನ್‌ಗಳಿಗೆ ಈ ಬೆಲೆವೆಣ್ಣುಗಳು ಬೆವರಿಳಿಸಬೇಕಾಗುತ್ತದೆ ಎನ್ನುವ ಲೆಕ್ಕಾಚಾರ ನೋಡಿದರೆ ಹಿಂದಿನ ರಾಜ ಮಹಾರಾಜರ ನಡವಳಿಕೆ ಮತ್ತೆ ನೆನಪಿಗೆ ಬರುತ್ತದೆ"[೫]

ಇಡೀ ರಾಜ್ಯದಲ್ಲಿ ಗಣ್ಯಾತಿ ಗಣ್ಯರೆನಿಸಿಕೊಂಡವರು ಅಧಿಕಾರ, ಆಸ್ತಿಪಾಸ್ತಿ ಸಂಪಾದನೆ, ಇವತ್ತಿನ ರಿಯಲ್‌ಎಸ್ಟೇಟ್ ದಂಧೆ ಇತ್ಯಾದಿ ಚಟುವಟಿಕೆಗಳಂತೆಯೇ ವೇಶ್ಯಾಗೃಹಗಳು ಅದರಲ್ಲೂ ವೇಶ್ಯಾಗೃಹಗಳನ್ನಿರಿಸಿ ದಂಧೆ ನಡೆಸಿ ಜೇಬು ತುಂಬಿಕೊಳ್ಳುತ್ತಿರುವ ರಾಜಕಾರಣಿಗಳೂ ಸಿಗುತ್ತಾರೆ.

೧೯೧೩ರಷ್ಟು ಹಿಂದೆಯೇ ಎಡಪಂಥೀಯ ನಿಲುವುಳ್ಳ ಲೆನಿನ್ನರು ವೇಶ್ಯಾವೃತ್ತಿಯ ಕುರಿತು ಹೀಗೆ ಹೇಳಿದ್ದಾರೆ. "ಪುರಾತನ ಗುಲಾಮರ ಮಾಲೀಕರಂತೆ ಮತ್ತು ಮಧ್ಯಯುಗದ ಸಾಮಂತಶಾಹಿ ಪ್ರಭುಗಳಂತೆ ಎಲ್ಲಾ ದೇಶಗಳ ಬಂಡವಾಳಶಾಹಿಗಳು ತಮಗಾಗಿ ಬೆಲೆವೆಣ್ಣುಗಳನ್ನು ಪಡೆದುಕೊಳ್ಳಬಲ್ಲರು. ವೇಶ್ಯಾವಾಟಿಕೆಯ ಕುರಿತು ಎಷ್ಟೇ ಪ್ರಮಾಣದ ನೈತಿಕ ರೋಷಾವೇಶಗಳನ್ನು ತೋರಿದರೂ ನೂರರಲ್ಲಿ ತೊಂಭತ್ತೊಂಭತ್ತು ಭಾಗ ಸೋಗಿನವಾಗಿವೆ. ಅವು ಹೆಣ್ಣಿನ ದೇಹ ವಿಕ್ರಯದ ವಿರುದ್ಧ ಏನೂ ಮಾಡಲಾರವು. ಅಸಮಾನತೆಯ ಕೂಲಿ ಹಾಗೂ ಗುಲಾಮಗಿರಿ ವ್ಯವಸ್ಥೆ ಇರುವವರೆಗೂ ವೇಶ್ಯಾವೃತ್ತಿಯು ಅನಿವಾರ್ಯವೆಂಬಂತೆ ನಿರಂತರವಾಗಿ ಇರುವುದು. ಮಾನವ ಸಮಾಜದ ಇತಿಹಾಸದುದ್ದಕ್ಕೂ ಎಲ್ಲಾ ದಮನಿತ ವರ್ಗಗಳೂ ಯಾವತ್ತೂ ತಮ್ಮ ಪೀಡಕರಿಗೆ ಮೊದಲು ತಮ್ಮ ಕೂಲಿರಹಿತ ಶ್ರಮವನ್ನು, ಎರಡನೆಯದಾಗಿ ತಮ್ಮ ಮಹಿಳೆಯರನ್ನು ಬಿಟ್ಟುಕೊಡುವ ಬಲತ್ಕಾರಗಳಿಗೆ ಇಡಾಗುತ್ತಲೇ ಇರುವವರು."[೬] ಇಲ್ಲಿ ಗಮನಿಸಬೇಕಾಗಿರುವುದೇನೆಂದರೆ ಸಾಮಂತಶಾಹಿ ವ್ಯವಸ್ಥೆ ಹಾಗೂ ಬಂಡವಾಳವಾದಗಳು ಒಂದೇ ರೀತಿಯವು. ಒಂದೇ ನಾಣ್ಯದ ಎರಡು ಮುಖಗಳೆಂದು ಕರೆಯಬಹುದು. ಸಾಮಂತಶಾಹಿ ಬಂಡವಾಳಶಾಹಿ ವ್ಯವಸ್ಥೆಯಲ್ಲಾಗಲಿ ಶೋಷಣೆ ಮೇಲ್ನೋಟಕ್ಕೆ ಬದಲಾವಣೆಯಾಗಿ ಕಂಡುಬಂದರೂ ಸಹ ಅದು ಬೇರೆ ರೂಪದಲ್ಲಿ ಅಸ್ತಿತ್ವದಲ್ಲಿದೆ.

ವೇಶ್ಯಾವೃತ್ತಿಯಲ್ಲಿ ತೊಡಗಿದ ಮಹಿಳೆಯರ ಕುರಿತು ಎಡಪಂಥ ಏನೇ ಹೇಳಿಕೆಗಳನ್ನು ನೀಡಿದರೂ ಸಹ ಆ ವ್ಯವಸ್ಥೆಯನ್ನು ನಿರ್ಮೂಲನೆ ಮಾಡಲು ಸಾಧ್ಯವಾಗಲಿಲ್ಲ. ಹೆಣ್ಣಿನ ವಿಚಾರದಲ್ಲಿ ಬಲಪಂಥೀಯ, ಎಡಪಂಥೀಯ ಎಂದು ಕರೆದುಕೊಳ್ಳುವವರಾರೂ ಏನೂ ಮಾಡದೇ ಹೋದರು. ಪ್ರಾಯಶಃ ಪುರುಷಪ್ರಧಾನ ಈ ವ್ಯವಸ್ಥೆಯಲ್ಲಿ ಹೆಣ್ಣಿನ ಬದುಕು ಬವಣೆಗಳು ನಗಣ್ಯವಾಗಿಯೇ ಉಳಿದವೆಂಬುದನ್ನು ಗುರುತಿಸಬಹುದು.

ದೇಶದ ಪ್ರಗತಿಪರ ನಿಲುವುಗಳಿಗೆ ಕಾರಣರಾದ ಸಹಗಮನ ಪದ್ಧತಿಯನ್ನು ತೀವ್ರವಾಗಿ ವಿರೋಧಿಸಿ, ವಿಧವಾ ವಿವಾಹದ ಪರವಾದ ಸ್ತ್ರೀಪರ ನಿಲುವನ್ನು ಹೊಂದಿದ್ದ ರಾಜರಾಮ ಮೋಹನರಾಯರಾಗಿ, ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟವರೂ, ಭಾರತೀಯ ಮನಸ್ಸುಗಳಲ್ಲಿ ನಿರಂತರವಾಗಿ ನೆಲೆನಿಂತಿರುವ ಗ್ರಾಮ ಸ್ವರಾಜ್ಯದ ಕನಸನ್ನು ಕಂಡಿದ್ದ ಗಾಂಧಿಯವರಾಗಲಿ ವೇಶ್ಯಾವೃತ್ತಿ ಬಗ್ಗೆ ಮೌನವಹಿಸಿರುವುದು ಆಶ್ಚರ್ಯವಾಗುತ್ತದೆ. ಶಿವರಾಮ ಕಾರಂತರು ಗಾಂಧಿವಾದದ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದವರು. ಅವರೊಮ್ಮೆ ತಮ್ಮ ದಕ್ಷಿಣ ಕನ್ನಡ ಪರಿಸರದ ಬಸರೂರಿನಲ್ಲಿ ನಡೆಯುತ್ತಿದ್ದ ಅಮಾನವೀಯವೆಂಬ ವೇಶ್ಯಾವಾಟಿಕೆಯ ಕುರಿತು, ಅಲ್ಲಿ ಎಷ್ಟೋ ಅಮಾಯಕ ಮಹಿಳೆಯರು ವೇಶ್ಯಾವಾಟಿಕೆಯ ಸುಳಿಗೆ ಸಿಲುಕಿರುವುದಾಗಿಯೂ ಅವರನ್ನು ಈ ವ್ಯವಸ್ಥೆಯಿಂದ ಪಾರುಮಾಡುವ ಪರ್ಯಾಯ ಮಾರ್ಗಗಳು ಯಾವುವು ಎಂದು ಕೇಳಿ ಮಹಾತ್ಮಾ ಗಾಂಧಿಯವರಿಗೆ ಪತ್ರವೊಂದನ್ನು ಬರೆಯುತ್ತಾರಂತೆ. ಅದಕ್ಕೆ ಪ್ರತ್ಯುತ್ತರವಾಗಿ ಗಾಂಧಿಯವರು ಆ ಮಹಿಳೆಯರು ಸನ್ಯಾಸ ಸ್ವೀಕರಿಸುವುದೇ ಪರ್ಯಾಯ ಮಾರ್ಗವೆಂದು ಸೂಚಿಸಿದರು ಎಂದು ಕಾರಂತರು ತಮ್ಮ ಹುಚ್ಚುಮನಸ್ಸಿನ ಹತ್ತು ಮುಖಗಳು ಆತ್ಮಚರಿತ್ರೆಯಲ್ಲಿ ವಿವರಿಸಿದ್ದಾರೆ. ಆ ತರುವಾಯ ಗಾಂಧಿಯವರ ಈ ನಿಲುವು ಸರಿಯೆ? ಎಲ್ಲಾ ಸಾಮಾನ್ಯ ಹದಿಹರೆಯದ ಮಹಿಳೆಯರು ಸನ್ಯಾಸ ಸ್ವೀಕರಿಸಿ ಜೀವನ ಸಾಗಿಸಲು ಸಾಧ್ಯವೆ ಎಂದು ತಮಗೆ ತಾವೇ ಪ್ರಶ್ನಿಸಿಕೊಂಡು ತರುವಾಯ ಬಸರೂರಿನ ಒಂದಿಬ್ಬರು ವೇಶ್ಯಾವೃತ್ತಿಯಲ್ಲಿ ನಿರತವಾದ ಯುವತಿಯರಿಗೆ ತಾವೇ ಗಂಡನ್ನು ಹುಡುಕಿ ಅವರ ಮನವೊಲಿಸಿ ಮದುವೆಯನ್ನೂ ಮಾಡಿಸಿರುವುದಾಗಿ ದಾಖಲಿಸಿರುವರು.

ರಾಜಕೀಯವಾಗಿ ಕೇವಲ ದಾಳಗಳಾಗಿ ಬಳಕೆಗೊಳ್ಳುವ ಲೈಂಗಿಕ ಕಾರ್ಯಕರ್ತೆಯರನ್ನು ರಾಜಕೀಯ ನಾಯಕರು ತಾವು ಗುರಿ ತಲುಪಿದ ತರುವಾಯ ಮರೆತು ಬಿಡುತ್ತಾರೆ. ಆದರೆ ಪ್ರತಿ ರಾಜಕೀಯ ವ್ಯವಸ್ಥೆಯನ್ನು ಗಟ್ಟಿಯಾಗಿ ನಿಲ್ಲಿಸುವ, ಅದನ್ನು ಅಲುಗಾಡಿಸುವ ತಂತ್ರಗಾರಿಕೆ ಮಾತ್ರ ವೇಶ್ಯಾವೃತ್ತಿಗಿದೆ.

**ಕೊನೆ ಟಿಪ್ಪಣಿ**


೧. ಲೀಲಾ ಸಂಪಿಗೆ, ಬುದ್ಧನಿಲ್ಲದ ಆಮ್ರಪಾಲಿ, ೨೦೧೫, ಪುಟ- ೭೪

೨. ರಾಮಚಂದ್ರನ್ ಬಿ, ಸ್ತ್ರೀ ಮತ್ತು ರಾಜಕಾರಣ, ೨೦೦೭, ಪುಟ ೧೬-೧೭

೩. ಕೋಸಂಬಿ ಡಿ.ಡಿ, ಭಾರತದ ಪ್ರಾಚೀನ ಚರಿತ್ರೆ, ೧೯೭೭, ಪುಟ- ೨೮

೪. ಚಂದ್ರಮೋಹನ್, ಬೆತ್ತಲೆ ಸೇವೆ ಮತ್ತು ಪುರುಷ ದೌರ್ಜನ್ಯ, ೧೯೭೩, ಪುಟ- ೧೩

೫. ಲೀಲಾ ಸಂಪಿಗೆ, ಬುದ್ಧನಿಲ್ಲದ ಆಮ್ರಪಾಲಿ, ೨೦೧೫, ಪುಟ - ೭೬

೬. ಲೆನಿನ್ ವಿ.ಐ, ಲೆನಿನ್‌ರ ಕೆಲವು ಲೇಖನಗಳು, ೧೯೯೪, ಪುಟ - ೧೩೨

# ಅಧ್ಯಾಯ : ಆರು

# ವೇಶ್ಯಾವಾಟಿಕೆ ಮತ್ತು ಆರೋಗ್ಯ

ವೇಶ್ಯಾವಾಟಿಕೆ ಅನಾರೋಗ್ಯಕ್ಕೆ ಮೂಲವೆಂದು ಹೇಳಬಹುದು. ಪ್ರತಿದಿನವೂ ಹತ್ತಾರು ಅಪರಿಚಿತ ಗಿರಾಕಿಗಳಿಗೆ ಮೈಯೊಡ್ಡುವ ಲೈಂಗಿಕ ಕಾರ್ಯಕರ್ತೆಯರು ತನ್ನೊಂದಿಗೆ ಮಲಗಲು ಬಂದವನು ತನ್ನೊಂದಿಗೆ ಯಾವ ರೋಗವನ್ನು ಹೊತ್ತು ತಂದಿರುವನು ಎಂದು ತಪಾಸಣೆ ಮಾಡುತ್ತಾ ಕೂಡಲಾಗುವುದಿಲ್ಲ. ಅಷ್ಟಕ್ಕೂ ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರಿಗೆ ಆಯ್ಕೆಗಳಿರುವುದಿಲ್ಲ. ಬಹುತೇಕ ಲೈಂಗಿಕ ಕಾರ್ಯಕರ್ತೆಯರಲ್ಲಿ ಅವಿದ್ಯಾವಂತರು ಇಲ್ಲವೆ ಅರ್ಧಕ್ಕೆ ಓದನ್ನು ಬಿಟ್ಟವರೇ ಹೆಚ್ಚು.

ಎಷ್ಟೋಬಾರಿ ಅಡ್ಡೆಗಳಲ್ಲಿ ಗಂಡನ್ನು ಆಯ್ಕೆಮಾಡುವ ಸ್ವಾತಂತ್ರ್ಯವೂ ಮಹಿಳೆಯರಿಗಿರುವುದಿಲ್ಲ. ಬಂದ ಗಿರಾಕಿಗಳಿಗೆ ತೃಪ್ತಿಪಡಿಸುವುದಷ್ಟೇ ಅವರ ಕರ್ತವ್ಯವಾಗಿರುತ್ತದೆ. ತಾನು ಅವನೊಂದಿಗೆ ಮಲಗಲಾರೆನು, ಇವನೊಂದಿಗೆ ಮಲಗಲಾರೆನು ಎಂದೇನಾದರೂ ಹೇಳಿದರೆ ಅಡ್ಡೆಯ ಮಾಲೀಕರಿಂದ ಒದೆ ಬೀಳುತ್ತವೆ. ಇಲ್ಲವೇ ಅಡ್ಡೆಯಿಂದಲೇ ದೂರತಳ್ಳಲ್ಪಟ್ಟು ಒಂದೊತ್ತಿನ ಊಟಕ್ಕೂ ಸಂಚಕಾರ ತಂದುಕೊಳ್ಳಬೇಕಾಗುತ್ತದೆ. ಹೀಗಾಗಿ ಪಾಲಿಗೆ ಬಂದಿದ್ದು ಪಂಚಾಮೃತವೆಂದು ಕಣ್ಣುಮುಚ್ಚಿ ಸ್ವೀಕರಿಸುವುದಷ್ಟೇ ವೃತ್ತಿಧರ್ಮವಾಗಿ ಉಳಿದುಬಿಡುವುದು. ದೈಹಿಕವಾಗಿ ಶುಚಿತ್ವವನ್ನು ಕಾಪಾಡದವನು, ಕುಷ್ಠರೋಗಿ, ಲೈಂಗಿಕ ವ್ಯಾಧಿಗಳಿಂದ ಬಳಲುವವರೂ ಗಿರಾಕಿಗಳಾಗಿ ಬರುವುದುಂಟು. ಹತ್ತಿರ ಹೋಗುತ್ತಲೇ ಅಸಹ್ಯವಾಗುವ ವ್ಯಕ್ತಿಗಳಿಂದ ದೇಹ ಹಂಚಿಕೊಳ್ಳಬೇಕೆಂಬುದು ಎಂತಹ ಶಿಕ್ಷೆಯೆಂಬುದು ವೇಶ್ಯಾವೃತ್ತಿಯಲ್ಲಿ ನಿರತವಾದ ಮಹಿಳೆಯರನ್ನೇ ಕೇಳಿತಿಳಿದುಕೊಳ್ಳಬೇಕು. ಪ್ರಾರಂಭದಲ್ಲಿ ವೃತ್ತಿಗೆ ಇಳಿದಾಗ ದೇಹವೆಲ್ಲಾ ಹುಣ್ಣುಗಳಿಂದ ತುಂಬಿ ಗಬ್ಬುವಾಸನೆ ಬರುತ್ತಿದ್ದ ಕುಷ್ಠರೋಗಿಯೊಬ್ಬನಿಗೆ ದೇಹ ಹಂಚುವ ಸಂಕಷ್ಟವೊಮ್ಮೆ ಗಂಗಾವತಿಯ ವೃತ್ತಿನಿರತಳಿಗೆ ಒದಗಿತಂತೆ. ಅವನೊಂದಿಗೆ ಮಲಗಲಾರೆನೆಂದರೆ ಅಡ್ಡೆ ಮಾಲೀಕಳು ಉರಿಗಣ್ಣಾಗುವಳು, ಮಲಗಿದರೆ ಅವನ ಕೀವುಭರಿತ

ದೇಹದೊಂದಿಗೆ ನರಕ ಅನುಭವಿಸಬೇಕು ಎನ್ನುವ ಸಂಕಟದಲ್ಲಿ ಎರಡನೇ ಆಯ್ಕೆಯೇ ಉಳಿಯಿತಂತೆ. ಆ ವ್ಯಕ್ತಿಯೊಂದಿಗೆ ಮಲಗಿದ ತರುವಾಯ ಒಂದು ವಾರವಾದರೂ ತನಗೆ ಊಟ ಸೇರದೆ ಹೋಯಿತಂತೆ. ಕುಡಿತದ ಅಭ್ಯಾಸ ಇರದ ಆ ಮಹಿಳೆ ಕೊನೆಗೆ ಹಿರಿಯ ವೃತ್ತಿನಿರತರ ಒತ್ತಾಯದ ಮೇರೆಗೆ ಸ್ವಲ್ಪ ಕುಡಿದು ಹಳೆಯದನ್ನೆಲ್ಲಾ ಮರೆಯಲು ಪ್ರಯತ್ನಿಸಿದಳಂತೆ.

ಇಂತಹ ಎಷ್ಟೋ ಘಟನೆಗಳು ವೇಶ್ಯಾವೃತ್ತಿಯಲ್ಲಿ ತೊಡಗಿದ ಮಹಿಳೆಯರ ಬದುಕಿನಲ್ಲಿ ಕಾಣಬಹುದು. ಲೈಂಗಿಕ ವ್ಯಾಧಿಗಳಿಂದ ಮೈಯೆಲ್ಲಾ ಬಿಲ್ಲೆಗಳುಂಟಾದವರು, ಪುರುಷಾಂಗದ ಮೇಲೆ ಕಜ್ಜಿಯ ಗುಳ್ಳೆಗಳೆದ್ದವರು ಎಷ್ಟೆಲ್ಲಾ ನಿಮೋನಿಯ ರೋಗಿಗಳು ಲೈಂಗಿಕ ಆಪೇಕ್ಷೆಯಿಂದ ಬರುವರು. ಅವರಿಗೆಲ್ಲಾ ದೇಹವೊಡ್ಡಬೇಕು. ಬೇಡವೆಂದು ನಿರಾಕರಿಸಿದರೆ ಹೊಟ್ಟೆಯ ಹಸಿವಿನ ಪ್ರಶ್ನೆ.

ಸಾಮಾನ್ಯವಾಗಿ ವೇಶ್ಯಾವಾಟಿಕೆ ವೃತ್ತಿಯಲ್ಲಿರುವ ಮಹಿಳೆಯರು, ಅದರಲ್ಲೂ ಅಪ್ರಾಪ್ತ ವಯಸ್ಸಿನ ಮಹಿಳೆಯರು ರೋಗಿಷ್ಟ, ಕಾಮುಕ ಪುರುಷರಿಗೆ ಬಲಿಯಾಗುವುದೇ ಹೆಚ್ಚು. ನಮ್ಮಲ್ಲಿ ವಿಚಿತ್ರವಾದ ನಂಬಿಕೆ ಇದೆ. ಲೈಂಗಿಕ ರೋಗ ನಿವಾರಣೆಯಾಗಬೇಕೆಂದರೆ ಚಿಕ್ಕಪ್ರಾಯದ ಹೆಣ್ಣುಗಳ ಸಂಪರ್ಕ ಮಾಡಬೇಕು. ಆ ರೀತಿ ಮಾಡುವುದರಿಂದ ರೋಗ ನಿವಾರಣೆಯಾಗುತ್ತದೆ ಇಲ್ಲವೇ ಯಾವುದಾದರೂ ಪ್ರಾಣಿಯೊಂದಿಗೆ ಲೈಂಗಿಕ ಸಂಪರ್ಕ ಮಾಡುವುದರಿಂದ ಲೈಂಗಿಕ ರೋಗ ನಿವಾರಣೆಯಾಗುತ್ತದೆ ಎಂಬ ನಂಬಿಕೆ ಇದೆ.

ಈ ನಂಬಿಕೆಯಿಂದ ತಾವೆಷ್ಟು ಜನ ಪ್ರಾಣಿಗಳಿಗೆ ತಮ್ಮ ರೋಗಗಳನ್ನು ಹಂಚುತ್ತೇವೆ ಎನ್ನುವ ಪ್ರಜ್ಞೆ ಆ ವ್ಯಕ್ತಿಗೆ ಇರುವುದಿಲ್ಲ. ಇಂದು ನಗರ ಪ್ರದೇಶಗಳಲ್ಲಿ ಚರ್ಮರೋಗ ಹಾಗೂ ಲೈಂಗಿಕ ರೋಗ ತಜ್ಞರು ಸಾಕಷ್ಟು ಜನರಿರುವವರು. ಆದರೆ ಡಾಕ್ಟರ ಬಳಿಹೋಗಿ ತಪಾಸಣೆ ಮಾಡಿಸಿಕೊಳ್ಳಲು ನಾಚುವ ವ್ಯಕ್ತಿಗಳೇ ಹೆಚ್ಚು. ಸಾಮಾನ್ಯವಾಗಿ ಲೈಂಗಿಕ ಖಾಯಿಲೆಗಳು ೨೦ರಷ್ಟಿವೆಯೆಂದು ತಜ್ಞರು ತಿಳಿಸುವರು. ಅವುಗಳಲ್ಲಿಯೇ ಮುಖ್ಯವಾದ ಲೈಂಗಿಕ ಖಾಯಿಲೆಗಳು ಈ ಕೆಳಗಿನಂತಿವೆ.

**ಹರ್ಪಿಸಸ್**

**ಗನೋರಿಯಾ**

**ಸಿಫಿಲಿಸ್**

**ಎಚ್.ಐ.ವಿ/ಏಡ್ಸ್ ಇತ್ಯಾದಿ.**

**ಹರ್ಪಿಸಸ್:** ಇದೊಂದು ಸರ್ಪಸುತ್ತು ಸಂಬಂಧಿ ಖಾಯಿಲೆ. ಲೈಂಗಿಕ ಸಂಪರ್ಕದಿಂದ ಬರುವ ಈ ಖಾಯಿಲೆಯು ಪುರುಷನಿಗಾದರೆ ಪುರುಷಾಂಗದ ಮೇಲೆ ಕೀವಿನಿಂದ ಕೂಡಿದ ಚಿಕ್ಕ ಚಿಕ್ಕ ಗುಳ್ಳೆಗಳಾಗುವವು. ಗುಳ್ಳೆಗಳು ಒಡೆದು ಅಸಹ್ಯಕರ ವಾಸನೆ ಬರುವುದರೊಂದಿಗೆ ಹೊಸಗುಳ್ಳೆಗಳು ಏಳುವವು. ಸರಿಯಾದ ಚಿಕಿತ್ಸೆ ಮಾಡದೇ ಹೋದರೆ ತೊಡೆಸಂಧಿ ಇತ್ಯಾದಿ ಕಡೆಯೂ ಗುಳ್ಳೆಗಳು ಎದ್ದು ದೇಹಕ್ಕೆ ಹಿಂಸೆಯಾಗುವುದು. ವಿಪರೀತವಾದ ತುರುಕೆಯಿಂದ ಕೂಡಿದ ಹರ್ಪಿಸಸ್ ಬೇಗನೆ

ಗುಣಹೊಂದುವ ಖಾಯಿಲೆಯಲ್ಲ. ದೀರ್ಘಾವಧಿಯವರೆಗೆ ಕಾಡಿ ತನ್ನಿಂದ ತಾನೆ ಮಾಯವಾಗುವ ಖಾಯಿಲೆ ಇದು. ಮಹಿಳೆಯರಿಗಾದರೆ ಅವರ ಗುಪ್ತಾಂಗದೊಳಗೆಲ್ಲಾ ಗುಳ್ಳೆಗಳೆದ್ದು ಕೀವು ಸೋರಿಸುತ್ತಾ ತುರುಕೆ ಉಂಟುಮಾಡುವುದು. ಇದಕ್ಕೆ ಸೂಕ್ತ ಚಿಕಿತ್ಸೆ ಮಾಡದೇ ಹೋದರೆ ಗುಪ್ತಾಂಗದ ಸುತ್ತ ದೇಹದ ಹೊರಗೆ ಹಾಗೂ ಒಳಗೆ ವ್ಯಾಪಿಸುತ್ತಾ ಗರ್ಭಾಶಯದವರೆಗೂ ಹಬ್ಬಿ ಗರ್ಭಾಶಯದ ಸೋಂಕಿಗೂ ಕಾರಣವಾಗುತ್ತದೆ. ಪುರುಷರಿಗಿಂತ ಮಹಿಳೆಯರಿಗೆ ಹೆಚ್ಚು ಅಪಾಯಕಾರಿಯಾದ ಈ ಖಾಯಿಲೆಯು ಹುಟ್ಟುವ ಮಗುವಿಗೂ ಬರುವ ಸಾಧ್ಯತೆ ಉಂಟು. ಹರ್ಪಿಸಸ್ ಖಾಯಿಲೆ ಅನುಭವಿಸುವ ಮಹಿಳೆ ಗರ್ಭವತಿಯಾಗಿ ಮಗುವಿಗೆ ಜನ್ಮ ನೀಡಿದರೆ ಆ ಮಗು ಸಹ ಈ ಖಾಯಿಲೆಯಿಂದ ಬಳಲುವ ಸಾಧ್ಯತೆಗಳು ಹೆಚ್ಚು. ಜೀವ ತೆಗೆಯುವಷ್ಟು ಅಪಾಯಕಾರಿ ಖಾಯಿಲೆ ಇದಾಗಿರದಿದ್ದರೂ ದೀರ್ಘಾವಧಿ ಕಾಡುವ ಖಾಯಿಲೆಯೆಂಬುದು ಮಾತ್ರ ಸತ್ಯ.

**ಗನೋರಿಯಾ:** ಗನೋರಿಯಾ ಖಾಯಿಲೆ ಲೈಂಗಿಕ ಸಂಪರ್ಕದಿಂದ ಉಂಟಾಗುವುದು. ರೋಗ ಪ್ರಾರಂಭಗೊಂಡ ಮೊದಮೊದಲು ಏನೂ ಅನಿಸದ ಈ ಖಾಯಿಲೆಯು ಎರಡನೇ ಹಂತಕ್ಕೆ ತಲುಪಿದಾಗ ಹೆಚ್ಚು ತೊಂದರೆ ಕೊಡುವುದು. ಗುಪ್ತಾಂಗಗಳ ಮೇಲೆ ಚಿಕ್ಕ ಚಿಕ್ಕ ಗಡ್ಡೆಯ ರೂಪದ ಹುಣ್ಣುಗಳಾಗುವವು. ಗನೋರಿಯ ರೋಗ ಕೆಲವೊಮ್ಮೆ ಮಾರಣಾಂತಿಕ ಖಾಯಿಲೆಯಾಗಿಯೂ ಕಾಡುವುದುಂಟು.

**ಸಿಫಿಲಿಸ್:** ಸಿಫಿಲಿಸ್ ಗನೋರಿಯಾಕ್ಕಿಂತ ಅಪಾಯಕಾರಿ ಖಾಯಿಲೆಯಾಗಿದೆ. ಗುಪ್ತಾಂಗಗಳ ಮೇಲೆ ಬಿಲ್ಲೆಯಾಕಾರದ ದದ್ದುಗಳು ಉಂಟಾಗಿ ವಿಪರೀತ ತುರುಕೆ ಉಂಟು ಮಾಡುವುದು. ತರುವಾಯ ನಿಧಾನಕ್ಕೆ ಇಡೀ ದೇಹದ ಮೇಲೆ ದುಂಡನೆಯ ದದ್ದುಗಳು ಎದ್ದು ವಿಪರೀತ ತುರುಕೆಗೆ ಕಾರಣವಾಗುವುದು. ದೇಹದ ಹೊರಭಾಗಕ್ಕಷ್ಟೇ ಅಲ್ಲದೆ ದೇಹದ ಒಳಗೂ ಈ ಖಾಯಿಲೆ ತನ್ನ ಪ್ರಭಾವ ಬೀರುವುದು. ದೇಹದ ಒಳಗೆ ರಕ್ತದೊಂದಿಗೆ ನರಗಳ ಮೂಲಕ ಹರಿದಾಡುವ ರೋಗಾಣುಗಳು ಮೆದುಳಿಗೂ ಹಬ್ಬಿ ಹುಚ್ಚನ್ನು ತರುವ ಸಾಧ್ಯತೆ ಇದೆ. ಲೈಂಗಿಕ ಖಾಯಿಲೆಯಲ್ಲಿ ಏಡ್ಸ್ ಬರುವ ಪೂರ್ವದಲ್ಲಿ ಈ ರೋಗವೇ ಲೈಂಗಿಕ ಖಾಯಿಲೆಯ ಹಿರಿಯಣ್ಣ ಎಂದೆನಿಸಿಕೊಂಡಿತ್ತು. ಏಡ್ಸ್ ಪ್ರವೇಶವಾದ ತರುವಾಯ ಇದಕ್ಕೆ ಎರಡನೇ ಸ್ಥಾನ ಲಭಿಸಿದೆ.

**ಏಡ್ಸ್:** ಭಾರತದ ಹೆಚ್.ಐ.ವಿ ಸೋಂಕಿತ ಪ್ರಮುಖ ಐದು ರಾಜ್ಯಗಳಲ್ಲಿ ಕರ್ನಾಟಕವು ಒಂದು. ಎಚ್ ಐ ವಿ ಸಾಂಕ್ರಾಮಿಕವಾಗಿ ತೀವ್ರವಾಗಿ ಹರಡುತ್ತಿದೆ ಎಂದು ಏಡ್ಸ್ ನಿಯಂತ್ರಣ ಸಂಸ್ಥೆಯ ವರದಿಗಳು ತಿಳಿಸುತ್ತವೆ. ಕರ್ನಾಟಕದಲ್ಲಿ ೧೯೯೮ರಿಂದ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಕಾರ್ಯಕ್ರಮದ ಅಂಗವಾಗಿ ಏಡ್ಸ್ ನಿಯಂತ್ರಣಕ್ಕೆ ತರಲು ಹತ್ತು ಹಲವು ಕಾರ್ಯಕ್ರಮಗಳನ್ನು ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳ ಸಹಭಾಗಿತ್ವದಲ್ಲಿ ನಡೆಸಲಾಗುತ್ತಿದೆ. ರಾಷ್ಟ್ರೀಯ ಮತ್ತು ರಾಜ್ಯ ಆರೋಗ್ಯ ಕಾರ್ಯಕ್ರಮಗಳನ್ನು ವಿವಿಧ ಹಂತದ ಆರೋಗ್ಯ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಕೇಂದ್ರ ಸರ್ಕಾರವು ವಿಷನ್ ೨೦೨೦ರ ಗುರಿಯನ್ನು ತಲುಪಲು ಆರೋಗ್ಯ ಇಲಾಖೆ ಶ್ರಮಿಸುತ್ತಿದೆ.

ವರ್ಷಕ್ಕೊಮ್ಮೆ ಎಚ್.ಐ.ವಿ. ಸಮೀಕ್ಷೆಯನ್ನು ನಿಯೋಜಿಸಲ್ಪಟ್ಟ ಸಮೀಕ್ಷಣಾ ಕೇಂದ್ರಗಳಲ್ಲಿ ನಡೆಸಲಾಗುತ್ತದೆ. ಈ ಸಮೀಕ್ಷೆಯು ಈಗ ದ್ವೈವಾರ್ಷಿಕಕ್ಕೆ (ಎರಡು ವರ್ಷಗಳಿಗೆ) ವರ್ಗಾಯಿಸಲಾಗಿದೆ.

"೨೦೧೨-೧೩ರಲ್ಲಿ ನಡೆದಂತಹ ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷಣಾ ಭಾಗ-೩ರಲ್ಲಿ ಹೆಚ್.ಐ.ವಿ ಸೋಂಕು ಪ್ರತಿಶತ ೦.೫೩ ಆಗಿದೆ. ಪ್ರಸವಪೂರ್ವ ಚಿಕಿತ್ಸಾ ಕೇಂದ್ರಗಳಿಗೆ ಭೇಟಿ ನೀಡುವ ಸ್ತ್ರೀಯರಲ್ಲಿ ೨೦೦೪ರಲ್ಲಿ ಹೆಚ್.ಐ.ವಿ ಸೋಂಕು ೧.೫% ಇದ್ದು ೨೦೧೪-೧೫ ರಲ್ಲಿ ೦.೩೬% ಗೆ ಇಳಿದಿದೆ. ೨೦೧೬-೧೭ರಲ್ಲಿ ಎಚ್.ಐ.ವಿ. ಸಮೀಕ್ಷಣೆಯನ್ನು ಎ.ಎನ್‌ಸಿ ಸೈಟ್ಸ್ ಮತ್ತು ಹೆಚ್. ಆರ್. ಜಿ ಸೈಟ್ಸ್ ಗಳಲ್ಲಿ ನ್ಯಾಕೋ ರಾಷ್ಟ್ರೀಯ ಏಡ್ಸ್ ನಿಯಂತ್ರಣ ಸಂಸ್ಥೆ (National Aids Control Organisation) ಮಾರ್ಗಸೂಚಿಯಂತೆ ನಡೆಸಲಾಗಿದ್ದು ಪ್ರಸವಪೂರ್ವ ಚಿಕಿತ್ಸಾ ಕೇಂದ್ರಗಳಿಗೆ ಭೇಟಿ ನೀಡುವ ಸ್ತ್ರೀಯರಲ್ಲಿ ಹೆಚ್.ಐ.ವಿ ಸೋಂಕು ಪ್ರತಿಶತ ೦.೩೮ ಆಗಿದೆ ಹಾಗೂ ಹೆಚ್. ಆರ್. ಜಿಯಲ್ಲಿ ಲೈಂಗಿಕ ಕಾರ್ಯಕರ್ತೆಯರ ಸೋಂಕು ಪ್ರತಿಶತ ೩.೩೩% ಗೆ ಇಳಿದಿದೆ. ಪುರುಷ ಹಾಗೂ ಸ್ತ್ರೀ ಸಲಿಂಗಾಸಕ್ತರಲ್ಲಿ ಈ ಸೋಂಕು ೫.೪೦% ಗೆ ಇಳಿದಿದೆ."[೧]

ಕರ್ನಾಟಕ ರಾಜ್ಯದ ನಗರ ಪ್ರದೇಶಗಳ ಎಲ್ಲಾ ಲೈಂಗಿಕ ಕಾರ್ಯಕರ್ತೆಯರು, ಪುರುಷ ಹಾಗೂ ಸ್ತ್ರೀ ಸಲಿಂಗಾಸಕ್ತರಿಗಾಗಿ ಗುರಿ ಆಧಾರಿತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಒಟ್ಟು ೯೬,೫೪೭ ರಷ್ಟು ಲೈಂಗಿಕ ಕಾರ್ಯಕರ್ತೆಯರನ್ನು ನ್ಯಾಕೋ/ಕೆಸ್ಯಾಪ್ಸ್ ಮತ್ತು ಇತರರ ಸಹಾಯದಿಂದ ಗುರಿ ಆಧಾರಿತ ಕಾರ್ಯಕ್ರಮಗಳ ವ್ಯಾಪ್ತಿಯಡಿಗೆ ತರಲಾಗಿದೆ.

**ಹೆಚ್.ಐ.ವಿ ಆಪ್ತಸಮಾಲೋಚನೆ ಮತ್ತು ಪರೀಕ್ಷೆ**

ರಾಜ್ಯದಲ್ಲಿ ಎಲ್ಲಾ ಸರ್ಕಾರಿ ಆಸ್ಪತ್ರೆಗಳಲ್ಲಿ ಮತ್ತು ಆಯ್ದ ಖಾಸಗಿ ಆಸ್ಪತ್ರೆಗಳಲ್ಲಿ ಒಟ್ಟು ೪೭೦ ಐ.ಸಿ.ಟಿ.ಸಿ. (ಸಮಗ್ರ ಆಪ್ತ ಸಮಾಲೋಚನೆ ಮತ್ತು ಪರೀಕ್ಷಾ ಕೇಂದ್ರ) ಹಾಗೂ ೨೪೩೩ ಎಫ್ ಐಸಿಟಿಸಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಈ ಕೇಂದ್ರಗಳಲ್ಲಿ ಹೆಚ್.ಐ.ವಿ ಆಪ್ತ ಸಮಾಲೋಚನೆ ಮತ್ತು ಪರೀಕ್ಷೆಯನ್ನು ನಡೆಸಲಾಗುತ್ತಿದೆ. "೨೦೧೪-೧೫ ರಲ್ಲಿ ೧೯,೦೬,೨೩೭ ಜನರನ್ನು ಪರೀಕ್ಷಿಸಲಾಗಿ ೧.೩೯% ಜನ ಹೆಚ್.ಐ.ವಿ. ಸೋಂಕಿತರು ಕಂಡು ಬಂದಿರುತ್ತಾರೆ. ೧೨,೩೨,೮೬೨ ಗರ್ಭಿಣಿ ಸ್ತ್ರೀಯರನ್ನು ಪರೀಕ್ಷಿಸಲಾಗಿ ೦.೧೧% ಹೆಚ್.ಐ.ವಿ. ಸೋಂಕಿತರು ಕಂಡು ಬಂದಿರುತ್ತಾರೆ. ೨೦೦೧೫-೧೬ ರಲ್ಲಿ ೧೯,೪೫,೨೮೨ ಜನರನ್ನು ಪರೀಕ್ಷಿಸಲಾಗಿ ೧.೧೩% ಜನ ಹೆಚ್.ಐ.ವಿ. ಸೋಂಕಿತರು ಕಂಡು ಬಂದಿರುತ್ತಾರೆ. ೧೨,೮೦,೮೬೨ ಗರ್ಭಿಣಿ ಸ್ತ್ರೀಯರನ್ನು ಪರೀಕ್ಷಿಸಲಾಗಿ ೦.೦೮% ಹೆಚ್.ಐ.ವಿ. ಸೋಂಕಿತರು ಕಂಡು ಬಂದಿರುತ್ತಾರೆ. ೨೦೧೬-೧೭ ರಲ್ಲಿ ೧೯,೪೦,೫೮೯ ಜನರನ್ನು ಪರೀಕ್ಷಿಸಲಾಗಿ ೧.೦೩% ಜನ ಹೆಚ್.ಐ.ವಿ. ಸೋಂಕಿತರನ್ನು ಪತ್ತೆ ಹಚ್ಚಲಾಗಿದೆ. ೧೩,೨೧,೬೬೮ ಗರ್ಭಿಣಿ ಸ್ತ್ರೀಯರನ್ನು ಪರೀಕ್ಷಿಸಲಾಗಿ ೦.೦೬% ಹೆಚ್. ಐ.ವಿ. ಸೋಂಕಿತರು ಕಂಡುಬಂದಿದೆ. ದ್ದಾರೆ. ಹಾಗೂ ಆರ್ಥಿಕ ವರ್ಷ ೨೦೧೭-೧೮ ರಲ್ಲಿ ೨೨,೨೦೯೨ ಜನರನ್ನು ಪರೀಕ್ಷಿಸಲಾಗಿ ೦.೮೫% ಜನ ಹೆಚ್.ಐ.ವಿ. ಸೋಂಕಿತರನ್ನು ಪತ್ತೆಹಚ್ಚಲಾಗಿದೆ. ೧೪,೧೮,೧೭೬ ಗರ್ಭಿಣಿ ಸ್ತ್ರೀಯರನ್ನು ಪರೀಕ್ಷಿಸಲಾಗಿ ೦.೦೬% ಹೆಚ್. ಐ.ವಿ. ಸೋಂಕಿತರು ಕಂಡುಬಂದಿದ್ದಾರೆ."[೨] ಭಾರತವೊಂದರಲ್ಲಿ ೯೨,೦೦೦ ಎಚ್.ಐ.ವಿ ಪಾಸಿಟಿವ್ ಹೊಂದಿದ ಮಹಿಳೆಯರು ಮಕ್ಕಳಿಗೆ ಜನ್ಮಕೊಡುತ್ತಿದ್ದಾರೆ. ಎಲ್ಲಾ ಮಕ್ಕಳು ಎಚ್.ಐ.ವಿ

ಪಾಸಿಟಿವ್ ಆಗಿ ಹುಟ್ಟದಿದ್ದರೂ ಎಷ್ಟೋ ಪುಟ್ಟ ಕಂದಮ್ಮಗಳು ತಾವೇನೂ ಮಾಡದೆ ತಮ್ಮ ಹೆತ್ತವರು ಮಾಡಿದ ತಪ್ಪಿಗೆ ಶಿಕ್ಷೆಯನ್ನನುಭವಿಸಬೇಕಾಗಿದೆ. ಗ್ರಾಮಾಂತರ ಪ್ರದೇಶ ಹಾಗೂ ಸಾಮಾನ್ಯ ಜನರಿಗೆ ಏಡ್ಸ್ ಸೋಂಕು ತೀವ್ರವಾಗಿ ಹರಡುತ್ತಿದೆ ಎಂದು ಏಡ್ಸ್ ನಿಯಂತ್ರಣ ಸಂಸ್ಥೆ ಆತಂಕ ವ್ಯಕ್ತಪಡಿಸುತ್ತಿದೆ.

೧೯೮೬ರಲ್ಲಿ ತಮಿಳುನಾಡಿನ ಲೈಂಗಿಕ ಕಾರ್ಯಕರ್ತೆಯಲ್ಲಿ ಮೊದಲಬಾರಿಗೆ ಎಚ್.ಐ.ವಿ ಸೋಂಕಿರುವುದಾಗಿ ಆರೋಗ್ಯ ಸಂಸ್ಥೆಗಳು ಗುರುತಿಸಿದವು. ಇದು ಭಾರತದ ಮೊದಲ ಎಚ್.ಐ.ವಿ ದಾಖಲೆ. ೧೯೯೮ರಲ್ಲಿ ಹಾಸನದ ಜಿಲ್ಲಾ ಆಸ್ಪತ್ರೆಯ ಆವರಣದಲ್ಲಿ ಹದಿಹರೆಯದ ಹೆಣ್ಣೊಬ್ಬಳ ಹೆಣ ಅನಾಥವಾಗಿ ಬಿದ್ದಿತ್ತು. ನಾಯಿಗಳೆಲ್ಲಾ ಹೆಣವನ್ನು ಕಚ್ಚಿ ಎಳೆದಾಡುತ್ತಿರುವ ಘಟನೆ ಪತ್ರಿಕೆಗಳಲ್ಲೆಲ್ಲಾ ವರದಿಯಾಗಿದ್ದಿತು. ಆಸ್ಪತ್ರೆ ಸಿಬ್ಬಂದಿಯಾಗಲಿ ಎಚ್.ಐ.ವಿ, ಏಡ್ಸ್ ಪೀಡಿತರ ಕುರಿತು ಜನಸಾಮಾನ್ಯರು ಭಯ ಭೀತರಾಗಿ ದೂರವಾಗಿ ಆತಂಕಗೊಳ್ಳಲು ಇದ್ದ ಕಾರಣಗಳು ಈ ಕೆಳಗಿನಂತಿವೆ.

- ಲೈಂಗಿಕ ವೃತ್ತಿಯಲ್ಲಿ ನಿರತವಾದ ಮಹಿಳೆಯರು ಎಚ್.ಐ.ವಿ/ಏಡ್ಸ್ ಪ್ರಸರಣಾ ಭಂಡಾರಗಳು ಎಂದು ಪರಿಗಣಿಸುವುದು
- ಸಾಂಕ್ರಾಮಿಕ ರೋಗಗಳ ಉತ್ಪಾದನಾ ಕೇಂದ್ರಗಳು
- ಸಾರ್ವಜನಿಕ ಆರೋಗ್ಯದ ಅಪಾಯಕಾರಿ ಬಿರುಗಾಳಿ ಎಂದು ಪರಿಗಣಿಸಿರುವುದೇ ಆಗಿದೆ.

ಲೈಂಗಿಕ ವೃತ್ತಿನಿರತ ಮಹಿಳೆಯರು ಮಾತ್ರ ಎಚ್.ಐ.ವಿ/ಏಡ್ಸ್ ಪ್ರಸರಣಾ ಕೇಂದ್ರಗಳು ಎಂದು ಭಾವಿಸುವ ಪುರುಷ ಪ್ರಧಾನ ವ್ಯವಸ್ಥೆ ಸೋಂಕು ಪ್ರಸರಣಕ್ಕೆ ತಾವೂ ಕಾರಣ ಎಂಬುದನ್ನು ಮರೆತೇಬಿಡುತ್ತವೆ. ಉತ್ತರ ಕರ್ನಾಟಕದ ದೇವದಾಸಿ ಮಹಿಳೆಯರಿಗೆ ಅಭಿವೃದ್ಧಿ ಕಾರ್ಯ ಯೋಜನೆಗಳ ಆಮಿಷವೊಡ್ಡಿ ಎಚ್.ಐ. ವಿ ಪರೀಕ್ಷೆಗಾಗಿ ರಕ್ತವನ್ನು ಪಡೆದರು. ಆದರೆ ಯಾವ ಅಭಿವೃದ್ಧಿ ಕಾರ್ಯಯೋಜನೆಗಳೂ ಅವರಿಗೆ ತಲುಪಿಸದೆ ಒಂದು ಊಟ ಕೊಡುವಲ್ಲಿಗೇ ಮುಕ್ತಾಯಗೊಂಡಿತು.

ಗುಪ್ತ ರೋಗಗಳನ್ನು ಹರಡುವ ಕೇಂದ್ರ ಲೈಂಗಿಕ ವೃತ್ತಿ ಮಹಿಳೆಯರೇ ಎಂಬ ಭಾವನೆ ಸಮಾಜದಲ್ಲಿದೆ. ಇಂದಿಗೂ ಏಡ್ಸ್ ಸೋಂಕಿಗೆ ನಿರ್ಧಿಷ್ಟವಾದ ಮದ್ದಿಲ್ಲ. ಎಚ್.ಐ.ವಿ/ ಏಡ್ಸ್ ಪೀಡಿತರ ಕೊನೆ ಸಾವಿನಲ್ಲಿಯೇ ಪರ್ಯವಸಾನಗೊಳ್ಳುವುದು ಎಂದೇ ಬಹುತೇಕ ವರದಿಗಳು ತಿಳಿಸುತ್ತವೆ. ಈ ಕಾರಣಕ್ಕಾಗಿಯೇ ಏಡ್ಸ್ ನಿಯಂತ್ರಣ ಯೋಜನೆಗಳು ತೀವ್ರವಾಗಿ ಹಾಗೂ ತ್ವರಿತವಾಗಿ ಕಾರ್ಯನ್ಮುಖಗೊಳ್ಳಲು ಸಾಧ್ಯವಾಯಿತು. ಈ ಸೋಂಕು ನಿಯಂತ್ರಣ ಕಾರ್ಯಕ್ರಮವು ಮೊದಲಿಗೆ ಗುರಿಯಾಗಿಸಿಕೊಂಡಿದ್ದೇ ಲೈಂಗಿಕ ವೃತ್ತಿನಿರತ ಮಹಿಳೆಯರನ್ನು ಏಡ್ಸ್ ಎಂಬ ಸೋಂಕಿನ ಹೆಸರೇ ಎಷ್ಟೋ ಲೈಂಗಿಕ ಕಾರ್ಯಕರ್ತೆಯರಿಗೆ ನಡುಕವನ್ನುಂಟುಮಾಡುವಂತಹದ್ದು. ತಮ್ಮ ವೃತ್ತಿಯ ಮೂಲ ಬೇರುಗಳನ್ನೇ ಈ ಸೋಂಕು ಅಲ್ಲಾಡಿಸುತ್ತಿರುವುದು ಅವರ ಆರ್ಥಿಕ ಮೂಲಕ್ಕೇ ಕೊಡಲಿಪೆಟ್ಟನ್ನು

ಕೊಡುತ್ತದೆಂಬ ಹೆದರಿಕೆಯೇ ಅವರದಾಗಿತ್ತು. ಮೊದಲೇ ಸಾಮಾಜಿಕ ಸ್ಥಾನಮಾನಗಳಿಲ್ಲದ ವೃತ್ತಿಯಲ್ಲಿ ತೊಡಗಿಕೊಂಡಿರುವ ಮಹಿಳೆಯರಿಗೆ ಏಡ್ಸ್ ಎಂಬುದು ಕರಾಳವಾದ ನೆರಳನ್ನು ಹರಿಸಿತು.

**ಏಡ್ಸ್ ನಿಯಂತ್ರಣ ತಂತ್ರ ಮತ್ತು ಕಾಂಡೋಮ್**

ಏಡ್ಸ್ ನಿಯಂತ್ರಣದ ಕುರಿತು ಜಗತ್ತಿನಾದ್ಯಂತ ಸಾಕಷ್ಟು ಚರ್ಚೆ, ಅಧ್ಯಯನ, ಸಂಶೋಧನೆಗಳು ನಡೆದವು ಹಾಗೂ ಇಂದಿಗೂ ನಡೆಯುತ್ತಿವೆ. ಈ ಸೋಂಕನ್ನು ನಿಯಂತ್ರಿಸುವ ಔಷದೋಪಚಾರ, ಚಿಕಿತ್ಸೆಗಳು ಅವಿಷ್ಕಾರಗೊಳ್ಳದೇ ಇರುವುದರಿಂದ ಅದು ಬಾರದಂತೆ ಮುಂಜಾಗ್ರತೆ ವಹಿಸಿ ತಡೆಗಟ್ಟುವ ನಿಟ್ಟಿನಲ್ಲಿ ಯೋಚಿಸಲಾಯಿತು. ನಿಯಂತ್ರಣ ಎನ್ನುವಾಗ ಬಹುಜನರೊಂದಿಗೆ ಲೈಂಗಿಕ ಸಂಪರ್ಕವನ್ನು ನಿಯಂತ್ರಿಸಬೇಕು ಎನ್ನುವ ಸಲಹೆಗಳೂ ಕೇಳಿಬಂದವು. ಆದರೆ ಅದು ಸುಲಭಸಾಧ್ಯವಲ್ಲದ ಮಾತು. ಹೀಗಾಗಿ ಸುರಕ್ಷಿತ ಲೈಂಗಿಕ ಕ್ರಿಯೆ (ಸೇಫ್ ಸೆಕ್ಸ್) ಮಾತ್ರ ಸೋಂಕನ್ನು ನಿಯಂತ್ರಿಸಲು ಇರುವ ದಾರಿ ಎಂದು ತಿಳಿಯಲಾಯಿತು. ಇದಕ್ಕೆ ಸುಲಭೋಪಾಯ ಕಾಂಡೊಮ್ ಎಂದು ಜಗತ್ತಿನಾದ್ಯಂತ ಆರೋಗ್ಯದ ಕುರಿತಾದ ಉನ್ನತ ಸಂಶೋಧನೆ, ಚರ್ಚೆ, ಅಧ್ಯಯನಗಳ ಮೂಲಕ ತಿಳಿದು ಆ ನಿಟ್ಟಿನಲ್ಲಿ ಕಾರ್ಯೋನ್ಮುಖಗೊಳ್ಳಲಾಯಿತು. ಕಾಂಡೋಮ್‌ನಿಂದ ಸುರಕ್ಷಿತತೆ ನೂರರಷ್ಟು ಆಗುತ್ತದೆ ಎಂಬ ಭರವಸೆ ಇರದೇ ಇದ್ದರೂ ಅದರ ಹೊರತಾದ ದಾರಿಗಳಾವೂ ಅಧ್ಯಯನಕಾರರಿಗೆ ತೋರಲಿಲ್ಲ. ಹೀಗಾಗಿ ಕಾಂಡೊಮ್‌ಗಳ ಉತ್ಪಾದನೆ, ಅವುಗಳನ್ನು ಜನರು ಉಪಯೋಗಿಸಲು ಉತ್ತೇಜನ ನೀಡುವ ಪ್ರಚಾರಗಳು ಭರದಿಂದ ಸಾಗಿದವು. ಇಂದು ಲೈಂಗಿಕ ವೃತ್ತಿಯನ್ನು ಮಾಡುತ್ತಿದ್ದ ಮಹಿಳೆಯರೇ ಮುಂದೆನಿಂತು ಸ್ವಯಂ ಕಾರ್ಯಕರ್ತರಾಗಿ ಕಾಂಡೋಮ್ ವಿತರಣೆ, ಏಡ್ಸ್ ನಿಯಂತ್ರಣ ಕುರಿತಾದ ಪ್ರಚಾರಗಳಲ್ಲಿ ಮುಂಚೂಣಿಯಲ್ಲಿ ನಿಂತು ಕಾರ್ಯವೆಸಗುತ್ತಿದ್ದಾರೆ ಎಂದು ಏಡ್ಸ್ ನಿಯಂತ್ರಣ ಸಂಸ್ಥೆಯೇ ಹೇಳುವುದು. ಏಡ್ಸ್ ನಿಯಂತ್ರಣದ ವಿಚಾರವಾಗಿ ಈ ವ್ಯವಸ್ಥೆಯು ಮಹಿಳೆಯ ಸುರಕ್ಷತೆಗಿಂತ ಪುರುಷನ ಸುರಕ್ಷತೆಗೇ ಹೆಚ್ಚಿನ ಒತ್ತು ನೀಡಿದೆಯೇನೋ ಎಂಬ ಅನುಮಾನಗಳೂ ಕಾಡುವುದುಂಟು.

ಬಹುತೇಕ ಏಡ್ಸ್ ಸೋಂಕು ನಿಯಂತ್ರಣಕ್ಕೆ ಪುರುಷರು ತೊಡುವ ಕಾಂಡೋಮ್‌ಗಳನ್ನೇ ಹೆಚ್ಚಾಗಿ ಬಳಸುವುದು ಮತ್ತು ಹಂಚುವುದು. ಅದರ ಬದಲಿಗೆ ಮಹಿಳೆಯರು ಧರಿಸುವ ಕಾಂಡೋಮ್‌ಗಳ ಹಂಚಿಕೆ ಇಲ್ಲವೆಂಬಷ್ಟು ಕಡಿಮೆಯಾಗಿರಲು ಕಾರಣಗಳೇನು ಎಂಬುದನ್ನು ತಿಳಿಯಬೇಕಾಗಿದೆ. ಏಕೆಂದರೆ ಕಾಂಡೊಮ್‌ಗಳನ್ನು ಲೈಂಗಿಕ ಕಾರ್ಯಕರ್ತೆಯರಿಗೆ ಉಚಿತವಾಗಿಯೇನೋ ಹಂಚಲಾಗುವುದು. ಆದರೆ ಅವಳಲ್ಲಿ ಲೈಂಗಿಕ ಸಂಪರ್ಕಕ್ಕೆ ಬರುವ ವ್ಯಕ್ತಿಯ ಮನವೊಲಿಸಿ ಕಾಂಡೊಮ್ ತೊಡಿಸುವುದು ಲೈಂಗಿಕ ಕಾರ್ಯಕರ್ತೆಗೆ ಸವಾಲಾಗಿಯೇ ಪರಿಣಮಿಸುವುದು. ಏಕೆಂದರೆ ಬಹುತೇಕ ಪುರುಷರು ಪಾನಮತ್ತರಾಗಿಯೇ ಮಹಿಳೆಯೊಂದಿಗೆ ಲೈಂಗಿಕ ಸಂಪರ್ಕಕ್ಕೆ ಬರುವರು. ಇಂತಹ ಪುರುಷರ ಮನವೊಲಿಸಿ ಕಾಂಡೊಮ್ ತೊಡಿಸುವುದು ಅಷ್ಟೇನೂ ಸುಲಭವಲ್ಲ. ಅದೇ ರೀತಿಯಾಗಿ ಕಾಂಡೊಮ್ ತೊಡುವುದರಿಂದ ಲೈಂಗಿಕ ಕ್ರಿಯೆಯ ನೈಜ ತೃಪ್ತಿ ಸಿಗದು, ಕಾಂಡೊಮ್ ತೆಗೆದು ಲೈಂಗಿಕ ಕ್ರಿಯೆ ನಡೆಸೋಣ ಎಂದು ಹೇಳುವ ಪುರುಷರು ಹೆಚ್ಚು. ಇಂಥವರ ಮನವೊಲಿಸುವುದೂ ಸುಲಭದ

ಕೆಲಸವಲ್ಲ. ಹೀಗಾಗಿ ಮಹಿಳೆಯರು ತೊಡುವ ಕಾಂಡೋಮ್‌ಗಳು ಹಂಚಿಕೆಯಾದರೆ ಮಹಿಳೆಯು ಪುರುಷನ ಗಮನಕ್ಕೆ ಬಾರದಂತೆ ಸ್ವತಃ ತಾನೆ ಧರಿಸಿ ಲೈಂಗಿಕ ಕ್ರಿಯೆಯಲ್ಲಿ ತೊಡಗಬಹುದು ಎಂದು ಮಹಿಳಾವಾದಿಗಳು ವಾದಿಸುವರು.

**ಲೈಂಗಿಕ ಸಂಪರ್ಕದ ಸೋಂಕುಗಳು ಮತ್ತು ಜನನಾಂಗ ಮಾರ್ಗಗಳ ಸೋಂಕುಗಳ ಸೇವೆಗಳು:**

ಲೈಂಗಿಕ ಸಂಪರ್ಕದ ಸೋಂಕುಗಳು ಮತ್ತು ಜನನಾಂಗ ಮಾರ್ಗಗಳ ಸೋಂಕುಗಳು ಒಬ್ಬರಿಂದ ಒಬ್ಬರಿಗೆ ಹಲವಾರು ವಿಧಗಳಿಂದ ಹರಡುತ್ತವೆ. ಸಿಫಿಲಸ್ ಮತ್ತು ಗೊನೋರಿಯಾ ಸೋಂಕುಗಳನ್ನೊಳಗೊಂಡಂತೆ ೨೦ ತರಹದ ಲೈಂಗಿಕ ಸಂಪರ್ಕದ ಸೋಂಕುಗಳಿವೆಯಂತೆ. ಅವುಗಳಿಗೆ ಪರೀಕ್ಷೆ ಮತ್ತು ಚಿಕಿತ್ಸೆಗಳ ತಿಳಿವಳಿಕೆಯ ಜೊತೆಗೆ ಮಾಹಿತಿಗಳನ್ನು ಡಿ.ಎಸ್.ಆರ್.ಸಿ ಕ್ಲಿನಿಕ್‌ಗಳ ಮುಖಾಂತರ ಜನಸಾಮಾನ್ಯರಿಗೆ ತಲುಪಿಸಲಾಗುತ್ತದೆ. ಇನ್ನೂ ಗಮನಿಸಬೇಕಾದ ಅಂಶವೆಂದರೆ ಲೈಂಗಿಕ ಸಂಪರ್ಕದ ಸೋಂಕುಗಳ ಸಮರ್ಪಕವಾದ ಚಿಕಿತ್ಸೆ ಮತ್ತು ತಡೆಗಟ್ಟುವಿಕೆಯಿಂದ ಎಚ್‌ಐವಿ ಸೋಂಕಿನ ಪ್ರಮಾಣವನ್ನು ೪೦% ರಷ್ಟು ಕಡಿಮೆಗೊಳಿಸಬಹುದಾಗಿದೆ.

| **ಕೋಷ್ಟಕ: ೬.೧ ಏಡ್ಸ್ ತಡೆಗಟ್ಟುವ ಚಿಕಿತ್ಸೆಯ ವಾರ್ಷಿಕ ಗುರಿ ಹಾಗೂ ಸಾಧನೆಯ ವಿವರ** | | | |
|---|---|---|---|
| **ವರ್ಷ** | **ಗುರಿ** | **ಸಾಧನೆ** | **ಶೇಕಡ (%)** |
| ೨೦೧೨-೧೩ | ೨,೧೮,೭೩೭ | ೧,೪೩,೯೫೦ | ೬೬% |
| ೨೦೧೩-೧೪ | ೨,೩೭,೪೯೩ | ೧,೬೭,೫೨೬ | ೭೧% |
| ೨೦೧೪-೧೫ | ೨,೪೮೯೫೨ | ೧,೯೩,೯೪೯ | ೭೮% |
| ೨೦೧೫-೧೬ | ೩,೧೯,೯೯೬ | ೧,೯೬,೮೮೨ | ೬೨% |
| ೨೦೧೬-೧೭ | ೩,೯೩,೮೪೧ | ೨,೨೯,೮೮೪ | ೫೮% |
| ೨೦೧೭-೧೮ | ೩,೯೭,೭೭೯ | ೨,೫೯,೩೬೩ | ೬೫% |

(ಆಧಾರ: CIMS / SIMS ವರದಿ)

ಏಡ್ಸ್ ಸೋಂಕು ತಡೆಗಟ್ಟುವ ಚಿಕಿತ್ಸೆಯ ವಾರ್ಷಿಕ ಗುರಿ ಹಾಗೂ ಸಾಧನೆಯ ವಿವರಗಳಂತೆ ೨೦೧೨-೧೩ರ ಸಾಲಿನಲ್ಲಿ ೨,೧೮,೭೩೧ ಗುರಿಯನ್ನು ಹೊಂದಲಾಗಿತ್ತಾದರೂ ಸಾಧನೆಯು ೧,೪೩,೯೫೦ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೬೬ ಇದೆ. ೨೦೧೩-೧೪ರ ಸಾಲಿನಲ್ಲಿ ೨,೩೭,೪೯೩ ಗುರಿಯನ್ನು ಹೊಂದಲಾಗಿತ್ತಾದರೂ ಸಾಧನೆಯು ೧,೬೭,೫೨೬ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೭೧ ಇದೆ. ೨೦೧೪-೧೫ರ ಸಾಲಿನಲ್ಲಿ ೨,೪೮೯೫೨ ಗುರಿಯನ್ನು ಹೊಂದಲಾಗಿತ್ತಾದರೂ ಸಾಧನೆಯು ೧,೯೩,೯೪೯ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೭೮ ಇದೆ. ೨೦೧೫-೧೬ರ ಸಾಲಿನಲ್ಲಿ ೩,೧೯,೯೯೬ ಗುರಿಯನ್ನು

ಹೊಂದಲಾಗಿತ್ತಾದರೂ ಸಾಧನೆಯು ೧,೯೬,೮೮೨ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೬೨ ಇದೆ. ೨೦೧೬-೧೭ರ ಸಾಲಿನಲ್ಲಿ ೩,೯೩,೮೪೧ ಗುರಿಯನ್ನು ಹೊಂದಲಾಗಿತ್ತಾದರೂ ಸಾಧನೆಯು ೨,೨೯,೮೮೪ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೫೮ ಇದೆ. ೨೦೧೭-೧೮ರ ಸಾಲಿನಲ್ಲಿ ೩,೯೭,೭೭೯ ಗುರಿಯನ್ನು ಹೊಂದಲಾಗಿತ್ತಾದರೂ ಸಾಧನೆಯು ೨,೫೯,೩೬೩ ಆಗಿದೆ. ಆ ವರ್ಷದ ಪ್ರತಿಶತ ಸಾಧನೆ ಶೇಕಡ ೬೫ ಇದೆ. ೨೦೧೨-೧೩ನೇ ಸಾಲಿನಿಂದ ೨೦೧೭-೧೮ನೇ ಸಾಲಿನವರೆಗೂ ಏಡ್ಸ್ ನಿಯಂತ್ರಣ ಪ್ರಮಾಣದ ಗುರಿಯಲ್ಲಿ ಏರಿಕೆಯಾಗಿದೆಯಾದರೂ ನಿಯಂತ್ರಣ ಪ್ರಮಾಣ ಸ್ವಲ್ಪ ಏರಿದಂತೆ ಕಾಣುವುದಾದರೂ ಏರಿಕೆ ಪ್ರಮಾಣ ಏಕರೂಪದಲ್ಲಿರಿದೆ ಇರುವುದು ತಿಳಿದುಬರುವುದು.

| ಕೋಷ್ಟಕ ೬.೨: ಎಚ್.ಐ.ವಿ/ಏಡ್ಸ್ ಸೋಂಕಿತರಿಗೆ ವಿವಿಧ ಮೂಲಗಳಿಂದ ದೊರೆಯುವ ಸೌಲಭ್ಯಗಳು ಹಾಗೂ ಸೌಲಭ್ಯ ಪಡೆದವರ ಸಂಖ್ಯೆ | | | | | |
|---|---|---|---|---|---|
| ಕ್ರ ಸಂ | ಯೋಜನೆಯ ಹೆಸರು | ದೊರಕುವ ಸೌಲಭ್ಯ | ಯಾರಿಗೆ | ಇಲಾಖೆಯ ಹೆಸರು | ೨೦೧೭ರ ವರೆವಗೂ ಸೇವೆಗಳನ್ನು ಪಡೆದಿರುವ ಒಟ್ಟು ಜನ ಸಂಖ್ಯೆ |
| ೧ | ಅಂತ್ಯೋದಯ ಪಡಿತರ ಚೀಟಿ | ೩೫ ಕೆಜಿ ದಾನ್ಯಗಳು | ಹೆಚ್‌ಐವಿ ಸೋಂಕಿತರಿಗೆ | ಅಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | ೩೫೧೧೬ |
| ೨ | ಕಾಬಾ ಯೋಜನೆ | ರೂ.೬೫೦ ರಿಂದ ೭೫೦ ರವರಗೆ | ಹೆಚ್‌ಐವಿ/ಸೋಂಕಿತ ಮತ್ತು ಬಾಧಿತ ಮಕ್ಕಳಿಗೆ | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | ೧೮೦೪೨ |
| ೩ | ಉಚಿತ ವಸತಿ ಯೋಜನೆ | ಮನೆಯನ್ನು ಕಟ್ಟಿಸಿ ಕೊಡುವುದು. | ಹೆಚ್‌ಐವಿ ಸೋಂಕಿತರಿಗೆ | ರಾಜೀವ್‌ಗಾಂಧಿ ಗ್ರಾಮೀಣಾಭಿವೃದ್ಧಿ ನಿಗಮ. | ೨೩೪೪ |
| ೪ | ಚೇತನ ಯೋಜನೆ | ರೂ.೨೦೦೦೦ | ಲೈಂಗಿಕ ಕಾರ್ಯಕರ್ತರಿಗೆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿಗಮ | ೧೦೦೫ |
| ೫ | ಖಾಸಗಿ ಶಾಲೆಗಳಲ್ಲಿ ಉಚಿತ ನೊಂದಣಿ | ಆರ್.ಟಿ.ಇ. ಅಡಿಯಲ್ಲಿ ಉಚಿತ ನೊಂದಣಿ | ಹೆಚ್‌ಐವಿ ಸೋಂಕಿತ/ ಬಾಧಿತ ಮಕ್ಕಳಿಗೆ | ಪ್ರಾಥಮಿಕ ಶಿಕ್ಷಣ ಇಲಾಖೆ | ೬೨೩ |
| ೬ | ಉಚಿತ ಉನ್ನತ ಶಿಕ್ಷಣ ಮತ್ತು ವಿಧ್ಯಾರ್ಥಿ ವೇತನ | ಉಚಿತ ಉನ್ನತ ಶಿಕ್ಷಣ &ವಿಧ್ಯಾರ್ಥಿ ವೇತನ | ಹೆಚ್‌ಐವಿ ಸೋಂಕಿತ/ ಬಾಧಿತ ವಿಧ್ಯಾರ್ಥಿಗಳಿಗೆ | ಉನ್ನತ ಶಿಕ್ಷಣ ಇಲಾಖೆ | ೨೯೩ |

| | | | | | |
|---|---|---|---|---|---|
| ೭ | ಉಚಿತ ಪರಿಕ್ಷೆಗಳು ಹಾಗೂ ಚಿಕಿತ್ಸೆ | ರಕ್ತ ಪರೀಕ್ಷೆ, ಎಕ್ಸರೇ. ಸ್ಕ್ಯಾನಿಂಗ್ ಮುಂತಾದವು | ಹೆಚ್‌ಐವಿ/ಸೋಂಕಿತರಿಗೆ ಕಲ್ಯಾಣ ಇಲಾಖೆ | ಆರೋಗ್ಯ ಮತ್ತು ಕುಟುಂಬ ಸೌಲಭ್ಯ ದೊರಕುತ್ತಿರುತ್ತದೆ. | ಎಲ್ಲಾ ಸೋಂಕಿತರಿಗೂ |
| ೮ | ಧನ ಶ್ರೀ ಯೋಜನೆ | ರೂ.೫೦.೦೦೦ ಬ್ಯಾಂಕ್ ಸಾಲ ಸಣ್ಣ ಉದ್ದಿಮೆಗಳಿಗೆ | ಹೆಚ್‌ಐವಿ ಸೋಂಕಿತ/ ಬಾಧಿತ ಮಹಿಳೆಯರಿಗೆ | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ | ೨೦೦೦ |
| ೯ | ಉಚಿತ ಕಾನೂನುಸೇವೆಗಳು | ಉಚಿತವಾಗಿ | ಹೆಚ್‌ಐವಿ ಸೋಂಕಿತ/ ಬಾಧಿತರು ಹಕ್ಕುಗಳ ವಂಚಿತರಾಗಿರುವವರಿಗೆ | ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು. ಇವರ ವತಿಯಿಂದ | ೧೩೭ |
| ೧೦ | ಮಿನೆರ ಸಂಸ್ಥೆಯವರು | | ಹೆಚ್‌ಐವಿ ಸೋಂಕಿತ/ ಬಾಧಿತರ ಪೌಷ್ಠಿಕ ಆಹಾರಕ್ಕಾಗಿ | ರೂ.೫,೨೯,೭೨೨,ಗಳನ್ನು ನೀಡಿರುತ್ತಾರೆ. | |
| ೧೧ | ನಾಗರಹಾವು ಚಲನಚಿತ್ರ ತಂಡ | | ಹೆಚ್‌ಐವಿ ಸೋಂಕಿತರಿಗೆ | ಒಂದು ಆಟೋವನ್ನು ನೀಡಿರುತ್ತಾರೆ | |

(ಕೃಪೆ: ೨೦೧೭ರ ಆರೋಗ್ಯ ವಾರ್ಷಿಕ ವರದಿ)

ಎಚ್.ಐ.ವಿ/ ಏಡ್ಸ್ ಸೋಂಕು ಹೊಂದಿದವರು ತೊಡಗಲು ಆಶಕ್ತಿ ಇತ್ಯಾದಿ ಕಾರಣಗಳಿಗಾಗಿ ದುಡಿಮೆಯ ಕಾರ್ಯದಲ್ಲಿ ತೊಡಗುವುದು ಕಷ್ಟವೆಂಬ ಕಾರಣಕ್ಕಾಗಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯು ನೀಡುವ ಪಡಿತರದಲ್ಲಿ ಏರಿಕೆ ಮಾಡಿದ್ದು ಅಂತ್ಯೋದಯ ಪಡಿತರ ಚೀಟಿಯನ್ನು ನೀಡಲಾಗಿದೆ. ಇದರ ಸೌಲಭ್ಯವನ್ನು ೩೫,೧೧೬ ಜನ ಪಡೆಯುತ್ತಿರುವರು.

ಕಾಬಾ ಯೋಜನೆಯಡಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ಎಚ್ಐವಿ/ ಏಡ್ಸ್ ಸೋಂಕು ಹೊಂದಿದವರು ಹಾಗೂ ಬಾಧಿತ ಮಕ್ಕಳಿಗೆ ಮಾಸಿಕ ೬೫೦ರಿಂದ ೭೫೦ರವರೆಗೆ ಸಹಾಯಧನ ನೀಡುತ್ತಿದೆ. ಇದರ ಫಲಾನುಭವಿಗಳ ಸಂಖ್ಯೆ ೧೮,೦೪೨ ಜನ ಇರುವರು. ರಾಜೀವಗಾಂಧಿ ಗ್ರಾಮೀಣಾಭಿವೃದ್ಧಿ ನಿಗಮದಿಂದ ೨,೩೪೪ ಜನರಿಗೆ ವಸತಿ ಕಲ್ಪಿಸಲಾಗಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿಗಮದಿಂದ ಚೇತನಾ ಯೋಜನೆಯಡಿ ರೂ ೨೦,೦೦೦/– ಸಹಾಯ ಧನವನ್ನು ಎಚ್.ಐ. ವಿ/ಏಡ್ಸ್ ಸೋಂಕಿತ ೧,೦೦೫ ಲೈಂಗಿಕ ಕಾರ್ಯಕರ್ತೆಯರಿಗೆ ನೀಡಲಾಗಿದೆ. ೬೨೩ ಎಚ್.ಐ.ವಿ/ಏಡ್ಸ್ ಸೋಂಕಿತ ಮಕ್ಕಳಿಗೆ ಖಾಸಗಿ ಶಾಲೆಗಳಲ್ಲಿ ವಿದ್ಯಾಭ್ಯಾಸಕ್ಕಾಗಿ ಆರ್ ಟಿ ಇ ಅಡಿ ಪ್ರವೇಶ ಕಲ್ಪಿಸಲಾಗಿದೆ. ಎಚ್.ಐ.ವಿ/ಏಡ್ಸ್ ಸೋಂಕಿತರಿಗೆ ರಕ್ತಪರೀಕ್ಷೆ, ಸ್ಕ್ಯಾನಿಂಗ್ ಎಕ್ಸ್‌ರೇ ಇತ್ಯಾದಿ ಉಚಿತ ಆರೋಗ್ಯ ತಪಾಸಣಾ ಸೌಲಭ್ಯ ಕಲ್ಪಿಸಲಾಗಿದೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಿಂದ ಎಚ್.ಐ.ವಿ/ಏಡ್ಸ್ ಸೋಂಕಿತ ಮಹಿಳೆಯರಿಗೆ ಧನಶ್ರೀ ಯೋಜನೆಯಡಿ ೫೦,೦೦೦/–ರೂಪಾಯಿ ಸಣ್ಣ ಉದ್ದಿಮೆ ನಡೆಸಲು ಸಾಲ ನೀಡಲಾಗುತ್ತಿದ್ದು ೨,೦೦೦ ಫಲಾನುಭವಿಗಳು ಅದರ ಸೌಲಭ್ಯವನ್ನು ಪಡೆದಿರುವರು. ತಮ್ಮ ಹಕ್ಕುಗಳಿಂದ ವಂಚಿತವಾದ ಎಚ್.ಐ.ವಿ/ಏಡ್ಸ್ ಸೋಂಕಿತರಿಗೆ ಉಚಿತ ಕಾನೂನು ಸೇವೆಗಳನ್ನು ನೀಡುತ್ತಿದ್ದು ೧೩೭ ಜನ ಫಲಾನುಭವಿಗಳಿರುವರು.

ಮಿನೆರ ಸಂಸ್ಥೆಯವರು ಎಚ್.ಐ.ವಿ/ಏಡ್ಸ್ ಸೋಂಕಿತರ ಪೌಷ್ಠಿಕ ಆಹಾರಕ್ಕಾಗಿ ರೂ ೫,೯೯,೭೨೨/– ನೀಡಿರುವರು. ನಾಗರಹಾವು ಚಲನಚಿತ್ರ ತಂಡವು ಎಚ್.ಐ.ವಿ ಸೋಂಕಿತ ವ್ಯಕ್ತಿಯ ಜೀವನಾಧಾರಕ್ಕೆ ಒಂದು ಆಟೋವನ್ನು ನೀಡಿರುವರು.

ಮೇಲ್ಕಾಣಿಸಿದ ವಿವರಗಳು ಸರ್ಕಾರಿ ಹಾಗೂ ಸರ್ಕಾರೇತರ ಸಂಸ್ಥೆಗಳು ಎಚ್.ಐ.ವಿ/ಏಡ್ಸ್ ಸೋಂಕಿತರಿಗೆ ನೀಡಿರುವ ಸಹಾಯದ ಚಿತ್ರಣ ನೀಡುವುದು. ಆದರೆ ಅದರಾಚೆ "ಎಚ್.ಐ.ವಿ/ಏಡ್ಸ್ ನಿಯಂತ್ರಣ ಯೋಜನೆಗೆ ಸಂಬಂಧಿಸಿದಂತೆ ಯೋಜನೆಗಳು ಕಾರ್ಯರೂಪಕ್ಕೆ ಬರಲು ಮೊದಮೊದಲು ವಿದೇಶಿ ಫಂಡಿಂಗ್ ಸಂಸ್ಥೆಗಳೆ ಹೆಚ್ಚಾಗಿ ಯೋಜನೆ ರೂಪಗೊಳ್ಳಲು ಧನಸಹಾಯ ನೀಡಿದವು" (ಲೀಲಾ ಸಂಪಿಗೆ:೨೦೧೫: ಪುಟ ೧೧೩)

ರಾಷ್ಟ್ರೀಯ ಎಚ್ ಐ ವಿ/ ಏಡ್ಸ್ ನಿಯಂತ್ರಣಾ ಸಂಸ್ಥೆಯ ಅಡಿಯಲ್ಲಿ ಭಾರತದ ಎಲ್ಲಾ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಲ್ಲಿ ಅಲ್ಲಿಯ ಸರ್ಕಾರಗಳ ಸಹಕಾರದೊಂದಿಗೆ ರಾಜ್ಯ ಏಡ್ಸ್ ನಿಯಂತ್ರಣ ಸಂಸ್ಥೆಗಳು ನೋಂದಾವಣೆಗೊಂಡವು. ಈಗಲೂ ಇವು ಕಾರ್ಯೋನ್ಮುಖವಾಗಿವೆ. ಬಹುತೇಕ ಇವು ವಿಶ್ವಬ್ಯಾಂಕ್ ನೀಡುತ್ತಿರುವ ಸಾಲರೂಪದ ಹಣಕ್ಕೆ ಲೆಖ್ಖ ಭರ್ತಿಮಾಡುವುದಕ್ಕೆ ಹೆಚ್ಚು ಪ್ರಾಧಾನ್ಯತೆ

ಕೊಡುತ್ತಿವೆಯೇನೋ ಎನಿಸುವುದು. ಸರ್ಕಾರಿ ಅಥವಾ ಸರ್ಕಾರದ ನಿಯಂತ್ರಣದಲ್ಲಿರುವ ಸಂಸ್ಥೆಗಳು ಬದ್ಧತೆಯಿಂದ ಕೆಲಸದಲ್ಲಿ ತೊಡಗಿಕೊಳ್ಳಲು ಇರುವ ಅಡ್ಡಿಗಳೇನು ಎಂಬುದು ಮಾತ್ರ ತಿಳಿಯುವುದಿಲ್ಲ. ಕೇವಲ ಪಡೆದ ಹಣಕ್ಕೆ ಲೆಖ್ಖ ಒಪ್ಪಿಸುವಷ್ಟಕ್ಕೆ ಯೋಜನೆಗಳು ಸೀಮಿತವಾಗಿಬಿಟ್ಟರೆ ಹೇಗೆ? ಇದೆಲ್ಲವನ್ನೂ ಮೀರಿ ಆಂದೋಲನದ ಸ್ವರೂಪದಲ್ಲಿ ಇಡೀ ಸಮಾಜದ ವಿವಿಧ ಸ್ತರಗಳನ್ನು ಮೂಲೋದ್ದೇಶವು ತಲುಪುವಂತೆ ಪ್ರೇರೇಪಿಸುವ, ಬದ್ಧತೆಗೆ ಪ್ರಾಮಾಣಿಕವಾಗಿ ತೆರೆದುಕೊಳ್ಳುವ ಮನಸ್ಸುಗಳು ಇದ್ದಲ್ಲಿ ಮಾತ್ರ ಮಾನವ ಅಂತಃಕರಣ ಸಂಬಂಧಿ ಯೋಜನೆಗಳು ಯಶಸ್ವಿಯಾಗಿ ಮನುಕುಲವನ್ನು ಜಾಗ್ರತೆಗೊಳಿಸಬಲ್ಲವು ಎಂದೆನಿಸುತ್ತದೆ.

**ಆಧಾರ**

೧ ಭಾರತ ಸರ್ಕಾರದ ಆರೋಗ್ಯ ವಾರ್ಷಿಕ ವರದಿ: ೨೦೧೭-೧೮

೨ ಕರ್ನಾಟಕ ರಾಜ್ಯದ ಆರೋಗ್ಯ ವಾರ್ಷಿಕ ವರದಿ:೨೦೧೭-೧೮

೩. CIMS / SIMS ವರದಿ: ೨೦೧೬

# ಅಧ್ಯಾಯ: ಏಳು

## ಲೈಂಗಿಕ ಕಾರ್ಯಕರ್ತರು ಹಾಗೂ ಸರ್ಕಾರ, ಸರ್ಕಾರೇತರ ಸಂಸ್ಥೆಗಳು

೭.೧ ಕಾಂಡೋಮ್ ಪ್ರೋವಿಷನ್ ಪ್ರೋಗ್ರಾಂ

೭.೨ ಎಚ್ ಐ ವಿ/ಏಡ್ಸ್ ಹರಡಲು ಇರುವ ಮುಖ್ಯ ಕಾರಣಗಳು

೭.೩ ಮಹಿಳೆ ಮತ್ತು ಮಕ್ಕಳ ಅಕ್ರಮ ಸಾಗಾಣಿಕೆ ತಡಗಟ್ಟುವ ಯೋಜನೆ

೭.೪ ಮಹಿಳಾ ತರಬೇತಿ ಮತ್ತು ಮಹಿಳಾ ಉದ್ಯೋಗ ಕಾರ್ಯಕ್ರಮ

೭.೫ ಉಜ್ವಲ್ ಯೋಜನೆ

೭.೬ ವುಮೆನ್ ಹೆಲ್ಪ್‌ಲೈನ್ ಯೋಜನೆ

೭.೭ ಒನ್ ಸ್ಟಾಪ್ ಸೆಂಟರ್ ಯೋಜನೆ

## ಅಧ್ಯಾಯ : ಏಳು

## ಲೈಂಗಿಕ ಕಾರ್ಯಕರ್ತರು ಹಾಗೂ ಸರ್ಕಾರ, ಸರ್ಕಾರೇತರ ಸಂಸ್ಥೆಗಳು

ಭಾರತದ ಮೂಲಭೂತ ಸಮಸ್ಯೆಗಳಲ್ಲಿ ನಿರುದ್ಯೋಗವೂ ಒಂದು. ನಿರುದ್ಯೋಗ, ಬಡತನಗಳು ಮಹಿಳೆಯರನ್ನು ಅತಂತ್ರ ಸ್ಥಿತಿಗೆ ತಳ್ಳುವ ಮೂಲಕ ಲೈಂಗಿಕ ಶೋಷಣೆಗೆ ಗುರಿಮಾಡುವಂತಾಗಿದೆ. ಲೈಂಗಿಕ ಶೋಷಣೆಗೆ ಒಳಗಾದ ಮಹಿಳೆ ಅನಿವಾರ್ಯವಾಗಿ ವೇಶ್ಯಾವಾಟಿಕೆಯ ಜಾಲಕ್ಕೆ ಬೀಳುವಂತಹ ಅಸಾಹಯಕತೆ ಇದೆ. ಬ್ರಿಟೀಷ್ ಆಡಳಿತ ಪದ್ಧತಿಯು ಶಿಕ್ಷಣವೆಂಬುದು ಹುದ್ದೆ ಗಳಿಕೆಗಾಗಿ ಇರುವುದು ಎಂಬ ಭಾವನೆಯನ್ನು ಜಗತ್ತಿನಾದ್ಯಾಂತ ಬಿತ್ತಿತು. ಇದಕ್ಕೆ ಭಾರತವು ಹೊರತಾಗಿಲ್ಲ. ಜಾಗತಿಕವಾಗಿ ಜನಸಂಖ್ಯೆಯಲ್ಲಿ ಎರಡನೇ ಸ್ಥಾನದಲ್ಲಿರುವ ಜನಸಂಖ್ಯೆಗೆ ಸರಿಹೊಂದುವ ರೀತಿಯಲ್ಲಿ ಉದ್ಯೋಗಗಳನ್ನು ನಿರ್ಮಿಸುವಲ್ಲಿ ಸರ್ಕಾರಗಳು ಸೋತಿವೆ. ಹಾಗೆಯೇ ಜನರ ಬದುಕಿಗೆ ಅವಶ್ಯವಾದ ಕೌಶಲ್ಯಗಳನ್ನು ಕಲಿಸುವ ಶಿಕ್ಷಣ ವ್ಯವಸ್ಥೆಯ ಕೊರತೆ ಭಾರತದಂತಹ ರಾಷ್ಟ್ರಗಳಲ್ಲಿ ಅಧಿಕವಾಗಿದೆ ಎಂಬ ಮಾತುಗಳು ಕೇಳಿಬರುತ್ತಿದೆ. ಜನರು ಓದುವ ಪಠ್ಯಕ್ಕೂ ಜೀವನ ನಿರ್ವಹಣಾ ಕೌಶಲ್ಯಗಳಿಗೂ ಅಜಗಜಾಂತರ ವ್ಯತ್ಯಾಸಗಳಿವೆ. ತರಗತಿಯಲ್ಲಿ ಓದುವ ಪಠ್ಯವು ನಿಜಜೀವನದಲ್ಲಿ ಏನಕ್ಕೂ ಉಪಯೋಗಕ್ಕೆ ಬಾರದು ಎಂಬ ಮಾತನ್ನು ಶಿಕ್ಷಣ ತಜ್ಞರೇ ತಿಳಿಸುತ್ತಿರುವರು.

ಶಿಕ್ಷಣ ಪಡೆದು ಹೊರಬರುವ ಜನಸಮೂಹಕ್ಕೆ ಸಮಾನಾಂತರವಾಗಿ ಹುದ್ದೆಗಳು ಸೃಷ್ಟಿಯಾಗುತ್ತಿಲ್ಲ. ಸೃಷ್ಟಿಯಾಗುವ ಹುದ್ದೆಗಳು ಭ್ರಷ್ಟರ ಪಾಲಾಗುತ್ತಿವೆ. ಇಂತಹ ವ್ಯವಸ್ಥೆಯಲ್ಲಿ ಸಾಮಾನ್ಯ ಮಹಿಳೆಯು ಒಂದು ಯಾವುದೋ ತನಗಿಷ್ಟವಿರದ ಗಂಡನ್ನು ಮದುವೆಯಾಗಿ ನಾಲ್ಕು ಗೋಡೆಗಳ ಮಧ್ಯ ಬಂಧಿಯಾಗಬೇಕು, ಇಲ್ಲವೇ ಸಾರ್ವಜನಿಕವಾಗಿ ಹುರಿದುಮುಕ್ಕುವ ಗಂಡಸರ ದೈಹಿಕ ಆಕಾಂಕ್ಷೆಗಳನ್ನು ತೀರಿಸುವ ಲೈಂಗಿಕ ಕಾರ್ಯಕರ್ತೆಯಾಗಬೇಕು ಎಂಬಂತಹ ವಾತಾವರಣ ಸೃಷ್ಟಿಗೊಂಡಿದೆ. ಇಂತಹ ಅಸಾಹಾಯಕ ವಾತಾವರಣದಿಂದ ಬಂದ ಬಡಮಹಿಳೆಯರು ಜೀವನ ನಿರ್ವಹಣೆಗಾಗಿ ಸುಲಭವಾಗಿ ಹಣಗಳಿಸಬಲ್ಲ ಲೈಂಗಿಕ ಕಾರ್ಯಕರ್ತೆಯರಾಗಿ ಪರಿವರ್ತಿತರಾಗುತ್ತಿರುವರು. ಈ ಮಹಿಳೆಯರು ತಾವು ಮಾಡದ ತಪ್ಪಿಗೆ ಲೈಂಗಿಕ ಕಾರ್ಯಕರ್ತೆಯರಾಗಿ ಶಿಕ್ಷೆಯನ್ನು ಅನುಭವಿಸುವ ಸ್ಥಿತಿಯನ್ನು ಸಮಾಜವು ಸೃಷ್ಟಿಸಿದೆ. ಮಹಿಳೆಯರಿಗೆ ಸಂಬಂಧಿಸಿದಂತೆ ಪಂಚವಾರ್ಷಿಕ ಯೋಜನೆಗಳಲ್ಲಿ

ಮಹಿಳೆಯರಿಗಾಗಿಯೇ ಯೋಜನೆಗಳನ್ನು ಅನುಷ್ಠಾನಗೊಳಿಸಲು ನಿರ್ಣಯಗಳನ್ನು ಕೈಗೊಳ್ಳಲಾಗಿದೆ. ಅದರ ವಿವರಗಳು ಈ ಕೆಳಗಿನಂತಿದೆ.

**೭.೧: ಭಾರತದ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾಪರ ಅಭಿವೃದ್ಧಿ ಯೋಜನೆಗಳು**

ಸಾಮಾನ್ಯವಾಗಿ ಅಪರಚಿತರೊಂದಿಗಿನ ಲೈಂಗಿಕ ಸಂಪರ್ಕವು ಎಷ್ಟೋ ಗಂಭೀರವಾದ ರೋಗಗಳನ್ನು ದೇಹ ಹಂಚಿಕೊಂಡವರಿಗೆ ಹರಡುವ ಸಾಧ್ಯತೆ ಇರುತ್ತದೆ. ಈ ರೀತಿ ರೋಗ ಹರಡದಂತೆ ತಡೆಗಟ್ಟುವ ಸುಲಭ ಮಾರ್ಗ ನಿರೋಧಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ, ಇಲ್ಲವೇ ನೇರವಾಗಿ ಲೈಂಗಿಕ

**ಕೋಷ್ಟಕ ೭.೧: ಭಾರತದ ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳಾಪರ ಅಭಿವೃದ್ಧಿ ಯೋಜನೆಗಳು**

| **ಯೋಜನೆಗಳು** | **ಉದ್ದೇಶ ಮತ್ತು ಅನುಷ್ಠಾನ** |
|---|---|
| ಮೊದಲ ಪಂಚವಾರ್ಷಿಕ ಯೋಜನೆ (೧೯೫೧–೫೬) | ರಾಷ್ಟ್ರೀಯ ಅಭಿವೃದ್ಧಿಯಲ್ಲಿ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿ ಮುಖ್ಯವಾಹಿನಿಗೆ ತರುವುದು. |
| ಎರಡರಿಂದ ಐನೇ ಪಂಚವಾರ್ಷಿಕ ಯೋಜನೆಗಳು (೧೯೬೧–೧೯೭೯) | ಮಹಿಳೆಯರ ಶಿಕ್ಷಣ, ಮಹಿಳೆ ಮತ್ತು ಮಕ್ಕಳ ಆರೋಗ್ಯ, ಮಹಿಳೆ ಮತ್ತು ಮಕ್ಕಳ ಪೌಷ್ಠಿಕ ಆಹಾರಕ್ಕೆ ಒತ್ತುಕೊಡುವುದು |
| ಆರನೇ ಪಂಚವಾರ್ಷಿಕ ಯೋಜನೆ (೧೯೭೯–೮೪) | ಮಹಿಳಾ ಆರೋಗ್ಯ, ಶಿಕ್ಷಣ, ಸಬಲೀಕರಣಕ್ಕೆ ಪೂರಕವಾಗುವಂತೆ ಬಹುಶಿಸ್ತೀಯವಾದ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸುವುದು. |
| ಏಳನೇ ಪಂಚವಾರ್ಷಿಕ ಯೋಜನೆ (೧೯೮೫–೯೦) | ಮಹಿಳೆಯರ ಉದ್ಯೋಗ ಮತ್ತು ಆರ್ಥಿಕ ಸಾಮಾಜಿಕ ಅಭಿವೃದ್ಧಿಯ ಸ್ಥಿತಿಗತಿಗಳನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ಪ್ರಯತ್ನಿಸಿ ಮಹಿಳೆಯರನ್ನು ರಾಷ್ಟ್ರೀಯ ಅಭಿವೃದ್ಧಿಯ ಮುಖ್ಯವಾಹಿನಿಗೆ ಕೊಂಡೊಯ್ಯುವುದು |
| ಎಂಟನೇ ಪಂಚವಾರ್ಷಿಕ ಯೋಜನೆ (೧೯೯೨–೯೭) | ಮಹಿಳಾ ಪ್ರಗತಿಗೆ ಒತ್ತು ನೀಡುವುದು. |
| ಒಂಭತ್ತನೇ ಪಂಚವಾರ್ಷಿಕ ಯೋಜನೆ (೧೯೯೭–೨೦೦೨) | ಮಹಿಳೆ ಮತ್ತು ಮಹಿಳಾ ವಲಯಗಳಿಗೆ ಸಂಬಂಧಿಸಿದ ಸೇವೆಗಳನ್ನು ಮಹಿಳಾ ಸಬಲೀಕರಣಕ್ಕೆ ಪೂರಕವಾಗುವಂತೆ ಒಂದೆಡೆ ತಂದು ಅನುಷ್ಠಾನಗೊಳಿಸುವುದು |

| | |
|---|---|
| ಹತ್ತನೇ ಪಂಚವಾರ್ಷಿಕ ಯೋಜನೆ | ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸಬಲೀಕರಣಕ್ಕೆ ಕೊಂಡಯ್ಯಲು ಮಧ್ಯವರ್ತಿಯಾಗಿ ತಂತ್ರಗಳನ್ನು ರೂಪಿಸುವ ಮೂಲಕ ಮಹಿಳೆಯರಿಗೆ ನ್ಯಾಯ ಒದಗಿಸುವುದು. |
| ಹನ್ನೊಂದನೇ ಪಂಚವಾರ್ಷಿಕ ಯೋಜನೆ | ಲಿಂಗತಾರತಮ್ಯ ತೊಲಗಿಸಲು ಶಿಕ್ಷಣ ಮತ್ತು ಕೌಶಲ್ಯಾಭಿವೃದ್ಧಿ ಮೂಲಕ ಮಹಿಳಾ ಸಬಲೀಕರಣಗೊಳಿಸುವುದು ಹಾಗೆಯೇ ಮಹಿಳೆಯರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಸಬಲೀಕರಣಗೊಳಿಸಲು ಒತ್ತುನೀಡುವುದು. |
| ಹನ್ನೆರಡನೇ ಪಂಚವಾರ್ಷಿಕ ಯೋಜನೆ | ಮಹಿಳೆಯರ ಸಶಕ್ತತೆಗಾಗಿ ಲಿಂಗ ತಾರತಮ್ಯ ಹೋಗಲಾಡಿಸಲು ರಚನಾತ್ಮಕ ಮತ್ತು ಸಾಂಸ್ಥಿಕ ಅಡೆತಡೆಗಳನ್ನು ಪರಿಹರಿಸಿ ಮಹಿಳೆಯರನ್ನು ಮುಖ್ಯವಾಹಿನಿಗೆ ತರುವುದು |

ಕೃಪೆ: ಭಾರತಿ ಬಿ ಎಂ, ಭಾರತದಲ್ಲಿ ಮಹಿಳೆ, ೨೦೦೮, ಪು. ಸಂ. ೧೩೦)

ಕಾರ್ಯಕರ್ತೆಯರಿಗೆ ಹಂಚುವ ಯೋಜನೆಯೊಂದನ್ನು ಸರ್ಕಾರವು ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಹಮ್ಮಿಕೊಂಡಿದೆ. ಸಿಬ್ಬಂದಿಗಳ ಕೊರತೆ ಇರುವುದರಿಂದ ನಿರೋಧಗಳನ್ನು ವಿತರಿಸಲು ಸರ್ಕಾರೇತರ ಸಂಸ್ಥೆಗಳಿಗೆ ನಿರ್ಧಿಷ್ಟ ಅವಧಿಗೆಂದು ನೀಡಲಾಗಿದೆ.

೨೦೧೦ರಲ್ಲಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಲೈಂಗಿಕ ಕಾರ್ಯಕರ್ತೆಯರಿಗೆ ಹಂಚಿದ ನಿರೋಧಗಳ ಸಂಖ್ಯೆಯ ವಿವರ ಈ ಕೆಳಗಿನಂತಿದೆ.

### ೭.೨ ಕಾಂಡೋಮ್ ಪ್ರೋವಿಷನ್ ಪ್ರೋಗ್ರಾಂ

ನ್ಯಾಷನಲ್ ಏಯ್ಡ್ಸ್ ಕಂಟ್ರೋಲ್ ಪ್ರೋಗ್ರಾಮ್-೩ಕ್ಕೆ ಅನುಗುಣವಾಗಿ ಕರ್ನಾಟಕ ರಾಜ್ಯದಲ್ಲಿ ಮಧ್ಯವರ್ತಿಗಳ ಸಹಾಯದ ಮೂಲಕ ಉಚಿತವಾಗಿ ಕಾಂಡೋಮ್‌ಗಳನ್ನು ಹಂಚುವುದೇ ಕಾಂಡೋಮ್ ಪ್ರಾವಿಷನ್ ಪ್ರೋಗ್ರಾಮಿನ ಉದ್ದೇಶವಾಗಿದೆ. ಆ ಪ್ರಕಾರವಾಗಿ ೨೦೧೦ರಲ್ಲಿ ಉಚಿತವಾಗಿ ಯಾವ ಜಿಲ್ಲೆಯಲ್ಲಿ ಎಷ್ಟು ಕಾಂಡೋಮ್‌ಗಳನ್ನು ಹಂಚಲಾಯಿತು ಎಂಬುದರ ವಿವರವನ್ನು ಮೇಲಿನ ಕೋಷ್ಠಕದಲ್ಲಿ ತಿಳಿಸಲಾಗಿದೆ.

| ಕೋಷ್ಟಕ ೭.೨: ಕಾಂಡೋಂ ಪ್ರಾವಿಶನಿಂಗ್ ಪ್ರೋಗ್ರಾಂ(ನಿರೋಧ ಹಂಚಿಕಾ ಕಾರ್ಯಕ್ರಮ) | |
|---|---|
| ಜಿಲ್ಲೆಗಳು | ಲೈಂಗಿಕ ಕಾರ್ಯಕರ್ತೆಯರಿಗೆ ಹಂಚಿದ ನಿರೋಧ ಪಾಕೆಟ್‌ಗಳ ಸಂಖ್ಯೆ |
| ಬಾಗಲಕೋಟೆ | ೨೯,೫೩,೯೪೫ |
| ಬೆಂಗಳೂರು ನಗರ | ೬೧,೨೧,೬೦೨ |
| ಬೆಂಗಳೂರು ಗ್ರಾಮಾಂತರ | ೩,೮೬,೭೫೧ |
| ಬೆಳಗಾವಿ | ೨೯,೪೪,೦೭೩ |
| ಬಳ್ಳಾರಿ | ೧೧,೨೩,೯೬೧ |
| ಬೀದರ್ | ೨,೩೦,೦೭೪ |
| ಬಿಜಾಪುರ | ೧೨,೩೩,೩೩೮ |
| ಚಾಮರಾಜನಗರ | ೬೫,೧೬೩ |
| ಚಿಕ್ಕಬಳ್ಳಾಪುರ | ೪,೨೮,೭೭೦ |
| ಚಿಕ್ಕಮಗಳೂರು | ೩,೭೬,೬೫೪ |
| ಚಿತ್ರದುರ್ಗ | ೫,೭೪,೨೬೭ |
| ದಕ್ಷಿಣ ಕನ್ನಡ | ೪,೩೮,೩೯೫ |
| ದಾವಣಗೆರೆ | ೨,೭೪,೩೮೩ |
| ಧಾರವಾಡ | ೨,೧೧,೫೬೯ |
| ಗದಗ | ೧,೮೩,೬೭೧ |
| ಗುಲ್ಬರ್ಗಾ | ೭,೪೬,೩೦೭ |
| ಹಾಸನ | ೧,೯೦,೯೦೩ |
| ಹಾವೇರಿ | ೧,೮೧,೦೫೦ |
| ಕೊಡಗು | ೧,೬೨,೦೨೦ |
| ಕೋಲಾರ | ೨,೮೯,೩೪೮ |
| ಕೊಪ್ಪಳ | ೧,೭೫,೮೯೬ |
| ಮಂಡ್ಯ | ೨,೩೨,೯೪೫ |

| | |
|---|---|
| ಮೈಸೂರು | ೯,೧೭,೫೯೦ |
| ರಾಯಚೂರು | ೩,೦೬,೧೩೮ |
| ರಾಮನಗರ | ೨,೪೩,೪೮೩ |
| ಶಿವಮೊಗ್ಗ | ೪,೧೭,೩೧೦ |
| ತುಮಕೂರು | ೮,೭೮,೨೩೭ |
| ಉಡುಪಿ | ೭೧,೩೮೦ |
| ಉತ್ತರಕನ್ನಡ | ೧,೮೭,೦೭೧ |
| ಒಟ್ಟು | ೨,೨೫,೪೬,೨೯೪ |

(ಕೃಪೆ: ಏಡ್ಸ್ ನಿಯಂತ್ರಣ ಸಂಸ್ಥೆಯ ವಾರ್ಷಿಕ ವರದಿ ೨೦೧೭)

ನಗರ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಲೈಂಗಿಕ ಕಾರ್ಯಕರ್ತೆಯರಿರುವರು. ಅಷ್ಟೇ ಅಲ್ಲದೆ ಸಲಿಂಗ ಕಾಮಿಗಳಿರುವರೆಂದೂ ಅಂದಾಜಿಸಲಾಗಿದೆ. ಬೆಂಗಳೂರು ನಗರವೊಂದರಲ್ಲಿಯೇ ಈ ರೀತಿಯ ಸಲಿಂಗಕಾಮಿಗಳು ಶೇಕಡ ೧೯ರಷ್ಟಿರುವರೆಂದು ಅಂದಾಜಿಸಲಾಗಿದೆ. ೨೦೦೪ರಿಂದ ೨೦೧೧ರೊಳಗೆ ೨೪,೯೪೧ ಸಲಿಂಗಕಾಮಿಗಳನ್ನು ನೋಂದಾಯಿಸಿಕೊಳ್ಳಲಾಗಿದೆ. ಇವರಲ್ಲಿ ಶೇಕಡ ೧೧ರಷ್ಟು ಹಿಜಡಾಗಳು, ೨೯ರಷ್ಟು ಕೋತಿಗಳು, ೩೫ರಷ್ಟು ದ್ವಿಲಿಂಗಕಾಮಿಗಳು (ಡಬಲ್ ಡೆಕ್ಕರ್ಸ್). ಶೇಕಡ ೨೬ರಷ್ಟು ಜೋಗಪ್ಪಗಳು, ಶೇಕಡ ೩೪ರಷ್ಟು ೨೫ಕ್ಕಿಂತ ಕಡಿಮೆ ವಯೋಮಾನದವರಾಗಿರುವರು. ಶೇಕಡ ೧೪ರಷ್ಟು ಅನಕ್ಷರಸ್ಥರು, ಶೇಕಡ ೬೮ ಅವಿವಾಹಿತರು, ಶೇಕಡ ೨೧ ಮದುವೆಯಾಗಿರುವವರಾಗಿದ್ದಾರೆ.

**೭.೩ ಎಚ್.ಐ.ವಿ/ಏಡ್ಸ್ ಹರಡಲು ಇರುವ ಮುಖ್ಯ ಕಾರಣಗಳು**

- ಮಹಿಳಾ ಲೈಂಗಿಕ ಕಾರ್ಯಕರ್ತರ ಅಸುರಕ್ಷಿತ ಲೈಂಗಿಕ ಸಂಪರ್ಕ
- ಅಸುರಕ್ಷಿತ ಸಲಿಂಗ ಕಾಮ
- ಲೈಂಗಿಕ ಅಲ್ಪಸಂಖ್ಯಾತರ ಲೈಂಗಿಕ ಚಟುವಟಿಕೆ
- ಇಂಜೆಕ್ಷನ್ ಮೂಲಕ ಡ್ರಗ್ಸ್ ತೆಗೆದುಕೊಳ್ಳುವುದು ಎಚ್.ಐ.ವಿ/ಏಡ್ಸ್ ಹರಡಲು ಇರುವ ಮುಖ್ಯ ಕಾರಣಗಳೆಂದು ಗುರುತಿಸಲಾಗಿದೆ.

ಎಚ್.ಐ.ವಿ/ಏಡ್ಸ್ ನಿಯಂತ್ರಣವನ್ನು ತರಲು ಈ ಜಾಲವನ್ನು ಹುಡುಕಿ ಅಂತಹ ಜನರಿಗೆ ತಿಳುವಳಿಕೆ ನೀಡುವುದು, ಅವರಿರುವ ಜಾಲದಿಂದ ಅಂತಹ ವ್ಯಕ್ತಿಗಳನ್ನು ಹೊರತರುವುದು ಹಾಗೂ ರೋಗಪೀಡಿತರಿಗೆ ರೋಗ ಹರಡದಂತೆ ಎಚ್ಚರಿಕೆ ನೀಡಿ ಔಷಧೋಪಚಾರ ಮಾಡುವುದು. ಇದಕ್ಕಾಗಿಯೇ ಎಚ್.ಐ.ವಿ/ಏಡ್ಸ್ ನಿಯಂತ್ರಣ ಸಂಸ್ಥೆಯನ್ನು ಸರ್ಕಾರವು ರಚಿಸಿದೆ. ಸರ್ಕಾರ ಅಥವಾ ಸರ್ಕಾರದ

ನೌಕರರೊಬ್ಬರಿಂದ ಈ ರೀತಿಯ ಯೋಜನೆ ಕಾರ್ಯರೂಪಕ್ಕೆ ತಂದು ಅನುಷ್ಠಾನಗೊಳಿಸುವುದು ಕಷ್ಟಸಾಧ್ಯದ ವಿಚಾರ. ಹೀಗಾಗಿ ಯೋಜನೆಯ ಅನುಷ್ಠಾನಕ್ಕೆ ಸರ್ಕಾರೇತರ ಸಂಸ್ಥೆಗಳ ಬೆಂಬಲ ಪಡೆದು ಯೋಜನೆಯನ್ನು ಕಾರ್ಯರೂಪಕ್ಕಿಳಿಸಿದೆ.

**ಅವುಗಳಲ್ಲಿ ಮುಖ್ಯವಾಗಿ**

- ಕರ್ನಾಟಕ ರಾಜ್ಯ ಏಯ್ಡ್ಸ್ ನಿಯಂತ್ರಣ ಸಂಸ್ಥೆ (Karnataka State AIDS Prevention Society (KSAPS)
- ಕರ್ನಾಟಕ ಆರೋಗ್ಯ ಅಭಿವೃದ್ಧಿ ಟ್ರಸ್ಟ್ (Karnataka Health Promotion Trust (KHPT)
- ಮೊನಿಟೋಬಾ ವಿಶ್ವವಿದ್ಯಾಲಯ, ದಿಶಾ (University of Manitoba (UoM), Disha)
- ಭಾರತೀಯ ಸರಕು ಸರಬರಾಜು ಕಾರ್ಪೋರೇಷನ್ ಫೌಂಡೇಶನ್ (Transport Corporation of India Foundation (TCIF)

ಇವೆಲ್ಲವೂ ಸರ್ಕಾರದ ಆಧೀನ ಸಂಸ್ಥೆಗಳಾಗಿವೆ. ಇವುಗಳಾಚೆ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುವ ಸರ್ಕಾರೇತರ ಸಂಸ್ಥೆಗಳು ಈ ಯೋಜನೆಯಲ್ಲಿ ಕೈಜೋಡಿಸಿವೆ. ಮಹಿಳಾ ಲೈಂಗಿಕ ಕಾರ್ಯಕರ್ತರಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಿದ ಸರ್ಕಾರೇತರ ಸಂಸ್ಥೆಗಳು ಈ ಕೆಳಗಿನಂತಿವೆ.

**ಕೋಷ್ಟಕ ೭.೩: ಲೈಂಗಿಕ ಕಾರ್ಯಕರ್ತರಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಿದ ಸರ್ಕಾರೇತರ ಸಂಸ್ಥೆಗಳ ವಿವರ**

| ಕ್ರಸಂ | ಸರ್ಕಾರೇತರ ಸಂಸ್ಥೆಗಳು | ಕಾರ್ಯ ನಿರ್ವಹಿಸಿದ ಸ್ಥಳಗಳು |
|---|---|---|
| ೧ | ಜ್ಯೋತಿ ಮಹಿಳಾ ಸಂಘ | ಬೆಂಗಳೂರು |
| ೨ | ಸ್ವಾತಿ ಮಹಿಳಾ ಸಂಘ | ಬೆಂಗಳೂರು |
| ೩ | ವಿಜಯ ಮಹಿಳಾ ಸಂಘ | ಬೆಂಗಳೂರು |
| ೪ | ಜೀವನ ಸ್ಫೂರ್ತಿ | ಬಾಗಲಕೋಟೆ |
| ೫ | ಆಸರೆ | ಬೆಳಗಾವಿ |
| ೬ | ಕಾರ್ಡ್ಸ್ (ಸಹಚಾರ)/ಸಂಗಾತಿ) | ಮಂಗಳೂರು, ತುಮಕೂರು |
| ೭ | ಮೈರಾಡ | ಬಳ್ಳಾರಿ, ಕೋಲಾರ, ಚಿಕ್ಕಬಳ್ಳಾಪುರ |
| ೮ | ಸಹಭಾಗಿನಿ | ಚಿಕ್ಕಮಗಳೂರು |
| ೯ | ಹಿಂದ್ ಕುಷ್ಟ ನಿವಾರಣ್ ಸಂಘ | ಬೆಂಗಳೂರು |

| | | |
|---|---|---|
| ೧೦ | ಎಸ್ ವಿ ವೈ ಎಂ | ಹಾಸನ |
| ೧೧ | ಸ್ಟಪರ್ಡ್ಸ್ (STPRDS- FSW TI Bidar) | ಬೀದರ್ |
| ೧೨ | ಸಂರಕ್ಷಾ | ಕೊಪ್ಪಳ, ರಾಯಚೂರು |
| ೧೩ | ಸ್ಪಾಡ್ (SPAD ) | ಬೆಂಗಳೂರು |
| ೧೪ | ಬಿಸಿಟಿ (BCT) | ಧಾರವಾಡ, ಗದಗ |
| ೧೫ | ವಿ ಎಂ ಎಸ್ (ಗಿಒಖ ) | ಬೆಂಗಳೂರು ನಗರ |
| ೧೬ | ಜೆ ಎಂ ಎಸ್ | ಬೆಂಗಳೂರು |
| ೧೭ | ಎಚ್ ಕೆ ಎನ್ ಎಸ್ | ಮಂಗಳೂರು |
| ೧೮ | ಗಾರ್ಡ್ | ಉಡುಪಿ |
| ೧೯ | ಆಶಾಕಿರಣ | ಕೊಡಗು |
| ೨೦ | ಆಶೋದಯ ಸಮಿತಿ | ಕೊಡಗು, ಚಿಕ್ಕಮಗಳೂರು, ಗದಗ, ಹಾವೇರಿ, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಬೆಳಗಾವಿ |

(ಕೃಪೆ: ಆರೋಗ್ಯ ಇಲಾಖೆಯ ವರದಿ:೨೦೧೭)

ಇವುಗಳಲ್ಲದೆ ದೇವದಾಸಿಯರಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸುವ ಸಂಸ್ಥೆಗಳು ಈ ಕೆಳಗಿನಂತಿವೆ

೧೯ ದೇವದಾಸಿ ವಿಮೋಚನಾ ಸಂಸ್ಥೆ ಬೆಳಗಾವಿ, ಬಾಗಲಕೋಟೆ, ಕೊಪ್ಪಳ

೨೦ ಸಖೀ ಬಳ್ಳಾರಿ, ಬೆಂಗಳೂರು, ಮೈಸೂರು

ಬಹುತೇಕ ಈ ಸಂಸ್ಥೆಗಳು ಭಾರತ ಸರ್ಕಾರ, ಕರ್ನಾಟಕ ಸರ್ಕಾರಗಳ ಅನುದಾನಗಳಲ್ಲದೆ ಅಂತರಾಷ್ಟ್ರೀಯ ಮಟ್ಟದ ಸಂಸ್ಥೆಗಳಿಂದಲೂ ಅನುದಾನ ಪಡೆದು ಕಾರ್ಯನಿರ್ವಹಿಸುತ್ತಿವೆ.

**ಕೋಷ್ಟಕ ೭.೪: ಯೋಜನೆಗಳನ್ನು ಅನುಷ್ಠಾನಗೊಳಿಸಿದ ಸಂಸ್ಥೆಗಳು ಹಾಗೂ ಅವುಗಳಿಗೆ ಅನುದಾನ ನೀಡಿದ ಅಂತರಾಷ್ಟ್ರೀಯ, ರಾಷ್ಟ್ರೀಯ ಸಂಸ್ಥೆಗಳ ವಿವರ**

| ಕ್ರಸಂ | ಜಿಲ್ಲೆಗಳು | ಅನುದಾನ ನೀಡಿದ ಸಂಸ್ಥೆ | ಅನುಷ್ಠಾನಗೊಳಿಸಿದ ಸಂಸ್ಥೆಗಳು |
|---|---|---|---|
| ೧ | ಉಡುಪಿ | ಯುನಿಸೆಫ್ UNICEF | DAPCU , Udupi |
| ೨ | ಚಿಕ್ಕಮಗಳೂರು | ಯುನಿಸೆಫ್ UNICEF | Vikasana Samsthe |
| ೩ | ಕೊಪ್ಪಳ | ಯುನಿಸೆಫ್ UNICEF | Karuna Trust |

| | | | |
|---|---|---|---|
| ೪ | ರಾಯಚೂರು | ಯುನಿಸೆಫ್ UNICEF | SWASTI |
| ೫ | ಚಾಮರಾಜನಗರ | ಸಿಡಿಸಿ CDC | MYRADA |
| ೬ | ಮಂಡ್ಯ | ಸಿಡಿಸಿ CDC | MYRADA |
| ೭ | ಬೀದರ್ | ಸಿಡಿಸಿ CDC | MYRADA |
| ೮ | ಕೊಡಗು | ಸಿಡಿಸಿ CDC | MYRADA |
| ೯ | ಹಾಸನ | ಯುಸಯಿಡ್ USAID | SVYM |
| ೧೦ | ತುಮಕೂರು | ಯುಸಯಿಡ್ USAID | CARDTS |
| ೧೧ | ದಾವಣಗೆರೆ | ಯುಸಯಿಡ್ USAID | KHPT |
| ೧೨ | ಬೆಳಗಾವಿ | ಯುಸಯಿಡ್ USAID | BIRDS |
| ೧೩ | ಯಾದಗಿರಿ | ಯುಸಯಿಡ್ USAID | MYRADA and Darbar |
| ೧೪ | ಗುಲ್ಬರ್ಗಾ | ಯುಸಯಿಡ್ USAID | MYRADA and Darbar |
| ೧೫ | ಬಳ್ಳಾರಿ | ಯುಸಯಿಡ್ USAID | MYRAD and VIMUKTHI |
| ೧೬ | ರಾಮನಗರ | ಯುಸಯಿಡ್ USAID | SADHANE |
| ೧೭ | ಬಿಜಾಪುರ | ಯುಸಯಿಡ್ USAID | KHPT and URDSS |
| ೧೮ | ಮೈಸೂರು | ಯುಸಯಿಡ್ USAID | SVYM |
| ೧೯ | ಬಾಗಲಕೋಟೆ | ಯುಸಯಿಡ್ USAID | KHPT, URDSS, BIRDS |
| ೨೦ | ಧಾರವಾಡ | ಯುಸಯಿಡ್ USAID | BCT |
| ೨೧ | ಚಿಕ್ಕಬಳ್ಳಾಪುರ | ಯುಸಯಿಡ್ USAID | Swasti |
| ೨೨ | ಶಿವಮೊಗ್ಗ | ನ್ಯಾಕೊ–ಕೆಎಸ್‌ಎಪಿಎಸ್ | CCOORR NACO-KSAPS |
| ೨೩ | ಗದಗ | ನ್ಯಾಕೊ–ಕೆಎಸ್‌ಎಪಿಎಸ್ NACO-KSAPS | Samuha |
| ೨೪ | ಹಾವೇರಿ | ನ್ಯಾಕೊ–ಕೆಎಸ್‌ಎಪಿಎಸ್ NACO-KSAPS | CRDS |
| ೨೫ | ಬೆಂಗಳೂರು ಗ್ರಾಮೀಣ | ನ್ಯಾಕೊ–ಕೆಎಸ್‌ಎಪಿಎಸ್ NACO-KSAPS | KHPT |

| | | | |
|---|---|---|---|
| ೨೬ | ಉತ್ತರ ಕನ್ನಡ | ನ್ಯಾಕೊ–ಕೆಎಸ್ಎಪಿಎಸ್ NACO-KSAPS | CCOORR |
| ೨೭ | ದಕ್ಷಿಣ ಕನ್ನಡ | ನ್ಯಾಕೊ–ಕೆಎಸ್ಎಪಿಎಸ್ NACO-KSAPS | HEERA |
| ೨೮ | ಕೋಲಾರ | ನ್ಯಾಕೊ–ಕೆಎಸ್ಎಪಿಎಸ್ NACO-KSAPS | IYD |
| ೨೯ | ಚಿತ್ರದುರ್ಗ | ನ್ಯಾಕೊ–ಕೆಎಸ್ಎಪಿಎಸ್ NACO-KSAPS | GRAMA |

(ಕೃಪೆ: ಆರೋಗ್ಯ ಇಲಾಖೆಯ ವಾರ್ಷಿಕ ವರದಿ:೨೦೧೭ )

ಲೈಂಗಿಕ ಕಾರ್ಯಕರ್ತೆಯರ ಕುರಿತು ನೇರವಾಗಿ ಯೋಜನೆಗಳು ಇಲ್ಲವೆಂಬಷ್ಟು ಕಡಿಮೆ. ಲೈಂಗಿಕ ಕಾರ್ಯಕರ್ತೆಯರಿಗೆಂದು ಕೆಲವೊಂದು ಯೋಜನೆಗಳಿದ್ದರೂ ನೇರವಾಗಿ ತಾವು ಲೈಂಗಿಕ ಕಾರ್ಯಕರ್ತೆಯರೆಂದು ಹೇಳಿಕೊಂಡು ಯೋಜನೆಗಳ ಫಲಾನುಭವಿಗಳಾಗಲು ಯಾವೊಬ್ಬ ಮಹಿಳೆಯೂ ಮುಂದೆಬರುವುದಿಲ್ಲ. ಹೀಗಾಗಿ ಲೈಂಗಿಕ ಕಾರ್ಯಕರ್ತರಿಗೆಂದೇ ಇರುವ ಯೋಜನೆಗಳು ಸೋತಿವೆಯೆಂದು ಹೇಳಲಾಗುವುದು. ಆದರೆ ಮಹಿಳೆಯರನ್ನು ಸಬಲೀಕರಣ ಮಾಡಲೆಂಬ ಉದ್ದೇಶದಿಂದ ಹಲವು ಯೋಜನೆಗಳನ್ನು ರಾಷ್ಟ್ರ ಹಾಗೂ ರಾಜ್ಯಮಟ್ಟದಲ್ಲಿ ಹಮ್ಮಿಕೊಳ್ಳಲಾಗಿದೆ. ಅಂತಹ ಯೋಜನೆಗಳ ವಿವರ ಈ ಕೆಳಗೆ ನೀಡಲಾಗಿದೆ.

**೭.೫: ಮಹಿಳೆ ಮತ್ತು ಮಕ್ಕಳ ಅಕ್ರಮ ಸಾಗಾಣಿಕೆ ತಡಗಟ್ಟುವ ಯೋಜನೆ**

ನಗರ ಹಾಗೂ ಗ್ರಾಮೀಣ ಪ್ರದೇಶದ ಮಹಿಳೆಯರು ಹಾಗೂ ಅಪ್ರಾಪ್ತ ವಯಸ್ಸಿನ ಹುಡುಗಿಯರನ್ನು ಅಕ್ರಮವಾಗಿ ಸಾಗಾಣಿಕೆ ಮಾಡುವ ಗುಂಪುಗಳಿವೆ. ಈ ವ್ಯವಸ್ಥೆಯಲ್ಲಿ ಭೂಗತ ಲೋಕದ ಜನರಿಂದ ಹಿಡಿದು ದೊಡ್ಡ ದೊಡ್ಡ ಶ್ರೀಮಂತರೂ ಶಾಮೀಲಾಗಿರುತ್ತಾರೆಂಬುದನ್ನು ಸುದ್ದಿ ಮಾಧ್ಯಮಗಳು ಆಗಾಗ್ಗೆ ಬಿತ್ತರಿಸುತ್ತಲೇ ಇರುತ್ತವೆ. ಅಕ್ರಮ ಸಾಗಾಣಿಕೆಯ ಜಾಲಕ್ಕೆ ಬಡವರು, ಉದ್ಯೋಗಾಕಾಂಕ್ಷಿ ಮಹಿಳೆಯರು ಹಾಗೂ ಹೊರಜಗತ್ತನ್ನು ಕೇವಲ ಕೌತುಕದಿಂದ ನೋಡುವ ಮುಗ್ಧ ಬಾಲಕಿಯರು ಈಡಾಗುವುದೇ ಹೆಚ್ಚು. ಅಕ್ರಮ ಸಾಗಾಣಿಕೆಯ ಜಾಲದೊಳಗೆ ಸಿಲುಕುವವರೆಗೂ ಮಹಿಳೆಯರನ್ನು ಕೇವಲ ಭ್ರಮಾಲೋಕದೊಳಗೆ ಅಕ್ರಮ ಸಾಗಾಣೆದಾರರು ಇರಿಸಿರುತ್ತಾರೆ. ಒಂದೊಮ್ಮೆ ಆ ಬಲೆಗೆ ಬಿದ್ದ ತರುವಾಯವಷ್ಟೇ ತಾವೆಂತಹ ಕೂಪಕ್ಕೆ ತಳ್ಳಲ್ಪಟ್ಟಿದ್ದೇವೆ ಎಂಬ ಅರಿವು ಮಹಿಳೆಯರಿಗೆ ಉಂಟಾಗುವುದು. ಮಹಿಳೆರಿಗೆ ಸಾಮಾಜಿಕವಾಗಿ ಉಂಟಾಗುತ್ತಿರುವ ಇಂತಹ ಕಿರುಕುಳಗಳಿಂದ ಪಾರುಮಾಡಬೇಕೆಂಬ ಉದ್ದೇಶದಿಂದ ಮಹಿಳೆ ಮತ್ತು ಮಕ್ಕಳ ಅಕ್ರಮ ಸಾಗಾಣಿಕೆ ತಡೆಗೆ ಹತ್ತುಹಲವು ಯೋಜನೆಗಳನ್ನು ಸರ್ಕಾರ ಹಮ್ಮಿಕೊಂಡಿದೆ. ವಿಶೇಷವಾಗಿ ಗ್ರಾಮೀಣ ಪ್ರದೇಶದ ಮಹಿಳೆಯರಿಗೆ

ಈ ವಿಚಾರದ ಬಗ್ಗೆ ಮನದಟ್ಟಾಗುವಂತೆ ಪ್ರತಿ ತಾಲೂಕು ಹಾಗೂ ಗ್ರಾಮ ಪಂಚಾಯತಿ ಮಟ್ಟದಲ್ಲಿ ಒಂದು ದಿನದ ಮಟ್ಟಿಗಾದರೂ ಬೀದಿ ನಾಟಕ, ಜಾಥಾ, ಬೀದಿ ನಾಟಕ, ರ್‍ಯಾಲಿಗಳ ಮೂಲಕ ಮಹಿಳೆಯರಿಗೆ ಜಾಗೃತಿ ಮೂಡಿಸುವ ಉದ್ದೇಶ ಈ ಯೋಜನೆಯದ್ದಾಗಿದೆ. ಇದನ್ನು ಸರ್ಕಾರಿ ಸಂಸ್ಥೆಗಳು ಸರ್ಕಾರೇತರ ಸಂಸ್ಥೆಗಳೊಂದಿಗೆ ಸೇರಿ ಮಾಡುವ ಕಾರ್ಯಕ್ರಮಗಳು ಇವಾಗಿರುತ್ತವೆ. ಆದರೆ ಈ ಯೋಜನೆಯು ಬುಡಕಟ್ಟು ಸಮುದಾಯಗಳ ಮಧ್ಯ ಜಾಗೃತಿ ಉಂಟುಮಾಡುವುದು ಕಷ್ಟಸಾಧ್ಯದ ಕಾರ್ಯವಾಗಿದೆ. ಬೀದಿ ನಾಟಕ, ರ್‍ಯಾಲಿ, ಜಾಥಾಗಳನ್ನು ಅನುಷ್ಠಾನಗೊಳಿಸುವ ಸರ್ಕಾರೇತರ ಸಂಸ್ಥೆಗಳು ಜನರಲ್ಲಿ ಜಾಗೃತಿ ಮೂಡಿಸುವ ಆಸಕ್ತಿಗಿಂತ ತಮಗೆ ಸರ್ಕಾರದಿಂದ ದೊರೆಯುವ ಅನುದಾನದ ಕಡೆಗೇ ಹೆಚ್ಚು ಲಕ್ಷ್ಯವಹಿಸುತ್ತವೆ ಎಂಬ ಭಾವನೆ ಜನಸಾಮಾನ್ಯರಲ್ಲಿದೆ. ಯಾವುದೋ ಒಂದು ಮೂಲೆಯಲ್ಲಿ ಬೀದಿನಾಟಕವಾಡಿದರೆ ಬುಡಕಟ್ಟುಗಳಿಗೆ ಆ ಕಾರ್ಯಕ್ರಮಗಳು ತಲುಪುವುದಾದರೂ ಹೇಗೆ? ವಿಶೇಷವಾಗಿ ಅಲೆಮಾರಿ ಗುಂಪುಗಳಾಗಿ ಅಲೆದಾಡುವ ಪ್ರತ್ಯೇಕವಾಗಿ ನೆಲೆಸುವ ಡುಂಗ್ರಿಗರಾಸಿಯಾ ಹಾಗೂ ಪಾರ್ಧಿ ಸಮುದಾಯಗಳಿಗೆ ಈ ಯೋಜನೆಯ ಆಶಯಗಳು ತಲುಪುವುದು ಕಷ್ಟವೇ ಸರಿ. ಹಾಗೆಯೇ ಈ ಸಮುದಾಯದ ಮಹಿಳೆಯರು ತಮ್ಮ ಗುಂಪುಗಳಲ್ಲಿ ಮಾತ್ರ ಇರುವವರಾದ್ದರಿಂದ ಈ ಸಮುದಾಯದ ಮಹಿಳೆಯರನ್ನು ಅಕ್ರಮವಾಗಿ ಸಾಗಿಸುವುದು ಅಷ್ಟು ಸುಲಭದ ಕಾರ್ಯವಲ್ಲ.

**೭.೬ ಮಹಿಳಾ ತರಬೇತಿ ಮತ್ತು ಮಹಿಳಾ ಉದ್ಯೋಗ ಕಾರ್ಯಕ್ರಮ**

ಈ ಯೋಜನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯವು ನಡೆಸುತ್ತಿದೆ. ಈ ಯೋಜನೆಯು ೧೯೮೬-೮೭ ರಿಂದ ಜಾರಿಯಲ್ಲಿದ್ದು ಈ ಯೋಜನೆಯನ್ನು ಸೆಂಟ್ರಲ್ ಸೆಕ್ಟರ್ ಯೋಜನೆ ಎಂದು ಸಹ ಕರೆಯಲಾಗುತ್ತದೆ. ಈ ಯೋಜನೆಯು ೧೦೦% ಕೇಂದ್ರ ವಲಯ ಯೋಜನೆಯಾಗಿದೆ. ಬಡ ಮತ್ತು ಅಂಚಿನಲ್ಲಿರುವ ಮಹಿಳೆಯರಿಗೆ ಸಾಂಪ್ರದಾಯಿಕ ವಹಿವಾಟುಗಳಲ್ಲಿ ಹೆಚ್ಚಾಗಿ ಅನೌಪಚಾರಿಕ ವಲಯದಲ್ಲಿ ತರಬೇತಿ ನೀಡಲಾಗುತ್ತದೆ. ಔಪಚಾರಿಕ ಕೌಶಲ್ಯ ತರಬೇತಿಯ ಅವಕಾಶವಿಲ್ಲದ ಬಡ ಮಹಿಳೆಯರ ಔದ್ಯೋಗಿಕ ಆಕಾಂಕ್ಷೆಗಳನ್ನು ಪರಿಹರಿಸಲು ಸ್ಟೆಪ್ ಕಾರ್ಯಕ್ರಮವನ್ನು ಪರಿಚಯಿಸಲಾಗಿದೆ. ಈ ಯೋಜನೆಯು ದೇಶದಾದ್ಯಂತ ೧೬ ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ವಯಸ್ಸಿನ ಮಹಿಳೆಯರಿಗೆ ಪ್ರಯೋಜನೆಯನ್ನು ಒದಗಿಸುತ್ತದೆ. ಉತ್ಪಾದಕತೆ ಹೆಚ್ಚಿಸುವ ಮತ್ತು ಆದಾಯದ ಚಟುವಟಿಕೆಗಳನ್ನು ತೆಗೆದುಕೊಳ್ಳಲು ಅನುವು ಮಾಡಿಕೊಡುವ ಮೂಲಕ ಮಹಿಳೆಯರ ಸ್ವಾವಲಂಬನೆ ಮತ್ತು ಸಬಲೀಕರಣದ ಗುರಿಯನ್ನು ಪ್ರತಿಪಾದಿಸುತ್ತದೆ. ಕೃಷಿ, ತೋಟಗಾರಿಕೆ, ಆಹಾರ ಸಂಸ್ಕರಣೆ, ಕಸೂತಿ, ಟೈಲರಿಂಗ್, ಹೊಲಿಗೆ, ಕರಕುಶಲ ವಸ್ತುಗಳು ಹೀಗೆ ಇತ್ಯಾದಿಗಳಲ್ಲಿ ವೃತ್ತಿ ತರಬೇತಿಯನ್ನು ನೀಡಲಾಗುತ್ತದೆ.

**ಉದ್ದೇಶ:**

- ಮಹಿಳೆಯರಿಗೆ ಉದ್ಯೋಗ ನೀಡುವ ಕೌಶಲ್ಯಗಳನ್ನು ಒದಗಿಸುವುದು.
- ಮಹಿಳೆಯರಿಗೆ ಸ್ವಯಂ ಉದ್ಯೋಗಿ/ ಉದ್ಯಮಿಗಳು ಆಗಲು ಅನುಕೂಲವಾಗುವ ಸಾಮರ್ಥ್ಯ ಮತ್ತು ಕೌಶಲ್ಯಗಳನ್ನು ಒದಗಿಸಲು

• ಬಡ ಮತ್ತು ಅಂಚಿನಲ್ಲಿರುವ ಮಹಿಳೆಯರ ಕೌಶಲ್ಯಗಳನ್ನು ನವೀಕರಿಸಲು

• ಸಮರ್ಥನೀಯ ಆಧಾರದ ಮೇಲೆ ಅವರಿಗೆ ಉದ್ಯೋಗ ಒದಗಿಸುವುದು.

**ಅರ್ಹತೆ**

೧೬ ವರ್ಷ ಮೇಲ್ಪಟ್ಟ ವಯಸ್ಸಿನ ಎಲ್ಲಾ ಮಹಿಳೆಯರು ಫಲಾನುಭವಿಗಳು ಹೀಗೆ ಈ ಯೋಜನೆಯು ಮಹಿಳಾ ಮತ್ತು ಮಕ್ಕಳಾ ಅಭಿವೃದ್ಧಿ ಇಲಾಖೆ ಭಾರತ ಸರಕಾರ ಅಡಿಯಲ್ಲಿ ನಡೆಯುತ್ತಿದ್ದು ಪರಿಣಾಮಕಾರಿಯಾಗಿ ಮಹಿಳೆಯರನ್ನು ಸ್ವಾವಲಂಭಿಗಳನ್ನಾಗಿಸುವತ್ತಾ ಒಂದು ದೊಡ್ಡ ಮಹತ್ವದ ಹೆಜ್ಜೆಯಾಗಿ ಗುರುತಿಸಿಕೊಂಡಿದೆ.

**ಉಜ್ವಲ್ ಯೋಜನೆ**

ಲೈಂಗಿಕ ಶೋಷಣೆಗೆ ಒಳಗಾದ ಮಕ್ಕಳು/ಮಹಿಳೆಯರ ರಕ್ಷಣೆ, ಆರೈಕೆ ಮತ್ತು ಅವರನ್ನು ಕುಟುಂಬದ ಜೊತೆ ಜೋಡಿಸುವ ಯೋಜನೆ, ಹೆಣ್ಣು ಮಕ್ಕಳು ಮತ್ತು ಮಹಿಳೆಯರ ಅಕ್ರಮ ಸಾಗಾಣಿಕೆ ಮತ್ತು ಬಲತ್ಕಾರವಾದ ಲೈಂಗಿಕತೆ ಇಂತಹ ದೌರ್ಜನ್ಯವನ್ನು ತಡೆಯುವುದಕ್ಕೊಸ್ಕರ ಸಮಾಜದಲ್ಲಿ ಸಾರ್ವಜನಿಕರಿಗೆ ಮಹಿಳೆಯರ ಪರವಾಗಿ ಗೌರವಯುತ ಭಾವನೆಯನ್ನು ತರುವಂತೆ ಮತ್ತು ಲೈಂಗಿಕ ಬಲತ್ಕಾರ ಮತ್ತು ಶೋಷಣೆಯ ವಿರುದ್ದ ಜಾಗೃತಿ ಮೂಡಿಸುವಲ್ಲಿ ಈ ಯೋಜನೆ ಶ್ರಮಿಸುತ್ತದೆ. ಇಂತಹ ಸಮಸ್ಯೆಗೆ ಸಿಲುಕಿದಂತಹ ಮಹಿಳೆಯರ ರಕ್ಷಣೆ ಮತ್ತು ಅವರಿಗೆ ಸಮಾಜದಲ್ಲಿ ಸ್ಥಾನಮಾನ ಕಲ್ಪಿಸುವಲ್ಲಿ ದೇಶದ ಗಡಿ ಪ್ರದೇಶದಲ್ಲಿ ಈ ಸಮಸ್ಯೆಗೆ ಒಳಗಾದಂತಹ ಮಹಿಳೆಯರನ್ನು ಅವರ ಸ್ವದೇಶಕ್ಕೆ ಮರಳುವಂತೆ ವಸತಿ ವ್ಯವಸ್ಥೆ, ಊಟೋಪಚಾರ, ಮೂಲಭೂತ ಸೌಕರ್ಯಗಳ ಒದಗಿಸುವುದು ಹೀಗೆ ಹಲವು ಸೇವೆಗಳನ್ನು ಕಲ್ಪಿಸಲಾಗುತ್ತಿದೆ. ಈ ಯೋಜನೆಯನ್ನು ಸಮಾಜ ಕಲ್ಯಾಣ ಇಲಾಖೆ, ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಮಹಿಳಾ ಅಭಿವೃದ್ದಿ ನಿಗಮಗಳು, ಇತರೆ ಸ್ವಯಂ ಸೇವಾ ಸಂಸ್ಥೆಗಳು ಅನುಷ್ಟಾನ ಮಾಡುತ್ತಿವೆ.

**ವುಮೆನ್ ಹೆಲ್ಪ್‌ಲೈನ್ ಯೋಜನೆ**

ಈ ಯೋಜನೆಯು ಮಹಿಳಾ ಸಾರ್ವಭೌಮತ್ವದ ಯೋಜನೆಯಾಗಿದೆ. ಇದು ದಿನದ ೨೪ ಗಂಟೆಗಳ ಕಾಲ ಹಿಂಸೆಗೆ ಒಳಗಾದ ಮಹಿಳೆಯರಿಗೆ ತಕ್ಷಣದ ಮತ್ತು ತುರ್ತು ಪ್ರತಿಕ್ರಿಯೆ ನೀಡುವ ಉದ್ದೇಶವನ್ನು ಈ ಯೋಜನೆ ಹೊಂದಿದೆ. ೦೧-೦೪-೨೦೧೫ ರಿಂದ ಕೇಂದ್ರ ಮತ್ತು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಈ ಯೋಜನೆ ಜಾರಿಗೊಳಿಸಲಾಗುತ್ತಿದೆ. ಹಿಂಸೆಗೆ ಒಳಗಾದ ಮಹಿಳೆಯರಿಗೆ ಸಮಗ್ರ ಬೆಂಬಲ ಮತ್ತು ನೆರವು ಒದಗಿಸಲು, ಖಾಸಗಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಒಂದೇ ಛಾವಣಿಯಡಿಯಲ್ಲಿ ಹಿಂಸಾಚಾರದಿಂದ ಮತ್ತು ಮಹಿಳೆಯರ ಸಮಸ್ಯೆಗಳಿಗೆ ಅಗತ್ಯವಿರುವ ಸೌಲಭ್ಯಗಳನ್ನು ಒದಗಿಸುವುದು, ನೈತಿಕ ಸ್ಥೈರ್ಯವನ್ನು ತುಂಬುವ ಕೆಲಸವನ್ನು ಈ ಯೋಜನೆ ಕಾರ್ಯನಿರ್ವಹಿಸುತ್ತದೆ. ಈ ಯೋಜನೆಯಡಿಯಲ್ಲಿ 'ರಾಜ್ಯಗಳು/ಕೇಂದ್ರ ಸರ್ಕಾರಗಳು

ತಮ್ಮ ಅಸ್ತಿತ್ವದಲ್ಲಿರುವ ಮಹಿಳಾ ಸಹಾಯವಾಣಿಗಳನ್ನು ಸಮರ್ಪಕ ಏಕೈಕ ರಾಷ್ಟ್ರೀಯ ಸಂಖ್ಯೆಯ ಮೂಲಕ ಬಳಸಿಕೊಳ್ಳುತ್ತವೆ.

**ಉದ್ದೇಶ**

ಬೆಂಬಲ ಮತ್ತು ಮಾಹಿತಿಗಾಗಿ ಹಿಂಸೆಗೆ ಒಳಗಾದ ಮಹಿಳೆಯರಿಗೆ ಟೋಲ್ ಫ್ರೀ ೨೪ ಗಂಟೆಗಳ ಕಾಲ ಟೆಲಿಕಾಮ್ ಸೇವೆಗಳನ್ನು ಒದಗಿಸುವುದು.

**ಅರ್ಹತೆ**

ಸಾರ್ವಜನಿಕ ಅಥವಾ ಖಾಸಗಿ ಕ್ಷೇತ್ರದ ವ್ಯಾಪ್ತಿಯಲ್ಲಿ ಹಿಂಸಾಚಾರ ಎದುರಿಸುತ್ತಿರುವ ಮಹಿಳೆಯರು

**ಪ್ರಯೋಜನಗಳು**

ಮಹಿಳೆಯರಿಗೆ ವಿರುದ್ಧವಾದ ಹಿಂಸಾಚಾರ ತಡೆಗಟ್ಟುವಿಕೆ: ಅನ್ಯಾಯಕ್ಕಿಡಾದ ಮಹಿಳೆಯ ಪರವಾಗಿ ಯಾರೊಬ್ಬರು ವುಮೆನ್ ಹೆಲ್ಪ್ ಲೈನ್‌ನ್ನು ಸಂಪರ್ಕಿಸುತ್ತಾರೆಯೋ ಅಲ್ಲಿಗೆ ನೇಮಕವಾದ ಕರೆ ಪ್ರತಿಕ್ರಿಯೆಯಿಂದ ಅವಳು ಕೂಡಲೇ ನೆರವಾಗುತ್ತಾರೆ.

ಮಹಿಳಾ ಸಬಲೀಕರಣ ಯೋಜನೆಗಳು ಮತ್ತು ಕಾರ್ಯಕ್ರಮಗಳ ಮಾಹಿತಿ: ಮಹಿಳಾ ಸಬಲೀಕರಣ ಮತ್ತು ರಕ್ಷಣೆಗೆ ಸಂಬಂಧಿಸಿದ ಕಾನೂನುಗಳು ಅಸ್ತಿತ್ವದಲ್ಲಿರುವ ಯೋಜನೆಗಳು ಮತ್ತು ಸರ್ಕಾರಿ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಈ ಯೋಜನೆಗಳು ಮತ್ತು ಕಾರ್ಯಕ್ರಮಗಳ ಪ್ರಯೋಜನೆಗಳನ್ನು ಪಡೆದುಕೊಳ್ಳುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಮಹಿಳೆಯರಿಗೆ ಇದು ಸಹಾಯ ಮಾಡುತ್ತದೆ.

ಹೀಗೆ ಈ ಯೋಜನೆಯ ಮೂಲಕ ಹಿಂಸೆಗೆ ಒಳಗಾದ ಮಹಿಳೆಯರಿಗೆ ನೈತಿಕ ಶಕ್ತಿಯನ್ನು ತುಂಬುವ ಕೆಲಸವನ್ನು ಈ ಯೋಜನೆ ಸಹಾಯಕವಾಗಿದೆ.

**ಒನ್ ಸ್ಟಾಪ್ ಸೆಂಟರ್ ಯೋಜನೆ**

ಪುರುಷಶಾಹಿ ಜಗತ್ತಿನಲ್ಲಿ ಮಹಿಳೆಯರಿಗೆ ದೈಹಿಕವಾಗಿ, ಮಾನಸಿಕವಾಗಿ, ಲೈಂಗಿಕವಾಗಿ ಹಿಂಸೆ ನೀಡುವಂತಹ ಕೃತ್ಯಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಮಹಿಳೆಯರ ಮೇಲೆ ದಬ್ಬಾಳಿಕೆ, ಬೆದರಿಕೆಗಳನ್ನು ಮಾಡುವ ಪುರುಷರು ಸಾರ್ವಜನಿಕವಾಗಿಯೋ, ಖಾಸಗಿಯಾಗಿಯೋ ಮಹಿಳಾ ಸ್ವಾತಂತ್ರ್ಯಕ್ಕೆ ಚ್ಯುತಿ ಬರುವ ರೀತಿಯಲ್ಲಿ ನಡೆದುಕೊಳ್ಳುವುದೇ ಹೆಚ್ಚು. ಇದೊಂದು ಜಾಗತಿಕ ಜಾಡ್ಯ. ಇದಕ್ಕೆ ಭಾರತವೂ ಹೊರತಲ್ಲ. ಭಾರತದಲ್ಲಿ ಲಿಂಗ ಆಧಾರಿತ ಹಿಂಸೆ ಅನೇಕ ಮುಖಗಳನ್ನು ಹೊಂದಿದೆ. ಅತ್ಯಾಚಾರ, ಗೌರವಾನ್ವಿತ ಹತ್ಯೆ, ಆಸಿಡ್ ದಾಳಿಗಳು, ಲೈಂಗಿಕ ಕಿರುಕುಳ, ಮಕ್ಕಳ ಲೈಂಗಿಕ ದುರುಪಯೋಗ, ವಾಣಿಜ್ಯ ಲೈಂಗಿಕ ಶೋಷಣೆ, ಮಹಿಳೆಯರ ಕಳ್ಳಸಾಗಾಣಿಕೆ, ಮಹಿಳಾ ಅಪಹರಣ, ಬಾಲ್ಯವಿವಾಹ ಇತ್ಯಾದಿಗಳ ಮೂಲಕ ನೋಡುತ್ತೇವೆ. ಈ ರೀತಿಯ ಶೋಷಣೆಯನ್ನು

ತಪ್ಪಿಸುವ ಉದ್ದೇಶವನ್ನು ಒನ್ ಸ್ಟಾಪ್ ಸೆಂಟರ್ ಯೋಜನೆ ಒಳಗೊಂಡಿದೆ. 'ಸಖಿ' ಎಂದು ಜನಪ್ರಿಯವಾಗಿ ಕರೆಯಲಾಗುವ ಈ ಯೋಜನೆಯನ್ನು ಏಪ್ರೀಲ್ ೧, ೨೦೧೫ ರಿಂದ ಜಾರಿಗೆಗೊಳಿಸಲಾಗಿದೆ. ಹಿಂಸೆಗೆ ಒಳಗಾದ ಮಹಿಳೆಯರಿಗೆ ಒಂದು ಹಂತದಡಿಯಲ್ಲಿ ಸಮಗ್ರ ಬೆಂಬಲ ಮತ್ತು ಸಹಾಯವನ್ನು ಒದಗಿಸಲು ಈ ಕೇಂದ್ರಗಳನ್ನು ದೇಶದ್ಯಾದಂತ ಸ್ಥಾಪಿಸಲಾಗಿದೆ.

**ಉದ್ದೇಶ**

ಒನ್ ಸ್ಟಾಪ್ ಕೇಂದ್ರಗಳು ಹಿಂಸೆ, ಖಾಸಗಿ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಕುಟುಂಬ, ಸಮುದಾಯ ಮತ್ತು ಕೆಲಸ ಮಾಡುವ ಸ್ಥಳದಲ್ಲಿ ಉಂಟಾಗುವ ಕಿರುಕುಳ ಇವೆಲ್ಲವುಗಳಿಂದಲೂ ಮಹಿಳೆಯರನ್ನು ಪಾರುಮಾಡುವ ಉದ್ದೇಶವನ್ನು ಈ ಯೋಜನೆ ಹೊಂದಿದೆ. ಮಹಿಳೆಯರ ವಯಸ್ಸು, ವರ್ಗ, ಜಾತಿ, ಶಿಕ್ಷಣ, ವೈವಾಹಿಕ ಸ್ಥಿತಿ, ಸಂಸ್ಕೃತಿಯ ಹೊರತಾಗಿ ದೈಹಿಕ, ಲೈಂಗಿಕ, ಭಾವನಾತ್ಮಕ, ಮಾನಸಿಕ ಮತ್ತು ಆರ್ಥಿಕ ದುರ್ಬಳಕೆ ಎದುರಿಸುತ್ತಿರುವ ಮಹಿಳೆಯರು ಈ ಯೋಜನೆಯ ಮೂಲಕ ಬೆಂಬಲ ಮತ್ತು ಪರಿಹಾರ ಪಡೆಯಬಹುದು.

**ಗುರಿಗಳು**

ಹಿಂಸೆಗೆ ಒಳಗಾದ ಮಹಿಳೆಯರಿಗೆ ಸಮಗ್ರ ಬೆಂಬಲ ಮತ್ತು ನೆರವು ಒದಗಿಸುವುದು, ಮಹಿಳೆಯರಿಗೆ ಯಾವುದೇ ರೀತಿಯ ಹಿಂಸೆಯ ವಿರುದ್ಧ ಹೋರಾಡಲು ಒಂದು ಸೂರಿನಡಿ ವೈದ್ಯಕೀಯ, ಕಾನೂನು, ಮಾನಸಿಕ ಮತ್ತು ಸಮಾಲೋಚನೆ (ಕೌನ್ಸೆಲಿಂಗ್) ಮೂಲಕ ಬೆಂಬಲ ನೀಡಿ ಪರಿಹಾರಗಳನ್ನು ಸೂಚಿಸುವುದು ಹಾಗೂ ಸಹಾಯವನ್ನು ಮಾಡುವುದಾಗಿದೆ.

**ಟಾರ್ಗೆಟ್ ಗುಂಪು**

ಎಲ್ಲಾ ಜಾತಿ ವರ್ಗದವರು, ಧರ್ಮ, ಪ್ರದೇಶ, ಲೈಂಗಿಕ ದೃಷ್ಟಿಕೋನ ಅಥವಾ ವೈವಾಹಿಕ ಸ್ಥಾನಮಾನದ ಹೊರತಾಗಿ ಹಿಂಸೆಗೆ ಒಳಪಟ್ಟ ೧೮ ವರ್ಷಕ್ಕಿಂತ ಕಡಿಮೆ ವಯಸ್ಸಿನ ಹುಡುಗಿಯರನ್ನು ಒಳಗೊಂಡಂತೆ ಎಲ್ಲಾ ಮಹಿಳೆಯರಿಗೆ ಒನ್ ಸ್ಟಾಪ್ ಸೆಂಟರ್ ಬೆಂಬಲ ನೀಡುತ್ತದೆ.

**ನೀಡಲಾಗುವ ಸೇವೆಗಳು**

ಈ ಕೆಳಗಿನ ಸೇವೆಗಳಿಗೆ ಪ್ರವೇಶವನ್ನು ಕಲ್ಪಿಸಲು ಕೇಂದ್ರಗಳು ಮಹಿಳಾ ಸಹಾಯವಾಣಿಗಳೊಂದಿಗೆ ಸಂಯೋಜಿಸಲ್ಪಡುತ್ತದೆ.

- **ತುರ್ತು ಪ್ರತಿಕ್ರಿಯೆ ಮತ್ತು ಪಾರುಗಾಣಿಕಾ ಸೇವೆಗಳು** – ಹಿಂಸೆಗೆ ಒಳಗಾದ ಮಹಿಳೆಯರಿಗೆ ಒನ್ ಸ್ಟಾಪ್ ಸೆಂಟರ್ ಪಾರುಗಾಣಿಕಾ ಮತ್ತು ಉಲ್ಲೇಖಿತ ಸೇವೆಗಳನ್ನು ಒದಗಿಸುತ್ತದೆ. ಇದಕ್ಕಾಗಿ ನ್ಯಾಷನಲ್ ಹೆಲ್ತ್ ಮಿಷನ್, ೧೦೮ ಸರ್ವಿಸ್, ಪೋಲಿಸ್ (ಪಿಸಿಆರ್ ವ್ಯಾನ್)ನಂತಹ ಅಸ್ತಿತ್ವದಲ್ಲಿರುವ ಕಾರ್ಯವಿಧಾನಗಳೊಂದಿಗೆ ಸಂಪರ್ಕಗಳನ್ನು ಅಭಿವೃದ್ಧಿಪಡಿಸಲಾಗುವುದು.

•**ವೈದ್ಯಕೀಯ ಸಹಾಯ** – ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯವು ಅಭಿವೃದ್ಧಿಪಡಿಸಿದ ಮಾರ್ಗದರ್ಶಿ ಸೂತ್ರಗಳು ಮತ್ತು ಪ್ರೋಟೋಕಾಲಳ ಪ್ರಕಾರ ಕೈಗೊಳ್ಳಬೇಕಾದ ವೈದ್ಯಕೀಯ ನೆರವು/ ಪರೀಕ್ಷೆಯ ಸಮೀಪದ ಆಸ್ಪತ್ರೆಗೆ ಹಿಂಸೆಯಿಂದಾಗುವ ಮಹಿಳೆಯರನ್ನು ಉಲ್ಲೇಖಿಸುತ್ತದೆ.

•**ಸೈಕೋ–ಸಾಮಾಜಿಕ ಬೆಂಬಲ/ ಸಮಾಲೋಚನೆ** – ಸೈಕೋ ಸಾಮಾಜಿಕ ಸಮಾಲೋಚನಾ ಸೇವೆಗಳನ್ನು ಒದಗಿಸುವ ಪರಿಣಿತ ಸಲಹೆಗಾರರು ಕರೆಗೆ ಲಭ್ಯವಿರುತ್ತಾರೆ.

•**ಕಾನೂನಿನ ನೆರವು ಮತ್ತು ಸಮಾಲೋಚನೆ** – ಹಿಂಸೆ, ಕಾನೂನು ನೆರವು ಮತ್ತು ಸಮಾಲೋಚನೆಗಳನ್ನು ಮಹಿಳೆಯರಿಗೆ ನ್ಯಾಯಕ್ಕೆ ಪ್ರವೇಶಿಸಲು ಅನುಕೂಲವಾಗುವಂತೆ ವಕೀಲರು ಅಥವಾ ರಾಷ್ಟ್ರೀಯ/ ರಾಜ್ಯ/ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದಿಂದ ಒದಗಿಸಲಾಗುತ್ತದೆ.

•**ಆಶ್ರಯ** – ದುಷ್ಕೃತ್ಯದ ಮಹಿಳೆಯರಿಗೆ ಓಎಸ್ಸಿ ತಾತ್ಕಾಲಿಕ ಆಶ್ರಯ ಸೌಲಭ್ಯಗಳನ್ನು ಒದಗಿಸುತ್ತದೆ. ದೀರ್ಘಾವಧಿಯ ಆಶ್ರಯ ಅವಶ್ಯಕತೆಗಳಿಗಾಗಿ ಸ್ವಧರ್ ಗೃಹ, ಸಣ್ಣ ಸ್ಟೇ ಹೋಂಗಳು (ಆಡಳಿತ/ ಸರಕಾರಿ/ಎನ್‌ಜಿಒ) ಜೊತೆ ಸಂಯೋಜಿತವಾಗಿದೆ. ತಾತ್ಕಾಲಿಕ ಆಶ್ರಯಕ್ಕೆ ಯಾವುದೇ ಮಹಿಳೆಯನ್ನು ಪ್ರವೇಶಿಸುವುದು ಕೇಂದ್ರ ನಿರ್ವಾಹಕನ ವಿವೇಚನೆಗೆ ಒಳಪಟ್ಟಿರುತ್ತದೆ.

•**ವೀಡಿಯೋ ಕಾನ್ಫರೆನ್ಸಿಂಗ್ ಫೆಸಿಲಿಟಿ** – ವೇಗವಾದ ಮತ್ತು ಜಗಳ ಮುಕ್ತ ಪೋಲೀಸ್ ಮತ್ತು ಕೋರ್ಟ್ ವಿಚಾರಣೆಗೆ ಅನುಕೂಲವಾಗುವಂತೆ ಓಎಸ್‌ಸಿ ವೀಡಿಯೋ ಕಾನ್ಫರೆನ್ಸಿಂಗ್ ಸೌಲಭ್ಯವನ್ನು ಒದಗಿಸುತ್ತದೆ.

ಒಟ್ಟಾರೆಯಾಗಿ ಒನ್ ಸ್ಟಾಪ್ ಸೆಂಟರ್ ಯೋಜನೆಯು ಎಲ್ಲಾ ವರ್ಗದ ಮಹಿಳೆಯರಿಗೆ ಸಹಾಯ ಸೌಲಭ್ಯವನ್ನು ಒದಗಿಸುವ ಮೂಲಕ ನೊಂದ ಮಹಿಳೆಯರಿಗೆ ಈ ಯೋಜನೆ ಪರಿಣಾಮಕಾರಿಯಾಗಿದೆ. ಈ ಯೋಜನೆಯನ್ನು ರಾಜ್ಯ ಸರಕಾರಗಳಿಗೆ ಕೇಂದ್ರ ಸರಕಾರವು ಆರ್ಥಿಕ ಸಹಾಯವನ್ನು ನೀಡುವ ಮೂಲಕ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತದೆ.

**ಮನಸ್ವಿನಿ ಯೋಜನೆ**

ನಲವತ್ತು ವಯಸ್ಸನ್ನು ದಾಟಿದ ಅವಿವಾಹಿತ, ವಿಚ್ಛೇಧಿತ, ಪರಿತ್ಯಕ್ತ ಮಹಿಳೆಯರಿಗೆ ಪ್ರತಿ ತಿಂಗಳು ರೂ ೫೦೦/– ಈ ಯೋಜನೆಯಡಿ ಮಾಶಾಸನ ನೀಡಲಾಗುವುದು. ಮುವೆಯಾಗದವರು, ವಿಚ್ಛೇಧಿತರು ನ್ಯಾಯಾಲಯದಿಂದ ಪಡೆದ ವಿಚ್ಛೇಧನಾಪತ್ರ ಅಥವಾ ಸ್ವಯಂ ದೃಢೀಕರಣ ಪತ್ರ ನೀಡಬೇಕು. ಮನಸ್ವಿನಿ ಯೋಜನೆಯು ೨೦೧೩ರ ಆಗಸ್ಟ್ ತಿಂಗಳಿನಿಂದ ರಾಜ್ಯಾದ್ಯಾಂತ ಜಾರಿಗೊಂಡಿದೆ. ಹೋಬಳಿ ಮಟ್ಟದಲ್ಲಿರುವ ಜನಸ್ನೇಹಿ ಅಥವಾ ಜನಸಂಪರ್ಕ ಕೇಂದ್ರಗಲ್ಲಿ ಅರ್ಜಿ ಸಲ್ಲಿಸಬೇಕು. ಅರ್ಜಿ ಸ್ವೀಕೃತಗೊಂಡ ತರುವಾಯ ವಾಸಸ್ಥಳ ದೃಢೀಕರಣ ನೀಡಿ ಮಾಶಾಸನ ಪಡೆಯಬಹುದು. ಗ್ರಾಮೀಣ ಭಾಗದಲ್ಲಿ ವಾರ್ಷಿಕ ರೂ ೧೨,೦೦೦/– ಹಾಗೂ ನಗರ ಪ್ರದೇಶಗಳಲ್ಲಿ ರೂ ೧೭,೦೦೦/–ಕ್ಕಿಂತ ಕಡಿಮೆ ಆದಾಯಹೊಂದಿದ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಮಹಿಳೆಯರು ಈ ಯೋಜನೆಯ ಫಲಾನುಭವಿಗಳಾಗಬಹುದು.

| ಕೋಷ್ಠಕ ೭.೫: ೨೦೧೩-೧೪ರಿಂದ ೨೦೧೬-೧೭ರವರೆಗೆ ಮನಸ್ವಿನಿ ಯೋಜನೆಯ ಫಲಾನುಭವಿಗಳ ಸಂಖ್ಯೆ | |
|---|---|
| **ವರ್ಷ** | **ಫಲಾನುಭವಿಗಳ ಸಂಖ್ಯೆ** |
| ೨೦೧೩-೧೪ | ೧೧,೯೨೯ |
| ೨೦೧೪-೧೫ | ೫೧,೩೮೦ |
| ೨೦೧೫-೧೬ | ೭೪,೧೩೧ |
| ೨೦೧೬-೧೭ | ೮೬,೧೬೮ |

ಕೃಪೆ:ಸಮಾಜ ಕಲ್ಯಾಣ ಇಲಾಖೆ

ಮನಸ್ವಿನಿ ಯೋಜನೆ ಪ್ರಾರಂಭವಾದ ವರ್ಷ (೨೦೧೩-೧೪)ದಲ್ಲಿ ೧೧,೯೨೯ ಫಲಾನುಭವಿಗಳು ಈ ಯೋಜನೆಯ ಲಾಭ ಪಡೆದಿರುವುದಾಗಿ ಅಂಕಿಸಂಖ್ಯೆಗಳು ತಿಳಿಸುವವು. ಅದೇ ರೀತಿಯಾಗಿ ೨೦೧೪-೧೫ರಲ್ಲಿ ೫೧,೩೮೦ ಫಲಾನುಭವಿಗಳು, ೨೦೧೫-೧೬ರಲ್ಲಿ ೭೪,೧೩೧ ಫಲಾನುಭವಿಗಳು, ೨೦೧೬-೧೭ರಲ್ಲಿ ೮೬,೧೬೮ ಫಲಾನುಭವಿಗಳು ಮನಸ್ವಿನಿ ಯೋಜನೆಯ ಲಾಭ ಪಡೆದಿರುವುದಾಗಿ ದಾಖಲಿಸಲಾಗಿದೆ. ಅಂದರೆ ವರ್ಷದಿಂದ ವರ್ಷಕ್ಕೆ ಈ ಯೋಜನೆಯ ಫಲಾನುಭವಿಗಳು ಹೆಚ್ಚುತ್ತಲೇ ಹೋಗಿರುವರು.

**ಸ್ವಾಧಾರ ಯೋಜನೆ**

ಸ್ವಾಧಾರ ಯೋಜನೆಯು ಕಷ್ಟಕರ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗಾಗಿ ಇದೆ. ಇದು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು ಕುಟುಂಬದಿಂದ ಪರಿತ್ಯಕ್ತರಾದವರು, ವಿಧವೆಯರು, ಮಹಿಳಾ ಖೈದಿಗಳಾಗಿ ಜೈಲಿಗೆ ಸೇರಿ ಅಲ್ಲಿಂದ ಬಿಡುಗಡೆ ಹೊಂದಿ ಕುಟುಂಬದ ಸಹಾಯದಿಂದ ದೂರವಿರುವವರು, ಪ್ರಕೃತಿ ವಿಕೋಪಕ್ಕೆ ಸಿಲುಕಿ ಒಬ್ಬಂಟಿಯಾದ ಮಹಿಳೆ, ಲೈಂಗಿಕ ಶೋಷಣೆಗೆ ಒಳಗಾದವರು, ಮಾನಸಿಕ ಖಾಯಿಲೆಯಿಂದ ಬಳಲುತ್ತಿರುವ ಮಹಿಳೆಯರಿಗೆ ಸಮಗ್ರ ಸೇವೆಗಳನ್ನು ಒದಗಿಸುವುದು, ಕಷ್ಟಕರ ಪರಿಸ್ಥಿತಿಯಲ್ಲಿರುವ ಮಹಿಳೆಯರಿಗೆ ಆಶ್ರಯ, ಆಹಾರ, ಬಟ್ಟೆ, ಆರೋಗ್ಯ ಸೇವೆ, ಸಲಹೆ, ಮಾರ್ಗದರ್ಶನ ಮತ್ತು ನ್ಯಾಯ ಒದಗಿಸುವುದು ಸೇರಿದಂತೆ ಕೌಶಲ್ಯ ತರಬೇತಿ ಹಾಗೂ ಶಿಕ್ಷಣ ನೀಡುವುದರ ಮೂಲಕ ಮಹಿಳೆಯನ್ನು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಸಶಕ್ತರನ್ನಾಗಿಸುವುದು ಯೋಜನೆಯ ಉದ್ದೇಶವಾಗಿದೆ.

ಈ ಯೋಜನೆಯನ್ನು ಸರ್ಕಾರೇತರ ಸಂಸ್ಥೆಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಸಮಾಜ ಕಲ್ಯಾಣ ಮಂಡಳಿ, ಸ್ಥಳೀಯ ನಗರ ಸಂಸ್ಥೆಗಳು ಹಾಗೂ ಮಹಿಳಾ ಅಭಿವೃದ್ಧಿ ನಿಗಮಗಳ ಮೂಲಕ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯ ಕೇಂದ್ರಗಳಲ್ಲಿ ಮಹಿಳಾ

ಸಹಾಯವಾಣಿ, ಸಲಹಾ ಕೇಂದ್ರ, ತರಬೇತಿ ಕೇಂದ್ರ ಹಾಗೂ ವೈದ್ಯಕೀಯ ಕೇಂದ್ರಗಳನ್ನು ನಡೆಸಲೂ ಅವಕಾಶ ಒದಗಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ೩೪ ಸ್ವಾಧಾರ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ.

**ಸಾಂತ್ವನ ಯೋಜನೆ**

ಸಾಂತ್ವನ ಯೋಜನೆಯು ಸಮಾಜದಲ್ಲಿ ವರದಕ್ಷಿಣೆ ಕಿರುಕುಳ, ಕೌಟಂಬಿಕ ದೌರ್ಜನ್ಯ, ಅತ್ಯಾಚಾರ ಹಾಗೂ ಲೈಂಗಿಕ ಕಿರುಕುಳಕ್ಕೆ ಒಳಗಾದ ಮಹಿಳೆಯರಿಗೆ ಸಹಾಯ ಒದಗಿಸುವ ಉದ್ದೇಶದಿಂದ ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯು ೨೦೦೦-೦೧ನೇ ಸಾಲಿನಲ್ಲಿ ಮಂಜೂರಾಗಿ ಅನುಷ್ಠಾನಗೊಂಡಿತು. ನೊಂದ ಮಹಿಳೆಯರಿಗೆ ಕಾನೂನು ನೆರವು, ತಾತ್ಕಾಲಿಕ ಆಶ್ರಯ, ಆರ್ಥಿಕ ಪರಿಹಾರ ಹಾಗೂ ಅವಶ್ಯವಾದ ತರಬೇತಿ ನೀಡಿ ಸ್ವಾವಲಂಭಿಗಳಾಗುವಂತೆ ಮಾಡಿ ಮಹಿಳೆ ಸ್ವತಂತ್ರವಾಗಿ ಬದುಕು ಸಾಗಿಸಲು ನೆರವಾಗುವುದರ ಜೊತೆಗೆ ಅವರನ್ನು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಸಶಕ್ತರನ್ನಾಗಿಸುವ ಗುರಿಯನ್ನು ಯೋಜನೆ ಹೊಂದಿದೆ.

ಸಾಂತ್ವನ ಕೇಂದ್ರಗಳನ್ನು ಸ್ವಯಂಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಪ್ರತಿಯೊಂದು ಕೇಂದ್ರದಲ್ಲಿಯೂ ಮಹಿಳಾ ಸಹಾಯವಾಣಿ ಇದ್ದು ದಿನದ ೨೪ ತಾಸು ಸಂಕಷ್ಟಕ್ಕೊಳಗಾದ ಮಹಿಳೆಯರಿಂದ ಕರೆಗಳನ್ನು ಸ್ವೀಕರಿಸುವ ವ್ಯವಸ್ಥೆ ಇದೆ. ದೌರ್ಜನ್ಯಕ್ಕೊಳಗಾದ ನೊಂದ ಮಹಿಳೆಯರಿಗೆ ಜಿಲ್ಲಾ ಸಮಿತಿಯ ಶಿಫಾರಸ್ಸಿನ ಮೇರೆಗೆ ಅವಶ್ಯವಾದ ಸೌಲಭ್ಯ ಹಾಗೂ ಪುನರ್ವಸತಿ ಸೇವೆಗಳನ್ನು ಪ್ರತಿ ಪ್ರಕರಣದ ಅರ್ಹತೆಗನುಗುಣವಾಗಿ ನೀಡಲಾಗುವುದು. ದೌರ್ಜನ್ಯಕ್ಕೊಳಗಾದ ಮಹಿಳೆಗೆ ತಕ್ಷಣ ಆರ್ಥಿಕ ನೆರವು ಅವಶ್ಯಕತೆ ಇದ್ದಲ್ಲಿ ರೂ ೨೦೦೦/-ದಿಂದ ರೂ ೧೦,೦೦೦/-ದವರೆಗೆ ನೆರವು ನೀಡಲು ಅವಕಾಶ ಕಲ್ಪಿಸಲಾಗಿದೆ. ಪ್ರಸ್ತುತ ರಾಜ್ಯದಲ್ಲಿ ಒಟ್ಟು ೧೭೨ ಸಾಂತ್ವನ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. (ಮೂಲ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ).

**ಸಾಮಾಜಿಕ ಪಿಡುಗುಗಳ ನಿವಾರಣೆಯ ವಿಶೇಷ ಘಟಕ**

ಸಾಮಾಜಿಕ ಪಿಡುಗುಗಳಾದ ವರದಕ್ಷಿಣೆ, ಮಹಿಳಾ ದೌರ್ಜನ್ಯ, ಕೌಟಂಬಿಕ ದೌರ್ಜನ್ಯ, ಬಾಲ್ಯ ವಿವಾಹ ತಡೆಗಟ್ಟುವಿಕೆ, ಮಧ್ಯ ಹಾಗೂ ಮಾದಕ ವಸ್ತು ಸೇವನೆ ನಿಷೇಧ ಮುಂತಾದವುಗಳ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲು ನಿರ್ದೇಶನಾಲಯದಲ್ಲಿ ಒಂದು ವಿಶೇಷ ಘಟಕವನ್ನು ನಿರ್ಮಿಸಲಾಗಿದೆ. ಸಾಮಾಜಿಕ ಪಿಡುಗುಗಳ ಕುರಿತು ಜನರಲ್ಲಿ ಅರಿವು ಮೂಡಿಸಲು ಜಿಲ್ಲೆಗಳಲ್ಲಿ ಸ್ವಯಂಸೇವಾ ಸಂಸ್ಥೆಗಳ ಸಹಯೋಗದೊಂದಿಗೆ ಪ್ರಚಾರ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ.

**ಕೌಟಂಬಿಕ ಹಿಂಸೆಯಿಂದ ಮಹಿಳೆಯರನ್ನು ರಕ್ಷಿಸುವ ಕಾಯ್ದೆ**

(ಅಧಿನಿಯಮ :೨೦೦೫ ಹಾಗೂ ಅಧಿನಿಯಮ ೨೦೦೬ ಅಕ್ಟೋಬರ್ ೨೬)

ಸಂವಿಧಾನದ ಪ್ರಕಾರ ಪುರುಷರಿಗೆ ಸಮಾನವಾದ ಹಕ್ಕುಗಳು ಮಹಿಳೆಯರಿಗೂ ಇವೆ. ಅದನ್ನು ಕಾಯ್ದುಕೊಳ್ಳಲು ಮಹಿಳೆಯರ ಹಕ್ಕುಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ರಕ್ಷಣೆ ಮಾಡುವುದು

ಈ ಕಾಯ್ದೆಯ ಉದ್ದೇಶವಾಗಿದೆ. ಕುಟುಂಬದೊಳಗೆ ಯಾವುದೇ ಬಗೆಯ ಹಿಂಸೆಗೆ ಒಳಗಾದ ಮಹಿಳೆಯರಿಗೆ ಸಂಬಂಧಿಸಿದಂತೆ ಹೆಚ್ಚು ಪರಿಣಾಮಕಾರಿಯಾಗಿ ರಕ್ಷಣೆಯೊದಗಿಸಲು ಕೇಂದ್ರ ಸರ್ಕಾರವು ಕೌಟಂಬಿಕ ಹಿಂಸೆಯಿಂದ ಮಹಿಳೆಯರನ್ನು ರಕ್ಷಿಸುವ ಅಧಿನಿಯಮ :೨೦೦೫ ಹಾಗೂ ಅಧಿನಿಯಮ ೨೦೦೬ ಅಕ್ಟೋಬರ್ ೨೬ರಿಂದ ಜಾರಿಗೆ ತಂದಿತು. ಈ ಕಾಯ್ದೆಯು ರಾಜ್ಯದಲ್ಲಿ ೨೦೦೭ರಿಂದ ಅನುಷ್ಠಾನಗೊಂಡಿತು.

ಜಿಲ್ಲಾ ಮಟ್ಟದಲ್ಲಿ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮತ್ತು ತಾಲೂಕು ಮಟ್ಟದಲ್ಲಿ ಮಹಿಳಾ ಮತ್ತು ಮಕ್ಕಳಕಲ್ಯಾಣ ಇಲಾಖೆಯ ಶಿಶುಅಭಿವೃದ್ಧಿ ಯೋಜನಾಧಿಕಾರಿಗಳನ್ನು ದೌರ್ಜನ್ಯಕ್ಕೊಳಗಾದ ಮಕ್ಕಳನ್ನು ರಕ್ಷಿಸಲು ಸಂರಕ್ಷಣಾಧಿಕಾರಿಗಳೆಂದು ನೇಮಿಸಲಾಗಿದೆ. ಕಾಯ್ದೆಯ ಸಮರ್ಪಕ ಅನುಷ್ಠಾನಕ್ಕಾಗಿ ರಾಜ್ಯ, ಜಿಲ್ಲೆ, ತಾಲೂಕು ಮಟ್ಟದಲ್ಲಿ ಸಮಿತಿಯನ್ನು ರಚಿಸಲಾಗಿದೆ.

ರಾಜ್ಯದ ಎಲ್ಲಾ ತಾಲೂಕುಗಳ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳ ಕಛೇರಿಯಲ್ಲಿ ಕರ್ನಾಟಕ ಕಾನೂನು ಸೇವಾ ಪ್ರಾಧಿಕಾರದ ಸಹಯೋಗದಲ್ಲಿ ಉಚಿತ ಕಾನೂನು ಸಲಹಾ ಕೇಂದ್ರಗಳನ್ನು ೨೬ನೇ ನವೆಂಬರ್ ೨೦೦೭ರಿಂದ ಸ್ಥಾಪಿಸಲಾಗಿದೆ. ಈ ಕೇಂದ್ರಗಳಲ್ಲಿ ನುರಿತ ನ್ಯಾಯವಾದಿಗಳು ಪ್ರತಿ ಬುಧವಾರ ಹಾಗೂ ಶನಿವಾರ ಉಚಿತ ಕಾನೂನು ಸಲಹೆ ನೀಡುತ್ತಿರುವರು. ದೌರ್ಜನ್ಯಕ್ಕೆ ಒಳಗಾದ ಮಹಿಳೆಯರಿಗೆ ರಕ್ಷಣೆ, ಮಾರ್ಗದರ್ಶನ ಒದಗಿಸಲು ರಾಜ್ಯದಲ್ಲಿ ಸ್ವಾಧಾರ ಕೇಂದ್ರಗಳು, ಅಲ್ಪಾವಧಿ ವಸತಿಗೃಹಗಳು, ಸಾಂತ್ವನ ಕೇಂದ್ರಗಳನ್ನು ರಕ್ಷಣಾ ಗೃಹಗಳೆಂದು ಅಧಿಸೂಚನೆ ಹೊರಡಿಸಲಾಗಿದ್ದು ನೊಂದಮಹಿಳೆಯರು ಇಲ್ಲಿ ಸಮಾಲೋಚನೆ ಹಾಗೂ ರಕ್ಷಣೆ ಪಡೆಯಬಹುದಾಗಿದೆ. ಇದಲ್ಲದೆ ನೊಂದಮಹಿಳೆಯರಿಗೆ ಕಾನೂನು, ವೈದ್ಯಕೀಯ, ಇತರೆ ನೆರವು ನೀಡಲು ಸ್ವಯಂ ಸೇವಾ ಸಂಸ್ಥೆಗಳಿಗೆ ವಹಿಸಿ ಅಂತಹ ೧೧೬ ಸ್ವಯಂಸೇವಾ ಸಂಸ್ಥೆಗಳನ್ನು ಸೇವಾ ಸಂಸ್ಥೆಗಳು ಎಂದು ಸರ್ಕಾರವು ಅಧಿಸೂಚನೆ ಹೊರಡಿಸಿದೆ.

**ಲೈಂಗಿಕ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರ ಸ್ಥಿತಿಗತಿಗಳ ಅಧ್ಯಯನ ಸಮಿತಿ**

೨೦೧೭-೧೮ರಲ್ಲಿ ರಾಜ್ಯ ಸರ್ಕಾರವು ಲೈಂಗಿಕ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಅಧ್ಯಯನ ಸಮಿತಿಯೊಂದನ್ನು ರಚಿಸಿತ್ತು. ಈ ಸಮಿತಿಯ ಅಧ್ಯಕ್ಷತೆಯನ್ನು ವಿಧಾನ ಪರಿಷತ್ ಸದಸ್ಯೆ ಜಯಮಾಲ ಅವರಿಗೆ ವಹಿಸಲಾಗಿತ್ತು. ಈ ಸಮಿತಿಯಲ್ಲಿ ಅಧ್ಯಕ್ಷರನ್ನೊಳಗೊಂಡು ೨೧ ಸದಸ್ಯರನ್ನು ಒಳಗೊಂಡಿದ್ದಿತು. ಸಮಿತಿಯು ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ಭೇಟಿನೀಡಿ ಲೈಂಗಿಕ ವೃತ್ತಿಯಲ್ಲಿ ನಿರತರಾದ ಮಹಿಳೆಯರ ಶೋಷಣೆಯ ಸ್ವರೂಪ, ಅವರು ಎದುರಿತ್ತಿರುವ ಅಪಾಯಗಳನ್ನು ಅಧ್ಯಯನ ಮಾಡಿ ವರದಿಯೊಂದನ್ನು ಸರ್ಕಾರಕ್ಕೆ ಸಲ್ಲಿಸಿದೆ.

ವರದಿಯಲ್ಲಿ ಮುಖ್ಯವಾಗಿ ಶೋಷಿತ ಲೈಂಗಿಕ ಕಾರ್ಯಕರ್ತರ ಜೀವನಮಟ್ಟ ಸುಧಾರಣೆಗೆ ನೀತಿ ಮತ್ತು ಕಾರ್ಯಸೂಚಿಗಳ ಕುರಿತು ಶಿಫಾರಸ್ಸು ಮಾಡಿದೆ. ಹಾಗೆಯೇ ಲೈಂಗಿಕ ಕಾರ್ಯಕರ್ತರ

ಪುನಶ್ಚೇತನ ಮತ್ತು ಸಶಕ್ತೀಕರಣಕ್ಕಾಗಿ ವಾರ್ಷಿಕ ರೂ ೭೩೩ ಕೋಟಿಯಷ್ಟು ಮೀಸಲಿರಿಸಬೇಕೆಂದು ಶಿಫಾರಸ್ಸು ಮಾಡಿರುವುದು. ಸಮಿತಿಯು ಲೈಂಗಿಕ ವೃತ್ತಿಯಲ್ಲಿ ನಿರತರಾದ ೧,೦೦,೬೭೬ ಮಹಿಳೆಯರನ್ನು ಗುರುತಿಸಿ ಮಾಹಿತಿ ಸಂಗ್ರಹಿಸಿದೆ. ಸರ್ಕಾರೇತರ ಸಂಸ್ಥೆಗಳ ಪ್ರಕಾರ ಲೈಂಗಿಕ ವೃತ್ತಿಯಲ್ಲಿ ನಿರತರಾದ ಮಹಿಳೆಯರ ಸಂಖ್ಯೆಯು ಮೇಲೆ ತಿಳಿಸಿದ ಸಂಖ್ಯೆಗಿಂತ ಏಳೆಂಟು ಪಟ್ಟು ಹೆಚ್ಚಿಗಿದೆಯಂತೆ. ಸಾರ್ವತ್ರಿಕವಾಗಿ ದಂಧೆ ನಡೆಯದೆ ಗುಪ್ತವಾಗಿ ದಂಧೆ ನಡೆಯುವುದರಿಂದ ಈ ಸಂಖ್ಯೆಯನ್ನು ನಿಖರವಾಗಿ ಪತ್ತೆ ಮಾಡುವುದು ಕಷ್ಟಸಾಧ್ಯದ ಕೆಲಸ ಎಂದು ಸಮಿತಿಯು ಅಭಿಪ್ರಾಯಪಟ್ಟಿದೆ.

ಸರ್ಕಾರದ ೨೫ ಇಲಾಖೆಗಳಿಂದ ಒಟ್ಟು ೨೭೭ ಯೋಜನೆಗಳು ಮಹಿಳೆಯರಿಗಾಗಿಯೇ ಮೀಸಲಾಗಿವೆ. ವಾರ್ಷಿಕ ರೂ ೧೬,೦೦೦ ಕೋಟಿಗೂ ಹೆಚ್ಚು ಮೊತ್ತವನ್ನು ಮಹಿಳೆಯರ ಜೀವನಮಟ್ಟ ಸುಧಾರಿಸುವ ಉದ್ದೇಶದಿಂದ ವೆಚ್ಚ ಮಾಡಲಾಗುತ್ತಿದೆ. ಈ ಪೈಕಿ ಲೈಂಗಿಕ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರಿಗಾಗಿ ಇರುವ ಯೋಜನೆಗಳು ಶೇಕಡ ೦.೭ಕ್ಕಿಂತಲೂ ಕಡಿಮೆ ಎಂದು ಸಮಿತಿಯು ತಿಳಿಸಿದೆ. ಮಾಹಿತಿ ವಿನಿಮಯ ಹಾಗೂ ವಿವಿಧ ಇಲಾಖೆಗಳ ಸಮನ್ವಯದ ಕೊರತೆಯಿಂದ ಯೋಜನೆಗಳ ಅನುಷ್ಠಾನವು ಸಮರ್ಪಕವಾಗಿಲ್ಲ. ಲೈಂಗಿಕ ವೃತ್ತಿನಿರತರ ಬಗೆಗಿನ ನಿರ್ಲಕ್ಷ್ಯ, ಆ ಮಹಿಳೆಯರನ್ನು ಗುರುತಿಸುವಲ್ಲಿನ ವೈಫಲ್ಯ, ಕಳಂಕ, ಅಪಮಾನಗಳ ಭಯದಿಂದ ಲೈಂಗಿಕ ವೃತ್ತಿನಿರತ ಮಹಿಳೆಯರು ಯೋಜನೆಗಳ ಫಲಾನುಭವಿಗಳಾಗಲು ಹಿಂಜರಿಯುತ್ತಾರೆ. ಹೀಗಾಗಿ ಯೋಜನೆಗಳ ಸೌಲಭ್ಯ ಆ ಸಮುದಾಯಕ್ಕೆ ತಲುಪಲು ಸಾಧ್ಯವಾಗಿಲ್ಲ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ನೀಡಲಾಗುವ ವಾರ್ಷಿಕ ಆಯವ್ಯಯದಲ್ಲಿ ಈ ಸಮುದಾಯಕ್ಕೆ ಪ್ರತ್ಯೇಕ ಅನುದಾನವನ್ನು ಮೀಸಲಿಡಬೇಕು ಎಂದು ಸಮಿತಿಯು ಶಿಫಾರಸ್ಸು ಮಾಡಿದೆ.

ರಾಜ್ಯದಲ್ಲಿ ಎಚ್ ಐ ವಿ ಸೋಂಕಿತ ಲೈಂಗಿಕ ವೃತ್ತಿನಿರತ ಮಹಿಳೆಯರು ಸುಮಾರು ಎಂಟು ಸಾವಿರ ಇದ್ದಾರೆಂದು ಗುರುತಿಸಲಾಗಿದೆ. ಅಂತಹ ಮಹಿಳೆಯರ ಕುಟುಂಬಕ್ಕೆ ಅನುಕೂಲವಾಗುವಂತೆ ತಕ್ಷಣ ಅಂತ್ಯೋದಯ ಪಡಿತರ ಚೀಟಿಯನ್ನು ವಿತರಿಸಬೇಕು. ಹಾಗೆಯೇ ಅದರ ಜೊತೆಗೆ ಪೌಷ್ಟಿಕ ಆಹಾರ, ಆರ್ಥಿಕ ಭದ್ರತೆಗಾಗಿ ಮಾಸಿಕ ತಲಾ ರೂ ೫೦೦೦/- ನೀಡಬೇಕು. ಇದಕ್ಕಾಗಿ ಕನಿಷ್ಟ ರೂ ೪೮ಕೋಟಿ ಹಣವನ್ನು ಮೀಸಲಿಡಬೇಕು ಎಂದು ಸಮಿತಿಯು ಸೂಚಿಸಿದೆ. ೧,೮೦೦ ಅಂಗವಿಕಲರು, ೪೫ ವಯಸ್ಸು ಮೀರಿದ ಸುಮಾರು ೨೦,೦೦೦ ಮಹಿಳೆಯರು ಈ ವೃತ್ತಿಯಲ್ಲಿರುವುದಾಗಿ ಸಮಿತಿಯು ಅಂದಾಜಿಸಿದೆ.

ಲೈಂಗಿಕ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರ ಜೀವನಮಟ್ಟ ಸುಧಾರಿಸಲು ದೌರ್ಜನ್ಯ ತಡೆ, ಸಂರಕ್ಷಣೆ, ಸಶಕ್ತೀಕರಣ ಎಂಬ ತ್ರಿಸೂತ್ರಗಳನ್ನು ಅನುಷ್ಠಾನಗೊಳಿಸಬೇಕು. ಆ ಮೂಲಕ ಲೈಂಗಿಕ ಕಾರ್ಯಕರ್ತರು ಗೌರವದಿಂದ ಬದುಕುವ ಅವಕಾಶ ಕಲ್ಪಿಸಬೇಕಾದುದು ರಾಜ್ಯ ಸರ್ಕಾರದ ಸಂವಿಧಾನಿಕ ಕರ್ತವ್ಯ ಎಂದೂ ಸಮಿತಿಯು ವರದಿಯಲ್ಲಿ ಉಲ್ಲೇಖಿಸಿದೆ.

**ಸಮಿತಿಯ ಮುಖ್ಯ ಶಿಫಾರಸ್ಸುಗಳು ಈ ಕೆಳಗಿನಂತಿವೆ.**

- ಲೈಂಗಿಕ ವೃತ್ತಿಯಲ್ಲಿರುವವರನ್ನು ಶೋಷಣೆಯ ವಿಷವರ್ತುಲದಿಂದ ಹೊರತರಬೇಕು
- ಸುಸ್ಥಿರವಾದ ಮಹಿಳಾ ಕೇಂದ್ರಿತವಾದ ಕಾರ್ಯಯೋಜನೆ ಅನುಷ್ಠಾನಗೊಳಿಸಬೇಕು
- ಯೋಜನೆಗೆ ಒದಗಿಸುವ ಅನುದಾನ ಸಮರ್ಪಕ ಬಳಕೆ ಮತ್ತು ಫಲಾನುಭವಿಗಳಿಗೆ ಪರಿಣಾಮಕಾರಿಯಾಗಿ ತಲುಪಿಸಲು ಏಕಗವಾಕ್ಷಿಯಾಗಿ 'ಕರ್ನಾಟಕ ದಮನಿತ ಮಹಿಳೆಯರ ಕೋಶ' ರಚಿಸಬೇಕು
- ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಜಂಟಿ ನಿರ್ದೇಶಕರ ನೇತೃತ್ವದಲ್ಲಿ ಈ ಕೋಶದಲ್ಲಿ ಕಾನೂನು ತಜ್ಞರು, ಆರೋಗ್ಯ, ಪೋಲಿಸ್ ಇಲಾಖೆ ಅಧಿಕಾರಿಗಳು, ಕಾನೂನು ಸೇವಾ ಪ್ರಾಧಿಕಾರದ ಪ್ರತಿನಿಧಿಗಳು, ಸಮುದಾಯದ ಪ್ರತಿನಿಧಿಗಳು, ಸ್ವಯಂಸೇವಾ ಸಂಸ್ಥೆಗಳ ಪ್ರತಿನಿಧಿಗಳು ಸದಸ್ಯರಾಗಿರಬೇಕು. ಈ ಸಮಿತಿಯ ಅಡಿಯಲ್ಲಿ ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿ ನೇತೃತ್ವದಲ್ಲಿ ಅನುಷ್ಠಾನ ಸಮಿತಿ ರಚಿಸಬೇಕು
- ಯೋಜನೆಯ ಅನುಷ್ಠಾನದ ಮೌಲ್ಯಮಾಪನಕ್ಕೆ ಎಲ್ಲಾ ಇಲಾಖೆಗಳ ಜಿಲ್ಲಾಮಟ್ಟದ ಅಧಿಕಾರಿಗಳನ್ನು ಒಳಗೊಂಡ ಸಲಹಾ ಸಮಿತಿ ರಚಿಸಬೇಕು.
- ಶಿಫಾರಸ್ಸುಗಳ ಜಾರಿಗೆ ಮಾರ್ಗದರ್ಶಿ ಸೂತ್ರಗಳನ್ನು ತಯಾರಿಸಲು ಸಮುದಾಯದ ಪ್ರತಿನಿಧಿಗಳು ಮತ್ತು ಈ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುವ ಸಂಸ್ಥೆಗಳ ಕಾರ್ಯಕರ್ತರನ್ನು ಒಳಗೊಂಡ ಏಳು ಸದಸ್ಯರ ಅನುಷ್ಠಾನ ಮೇಲ್ವಿಚಾರಣಾ ಸಮಿತಿ ರಚಿಸಬೇಕು. ಈ ಸಮಿತಿಯು ಮೂರು ತಿಂಗಳ ಒಳಗಾಗಿ ಕಾರ್ಯಯೋಜನೆ ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಬೇಕೆಂದು ಸಮಿತಿಯು ಸೂಚಿಸಿದೆ.

ಈ ವರದಿಯಲ್ಲಿ ಲೈಂಗಿಕ ವೃತ್ತಿನಿರತರು ಎಂಬ ಪದಕ್ಕೆ ಪರ್ಯಾಯವಾಗಿ ದಮನಿತ ಮಹಿಳೆ ಎಂಬ ಪದ ಬಳಸಲಾಗಿದೆ. ಲೈಂಗಿಕ ವೃತ್ತಿ ಎಂಬ ಪದಕ್ಕೆ ದಂಧೆ ಎಂಬ ಪದ ಬಳಸಲಾಗಿದೆ. ವೇಶ್ಯೆ, ಗಣಿಕೆ, ಸೂಳೆ, ವಾರಾಂಗನೆ, ನಾಯಕಸಾನಿ ಇತ್ಯಾದಿ ಪದಗಳು ಮಹಿಳೆಯ ನೈತಿಕ ಪಾತಾಳಿಯನ್ನು ತುಚ್ಛೀಕರಿಸುವುದರಿಂದ ಕೈಬಿಡಲಾಗಿದೆ ಎಂದು ಅಧ್ಯಯನ ಸಮಿತಿಯು ತಿಳಿಸಿದೆ. ವೇಶ್ಯಾಗೃಹ, ಬೀದಿ, ಮನೆ, ಯಾವುದಾದರೂ ನಿರ್ಧಿಷ್ಟ ಸ್ಥಳದಲ್ಲಿ ದೇಹವನ್ನು ವಿನಿಮಯದ ಸರಕಾಗಿಸಿರುವ ಎಲ್ಲಾ ವಯಸ್ಸಿನ ಮಹಿಳೆಯರ ಬದುಕಿನ ಚಿತ್ರಣವನ್ನು ವರದಿಯಲ್ಲಿ ನೀಡಲಾಗಿದೆ.

ಅಧ್ಯಯನ ಸಮಿತಿಯು ಅಧ್ಯಯನಕ್ಕಾಗಿ ರಾಜ್ಯಾದ್ಯಾಂತ ಕ್ಷೇತ್ರಕಾರ್ಯ ಕೈಗೊಂಡು ಲೈಂಗಿಕ ವೃತ್ತಿಯಲ್ಲಿರುವ ೧೧,೦೦೦ ಮಹಿಳೆಯರಿಂದ ಮಾಹಿತಿ ಪಡೆದು ರಾಜ್ಯ ಸರ್ಕಾರಕ್ಕೆ ವರದಿ ಸಲ್ಲಿಸಿರುವುದಾಗಿ ತಿಳಿಸಿದೆ. ಆದರೆ ಈ ವರದಿಯಲ್ಲಿ ಮಾಡಿದ ಶಿಫಾರಸ್ಸುಗಳನ್ನು ಸರ್ಕಾರವು ಇನ್ನೂ ಅನುಷ್ಠಾನಗೊಳಿಸಿಲ್ಲ.

ಲೈಂಗಿಕ ಕಾರ್ಯಕರ್ತೆಯರಿಗೆಂದೇ ವಿಶೇಷ ಯೋಜನೆ, ಕಾರ್ಯಕ್ರಮಗಳನ್ನು ಸರ್ಕಾರವು ಜಾರಿಗೆಗೊಳಿಸದೇ ಇದ್ದರೂ ಅದಕ್ಕೆ ಪೂರಕವಾದ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ.

ಒಟ್ಟಾರೆಯಾಗಿ ಸರ್ಕಾರವು ಲೈಂಗಿಕ ಕಾರ್ಯಕರ್ತೆಯರಿಗಾಗಿ ನೆರವು ನೀಡಲು ಯೋಜನೆಗಳನ್ನು, ಅಧ್ಯಯನ ಸಮಿತಿಗಳನ್ನು ರಚಿಸಿದೆ. ಆದರೆ ಅದರ ಮೂಲವನ್ನು ಹುಡುಕಿ ಖಾಯಂಆಗಿ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಸೋತಿದೆ ಎನಿಸುತ್ತದೆ.

**ಆಧಾರ ಗ್ರಂಥಗಳು**


೧ ಭಾರತಿ ಬಿ ಎಂ, ಭಾರತದಲ್ಲಿ ಮಹಿಳೆ, ೨೦೦೮, ಪು. ಸಂ. ೧೩೦

೨ ಏಡ್ಸ್ ನಿಯಂತ್ರಣ ಸಂಸ್ಥೆಯ ವಾರ್ಷಿಕ ವರದಿ:೨೦೧೭

೩ ಆರೋಗ್ಯ ಇಲಾಖೆಯ ವರದಿ:೨೦೧೭

೪ ಸಮಾಜ ಕಲ್ಯಾಣ ಇಲಾಖೆಯ ಕೈಪಿಡಿ:೨೦೧೮

## ಅಧ್ಯಾಯ : ಎಂಟು

## ಲೈಂಗಿಕ ಕಾರ್ಯಕರ್ತೆ ಮತ್ತು ಸಮಾಜ

ಬಹುತೇಕ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವೇಶ್ಯಾವಾಟಿಕೆಗೂ ಮಾದಕದ್ರವ್ಯ ವ್ಯಸನಕ್ಕೂ ಸಂಬಂಧವಿದೆ. ಅಮೇರಿಕದಂತಹ ದೇಶಗಳಲ್ಲಿ ಲೈಂಗಿಕ ಸೇವೆಯನ್ನು ಮಾದಕ ದ್ರವ್ಯಗಳೊಂದಿಗೆ ಒದಗಿಸುವುದಾಗಿ ಅಲ್ಲಿಯ ಸಮಾಜಶಾಸ್ತ್ರಜ್ಞರು ತಿಳಿಸುವರು. ಅಪ್ರಾಪ್ತ ವಯಸ್ಸಿನಲ್ಲಿ ಲೈಂಗಿಕ ದುರ್ಬಳಕೆಗೆ ಒಳಗಾದವರು ಇಂತಹ ವ್ಯಸನಗಳಿಗೆ ಒಳಗಾಗುವರೆಂದು ಮನೋವಿಜ್ಞಾನಿಗಳು ಅಭಿಪ್ರಾಯಪಡುವರು. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡತನವೇ ವೇಶ್ಯಾವಾಟಿಕೆಗೆ ಮೂಲ ಕಾರಣ ಎಂದು ಹೇಳಲಾಗುತ್ತದೆ. ಯುರೋಪಿನ ಮುಂದುವರೆದ ಬಹುತೇಕ ರಾಷ್ಟ್ರಗಳಲ್ಲಿ ವೇಶ್ಯವಾಟಿಕೆಯನ್ನು ಒಂದು ವೃತ್ತಿಯಂದೇ ಪರಿಗಣಿಸಲಾಗುವುದು. ಅದು ಅಲ್ಲಿ ಕಾನೂನುಬಾಹಿರ ಚಟುವಟಿಕೆಯಲ್ಲ. ಆದರೆ ಅದೇ ಕೆನೆಡಾದಲ್ಲಿ ವೇಶ್ಯಾಗೃಹ ನಡೆಸುವುದು ಹಾಗೂ ಸಾರ್ವಜನಿಕವಾಗಿ ವೇಶ್ಯೆಯರು ಗಿರಾಕಿಗಳನ್ನು ಆಕರ್ಷಿಸುವುದು ಅಪರಾಧವೆಂದು ಪರಿಗಣಿಸಲಾಗುತ್ತದೆ.

ವೇಶ್ಯಾವಾಟಿಕೆಯು ಪ್ರಾಚೀನ ಕಾಲದಿಂದಲೂ ಮಾನವ ಸಮಾಜದಲ್ಲಿ ಕಂಡುಬರುತ್ತದೆ. ಆಸ್ಸೀರಿಯಾ, ಈಜಿಪ್ತ್, ರೋಮ್, ಗ್ರೀಸ್, ಚೀನಾ, ಭಾರತಗಳಲ್ಲಿ ಪ್ರಾಚೀನ ಕಾಲದಿಂದಲೂ ವೇಶ್ಯಾವಾಟಿಕೆ ಇದ್ದಿತು ಎಂಬುದಕ್ಕೆ ಇತಿಹಾಸಕಾರರು ಪುರಾವೆಗಳನ್ನು ಒದಗಿಸುತ್ತಾರೆ. ಪ್ರಾಚೀನ ಕಾಲದಲ್ಲಿ ವೇಶ್ಯೆಯರಿಗೆ ಉನ್ನತ ಸ್ಥಾನಮಾನಗಳಿದ್ದವು ಎಂದು ಹೇಳಲಾಗುತ್ತದೆ. ಭಾರತದ ಸಿಂಧೂ ಬಯಲಿನ ನಾಗರಿಕತೆಯ ಮಾತೃದೇವತೆಗಳ ದೇವಾಲಯಗಳಲ್ಲಿ ಸ್ತ್ರೀ–ಪುರುಷ ಗುಲಾಮರಿದ್ದರೆಂದೂ, ಅದೊಂದು ಪ್ರತಿಷ್ಠೆಯ ಸಂಕೇತವಾಗಿತ್ತು ಎಂಬುದನ್ನು ಇತಿಹಾಸ ತಿಳಿಸುತ್ತದೆ.

ಕರ್ನಾಟಕದ ಎಲ್ಲಮ್ಮ, ಹುಲಿಗೆಮ್ಮ ದೇವಾಲಯಗಳಿಗೆ ಹುಡುಗಿಯರನ್ನು ದೇವದಾಸಿಯರಾಗಿ ಬಿಡುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಧಾರ್ಮಿಕ ಆಚರಣೆಯ ಅಂಗವಾಗಿ ಮೇಲ್ನೋಟಕ್ಕೆ ಕಂಡುಬರುವ ದೇವದಾಸಿ ಪದ್ಧತಿಯ ಹಿಂದೆ ಪುರೋಹಿತಶಾಹಿ ಹಾಗೂ ಶ್ರೀಮಂತ ಮೇಲ್ವರ್ಗದವರ

ಕಾಮಲಾಲಸೆಯ ಹುನ್ನಾರುಗಳಿವೆ ಎಂಬುದು ಸ್ಪಷ್ಟವಾಗಿ ತಿಳಿಯುವುದು. "ಪ್ರಾಚೀನ ಕಾಲದಲ್ಲಿ ದೇವರಿಗೆ ಅಂಗಭೋಗ, ರಂಗಭೋಗ ಸೇವೆಗಳನ್ನು ದೇವದಾಸಿಯರು ನೀಡುತ್ತಿದ್ದ ಉಲ್ಲೇಖ ಶಾಸನಗಳಲ್ಲಿ ದೊರೆಯುವುದು"[1] ಆದರೆ ದೇವರ ಸೇವೆಯ ಆಚೆಗೆ ಅಲ್ಲಿಯ ಪುರೋಹಿತರ, ಧರ್ಮಕರ್ತರೊಂದಿಗೆ ಹಾಸಿಗೆ ಹಂಚಿಕೊಳ್ಳುವ ಕಾಯಕವನ್ನೂ ಈ ದೇವದಾಸಿಯರು ಮಾಡುತ್ತಿದ್ದರೆಂಬುದರ ಉಲ್ಲೇಖ ಯಾವ ಶಾಸನಗಳಲ್ಲಿಯೂ ದೊರೆಯುವುದಿಲ್ಲ. ಇಂದು ದೇವದಾಸಿ ಪದ್ಧತಿಯನ್ನು ಅನುಸರಿಸುವ ಬಹುತೇಕ ಮಹಿಳೆಯರು ವೇಶ್ಯಾವಾಟಿಕೆಯಂತಹ ವೃತ್ತಿಯನ್ನು ಆಯ್ಕೆಮಾಡಿಕೊಳ್ಳುವಂತಾಗಿವೆ. ಬ್ರಿಟಿಷ್ ಆಡಳಿತ ಅವಧಿಯಲ್ಲಿ ವೇಶ್ಯಾವಾಟಿಕೆಯನ್ನು ನಿಷೇಧಿಸಲಾಯಿತು. ಅದಕ್ಕಾಗಿ ಬ್ರಿಟಿಷ್ ಸರ್ಕಾರವು ವೇಶ್ಯಾವಾಟಿಕೆ ನಿಷೇಧ ಕಾಯ್ದೆಗಳನ್ನು ಜಾರಿಮಾಡಿತು. ಮುಂಬಯಿ (೧೯೨೩), ಉತ್ತರಪ್ರದೇಶ ಮತ್ತು ಬಂಗಾಲ (೧೯೩೩), ಪಂಜಾಬ್ (೧೯೩೫), ಬಿಹಾರ (೧೯೪೮), ಮೈಸೂರು ರಾಜ್ಯ (೧೯೫೬)ಗಳಲ್ಲಿ ಈ ನಿಷೇಧ ಕಾಯ್ದೆಯು ವಿವಿಧ ಹಂತಗಳಲ್ಲಿ ಜಾರಿಗೆ ಬಂದಿತು. ಭಾರತ ಸರ್ಕಾರವು ಮಹಿಳೆಯರ ಅನೈತಿಕ ವ್ಯವಹಾರ ನಿಷೇಧ ಕಾಯ್ದೆಯನ್ನು ೧೯೫೬ರಲ್ಲಿ ಇಡೀ ದೇಶಕ್ಕೆ ಅನ್ವಯಿಸುವಂತೆ ಜಾರಿಗೊಳಿಸಿತು.

"ಹಿಂದೆ ವೇಶ್ಯಾವೃತ್ತಿ ಗೌರವಯುತ ಪದ್ಧತಿಯಾಗಿದ್ದಿತು. ಕ್ರಿಶ ೬–೭ನೇ ಶತಮಾನದಲ್ಲಿ ಉನ್ನತ ಸ್ಥಿತಿಯಲ್ಲಿದ್ದ ಈ ವೃತ್ತಿಯು ಕ್ರಿ ಶ ೧೫ನೇ ಶತಮಾನದಷ್ಟೊತ್ತಿಗೆ ಬೀದಿಗೆ ಬಿದ್ದಿತು."[2] ಮನುಷ್ಯನಿಗೆ ಅನುಕೂಲತೆಗಳು ಹೆಚ್ಚಾದಂತೆ ಮೋಜಿನತ್ತ ಸಾಗುವುದು ಸಹಜ. ಮನಸ್ಸು ದುರ್ಬಲಗೊಂಡ ವ್ಯಕ್ತಿಯು ಮದ್ಯ–ಮಾನಿನಿಯರತ್ತ ಒಲಿಯುವುದು ಸಹಜ. ಈ ಕಾರಣವಾಗಿಯೇ ಸಮಾಜದೊಳಗೆ ಕೆಟ್ಟ ಪದ್ಧತಿಗಳು ಹುಟ್ಟುತ್ತಾ ಸಾಗುತ್ತವೆ. ಮಹಿಳೆಯನ್ನು ದೈಹಿಕವಾಗಿ ದುರುಪಯೋಗ ಮಾಡಿಕೊಳ್ಳುವ ವೇಶ್ಯಾವಾಟಿಕೆಯಂತಹ ಪದ್ಧತಿ ಸಮಾಜದೊಳಗೆ ಕಂಡುಬರಲು ಈ ಸಮಾಜದ ಅಸಮತೋಲನ ಅರ್ಥವ್ಯವಸ್ಥೆಯೇ ಕಾರಣ. ಸರ್ಕಾರ ಕಾನೂನುಗಳು ಸಹ ಈ ಕಳಂಕಿತ ಪದ್ಧತಿಯನ್ನು ನಿರ್ಮೂಲನ ಮಾಡಲು ಸಾಧ್ಯವಾಗಿಲ್ಲ. ಅಷ್ಟೊಂದು ಸುಲಭವಾಗಿ ಈ ವ್ಯವಸ್ಥೆ ಸಮಾಜದಿಂದ ಹೊರಹೋಗುವುದು ಸುಲಭಸಾಧ್ಯವಲ್ಲದ ವಿಚಾರವಾಗಿದೆ. ವೇಶ್ಯಾವಾಟಿಕೆಯು ಇಂದು ತನ್ನ ಸ್ವರೂಪವನ್ನು ಬದಲಿಸಿಕೊಳ್ಳುತ್ತಾ ಸಾಗುತ್ತಿದೆ. ಮಹಿಳೆಯರನ್ನು, ಚಿಕ್ಕ ಚಿಕ್ಕ ಹೆಣ್ಣುಮಕ್ಕಳನ್ನು ಕಳ್ಳತನದಲ್ಲಿ ದೇಶ ವಿದೇಶಗಳಿಗೆ ಸರಬರಾಜು ಮಾಡುವ ದಂಧೆ ವ್ಯಾಪಕವಾಗಿ ತನ್ನ ಕಬಂಧ ಬಾಹುಗಳನ್ನು ಸಮಾಜದೊಳಗೆ ಚಾಚಿದೆ. ಅಂತರ್ಜಾಲದ ಮೂಲಕ ಇದು ಗುಪ್ತವಾಗಿಯಾದರೂ ಜಾಗತಿಕ ಮಟ್ಟದ ವ್ಯವಹಾರವಾಗಿ ರೂಪುಗೊಳ್ಳುತ್ತಿದೆ. ರಷ್ಯಾ ಸಂಯುಕ್ತ ಸಂಸ್ಥಾನವು ಛಿದ್ರಗೊಳ್ಳುವ ಪೂರ್ವದಲ್ಲಿ ಅಲ್ಲಿ ವೇಶ್ಯಾವಾಟಿಕೆ ಇರಲಿಲ್ಲವೆಂದು ಎಷ್ಟೋ ಲೇಖಕರು ದಾಖಲಿಸಿದ್ದಾರೆ. ರಷ್ಯಾ ಸಂಯುಕ್ತ ಸಂಸ್ಥಾನ ಛಿದ್ರಗೊಂಡು ಸ್ವತಂತ್ರ ರಾಷ್ಟ್ರಗಳು ರೂಪುಗೊಂಡವೋ ಅಲ್ಲಿ ಮುಕ್ತ ಆರ್ಥಿಕತೆ ಪ್ರವೇಶಪಡೆಯಿತು. ಮುಕ್ತ ಆರ್ಥಿಕತೆಯು ಸಮಾಜದೊಳಗೆ ವರ್ಗಗಳನ್ನು ಸೃಷ್ಟಿಸುವ ಅಸಮತೋಲನ ಕ್ರಿಯೆಗೆ ದಾರಿಮಾಡಿಕೊಟ್ಟಿತು. ಈ ರೀತಿಯ ಅಸಮತೋಲನ ವ್ಯವಸ್ಥೆಯು ವೇಶ್ಯಾವಾಟಿಕೆಯಂತಹ ಕ್ರಿಯೆಗೆ ದಾರಿಮಾಡಿಕೊಟ್ಟಿತು ಎಂದು ಸಮಾಜವಿಜ್ಞಾನಿಗಳು

ತಿಳಿಸುವರು. ಪ್ರಾಚೀನ ಕಾಲದಲ್ಲಿ ಉಲ್ಲೇಖಿತಗೊಂಡ ವೇಶ್ಯಾ ಪದ್ಧತಿಯ ಸ್ವರೂಪಕ್ಕೂ ಪ್ರಸ್ತುತ ವೇಶ್ಯಾವಾಟಿಕೆಯ ಸ್ವರೂಪಕ್ಕೂ ಅಜಗಜಾಂತರ ವ್ಯತ್ಯಾಸಗಳಿವೆ. ಹಿಂದೆ ವೇಶ್ಯಾವಾಟಿಕೆಗೆ ಧಾರ್ಮಿಕ ಕಟ್ಟುಪಾಡುಗಳಿದ್ದವು. ಧಾರ್ಮಿಕ ಮೌಢ್ಯತೆ ಹಾಗೂ ದಾಸ್ಯದ ಅಡಿಪಾಯದ ಮೇಲೆ ವೇಶ್ಯಾವಾಟಿಕೆ ಇದ್ದಿತು. ಆದರೆ ಇಂದು ಪರಿಸ್ಥಿತಿಯೇ ಬೇರೆಯಾಗಿದೆ. ಇಂದಿಗೂ ದೇವದಾಸಿಯಂತಹ ಪದ್ಧತಿಯು ಧಾರ್ಮಿಕ ತಳಪಾಯದ ಮೇಲೆ ಇರುವುದಾದಗೂ ಅದು ಬಡತನದ ಒಂದು ಅನಿಷ್ಟ ಕ್ರಿಯೆಯಾಗಿ ರೂಪಾಂತರಗೊಂಡಿದೆ. ಹಣಗಳಿಕೆಯ ಅನಿವಾರ್ಯತೆಯನ್ನು ಈ ಸಮಾಜ ಸೃಷ್ಟಿಸಿದೆ.

ಆಧುನಿಕ ಸಮಾಜದಲ್ಲಿ ಸೂಳೆ ಹಾಗೂ ವೇಶ್ಯೆ ಎಂಬ ಪದ ಬಳಕೆಗೆ ಆಕ್ಷೇಪಗಳು ಕೇಳಿಬರುತ್ತಿವೆ. ಸಾಮಾಜಿಕವಾಗಿ ಅಶ್ಲೀಲ ಪದವೆಂದು ಗುರಿತಿಸಿರುವ ಈ ಪದಗಳಿಗೆ ಪರ್ಯಾಯವಾಗಿ ಇತ್ತೀಚೆಗೆ ಲೈಂಗಿಕ ಕಾರ್ಯಕರ್ತರು ಎಂದು ಕರೆಯಲಾಗುತ್ತಿದೆ.

ಪ್ರಭಲವಾದ ಹಿಡಿತ ಹೊಂದಿರುವ ನಮ್ಮ ಸಾಮಾಜಿಕ ನಿಯಮಗಳು ಹಾಗೂ ನೈತಿಕ ಮೌಲ್ಯಗಳನ್ನು ನಿರ್ಧರಿಸುವ ಸಾಮಾಜಿಕ ಸಂರಚನೆಯಲ್ಲಿ ಲೈಂಗಿಕ ವೃತ್ತಿಯಲ್ಲಿ ಹೆಣ್ಣುಮಕ್ಕಳು ತೊಳಲಾಡುತ್ತಿದ್ದಾರೆ. ಸಾಮಾಜಿಕ ಕಳಂಕದಿಂದ ನರಳುತ್ತಿರುವ ಲೈಂಗಿಕ ಕಾರ್ಯಕರ್ತರಿಗೆ ಒಂದು ಅಸ್ತಿತ್ವವನ್ನು ತಂದುಕೊಡುವ ಪ್ರಯತ್ನಗಳೂ ನಡೆದಿವೆ. ಬೇರಾವುದೇ ವೃತ್ತಿಯಂತೆ ಲೈಂಗಿಕ ವೃತ್ತಿಯನ್ನು ಒಂದು ಕೆಲಸ ಎಂದು ಭಾವಿಸದೇ ಇರುವುದೇ ಇದನ್ನು ಅನುಸರಿಸುತ್ತಿರುವವರು ಸಂಕಷ್ಟ ಎದುರಿಸುವಂತೆ ಮಾಡಿದೆ.

ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ವೇಶ್ಯಾವೃತ್ತಿಯು ಜೀವಂತವಾಗಿದೆಯಂದರೆ ಅದಕ್ಕೆ ಕಾರಣ ಅದು ಸಮಾಜದ ಅಗತ್ಯತೆಯನ್ನು ಪೂರೈಸುವ ಕೆಲಸವನ್ನು ನಿರಂತರವಾಗಿ ಮಾಡುತ್ತಿರುವುದೇ ಅದರ ಜೀವಂತಿಕೆಗೆ ಕಾರಣ ಅನಿಸುತ್ತದೆ. ಆದರೆ ಈ ಸಮಾಜವು ಲೈಂಗಿಕ ಕಾರ್ಯಕರ್ತೆಯರನ್ನು ವೃತ್ತಿನಿರತ ಸಮೂಹವೆಂದು ಪರಿಭಾವಿಸುತ್ತಿಲ್ಲ. ಅದರ ಬದಲಾಗಿ ಸಾಮಾಜಿಕ ಸ್ವಾಸ್ಥ್ಯ, ಆರೋಗ್ಯ, ಮೌಲ್ಯಗಳನ್ನು ಹಾಳು ಮಾಡುವ ಮಹಿಳಾ ಸಮೂಹವೆಂದು ಪರಿಗಣಿಸಲಾಗುತ್ತಿದೆ. ಆದರೆ ಅಂತಹ ಗುಂಪುಗಳನ್ನಿರಿಸಿಕೊಂಡೇ ಹಣ ಮಾಡುವ ದಂಧೆಯಲ್ಲಿ ತೊಡಗಿರುವ ಪ್ರಭಾವಿ ಗುಂಪು ಇಲ್ಲಿದೆಯೆಂಬುದನ್ನು ಈ ಸಮಾಜವು ಮರೆತೇಬಿಡುತ್ತದೆ. ಲೈಂಗಿಕ ಕಾರ್ಯಕರ್ತೆಯರಾದ ಮಹಿಳೆಯರನ್ನು ನಿಯಂತ್ರಣದಲ್ಲಿಡಲು ಸಮಾಜವು ಸುರಕ್ಷಾ ಗೃಹ, ಸಾಂತ್ವನ ಕೇಂದ್ರ, ಪೋಲಿಸ್ ವ್ಯವಸ್ಥೆಗಳ ಮೂಲಕ ನಿಯಂತ್ರಣದಲ್ಲಿಡಲು ಪ್ರಯತ್ನಿಸುತ್ತಿದೆಯಾಗಲಿ ಅದರ ಮೂಲ ಬೇರುಗಳು ಎಲ್ಲಿವೆ ಎಂಬುದನ್ನು ಹುಡುಕುವ ಪ್ರಯತ್ನವನ್ನೇ ಮಾಡುತ್ತಿಲ್ಲ. ಅನೈತಿಕ ವ್ಯವಹಾರವನ್ನು ತಡೆಗಟ್ಟುವ ಕುಂಟು ನೆಪವೊಡ್ಡುವ ಪೋಲಿಸ್ ವ್ಯವಸ್ಥೆ ಲೈಂಗಿಕ ಕಾರ್ಯಕರ್ತೆಯರನ್ನು ತಮ್ಮ ಲಾಭಕ್ಕಾಗಿ (ಹಫ್ತಾ)ಅವರನ್ನು ಹೆದರಿಸಿದಂತೆ ನಟಿಸುತ್ತಲೇ ಅವರಿಂದ ಬರುವ ಮಾಮೂಲನ್ನು ಜಪ್ತಿ ಮಾಡುತ್ತಲೇ ಸಾಗುತ್ತಿದೆ. ಅಷ್ಟೇ ಅಲ್ಲ ಎಷ್ಟೋ ಪುರುಷ ಪೋಲಿಸ್ ವ್ಯವಸ್ಥೆ ಅಂತಹ ಅಸಾಯಹಕ ಮಹಿಳೆಯರೊಂದಿಗೆ ತಮ್ಮ ದೈಹಿಕ ಲಾಲಸೆಯನ್ನು ತೀರಿಸಿಕೊಳ್ಳುತ್ತಿರುವುದೂ ಲೈಂಗಿಕ

ಕಾರ್ಯಕರ್ತೆಯರಿಂದಲೇ ತಿಳಿದುಬರುತ್ತದೆ. ಪೋಲಿಸ್ ವ್ಯವಸ್ಥೆಯೊಂದಿಗೆ ಕೈಜೋಡಿಸದಿದ್ದರೆ ಅವರ ಮೇಲೆ ನಿರಂತರವಾದ ದಾಳಿ ಕಿರುಕುಳಗಳು ತಪ್ಪಿದ್ದಲ್ಲ ಎಂಬ ಮಾತೂ ಕೇಳಿಬರುತ್ತದೆ.

"ಲೈಂಗಿಕ ವೃತ್ತಿನಿರತರ ಮೇಲೆ ನಡೆದಷ್ಟು ದಬ್ಬಾಳಿಕೆ, ದೌರ್ಜನ್ಯಗಳು ಮತ್ತಾವುದೇ ಇತರ ವೃತ್ತಿನಿರತರ ಮೇಲೆ ನಡೆದಿಲ್ಲ."[೩] ಲೈಂಗಿಕ ವೃತ್ತಿಯು ಪಾಪಪೂರ್ಣವಾದದ್ದು ಎಂಬ ನೆಪವೊಡ್ಡಿ ಅದರ ಇಡೀ ಸಂರಚನೆ ಮತ್ತು ನಿರ್ವಹಣೆಯನ್ನು ಸಾಮಾಜಿಕ ವ್ಯವಸ್ಥೆಯು ನೀತಿ ನಿಯಮಗಳ ಮುಖವಾಡಹಾಕಿ ಮುಚ್ಚಿಟ್ಟಿದೆ. ಪಾರದರ್ಶಕವಲ್ಲದ ಈ ವೃತ್ತಿಗೆ ಸಾಮಾಜಿಕ ಅಧಿಕೃತತೆ ಇಲ್ಲದೇ ಇರುವುದೇ ಲೈಂಗಿಕ ವೃತ್ತಿನಿರತರಿಗೆ ಶಾಪವಾಗಿದೆ.

ಪುರುಷನಂತೆ ಮಹಿಳೆಯೂ ಮನುಷ್ಯಳೆ. ಅವಳಿಗೂ ಆಸೆ ಆಮಿಷಗಳಿವೆ. ತನ್ನ ಕಾಮತೃಷೆಯನ್ನು ಬೇಕಾಬಿಟ್ಟಿಯಾಗಿ ತೀರಿಸಿಕೊಳ್ಳಬಹುದೆಂದು ತಿಳಿಯುವ ಪುರುಷನು ತನ್ನ ಅಧೀನದಲ್ಲಿರುವ ಮಹಿಳೆಯು ಅದೇ ತಪ್ಪುಗಳನ್ನು ಮಾಡಿದರೆ ಕ್ಷಮಿಸಲಾರನು. "ತಾನು ಯಾವನಿಗೆ ಅಧೀನನಾಳಾಗಿರುವಳೋ ಅವನ ಕಣ್ಣಿಗೆ ಬೀಳದಂತೆ ಮತ್ತೊಬ್ಬನೊಂದಿಗೆ ತನ್ನ ದೈಹಿಕ ಆಸೆಗಳನ್ನು ತೀರಿಸಿಕೊಳ್ಳುವ ಹೆಣ್ಣನ್ನು ಪುರುಷಶಾಹಿಯು ಮಹಾಪರಾಧಿ ಎಂದು ಪರಿಗಣಿಸುವುದು ಎಂದು ಏಂಗೆಲ್ಸ್ ಹೇಳುತ್ತಾರೆ."[೪] ಶೀಲತ್ವವೆಂಬುದು ಕೇವಲ ಮಹಿಳೆಗೆ ಸೀಮಿತಗೊಳಿಸಿದ ಈ ಸಮಾಜವು ಪುರುಷ ಹಾಗೂ ಮಹಿಳೆಯರ ಮಧ್ಯದಲ್ಲಿ ಅಸಮತೋಲನ ತರಲು ಕಾರಣವಾಗಿದೆ. ಶೀಲವೆಂಬ ಮೌಲ್ಯವನ್ನು ಮಹಿಳೆಯ ಮೇಲೆ ಹೇರುವುದರ ಮೂಲಕ ಅವಳನ್ನು ಖಾಸಗಿ ಆಸ್ತಿಯಾಗಿಸಲಾಗಿದೆ.

ಬಡತನ, ನಿರುದ್ಯೋಗ, ಭಿಕ್ಷಾಟನೆ, ಮಾದಕ ವಸ್ತುಗಳ ಬಳಕೆ ಇತ್ಯಾದಿ ಎಲ್ಲಾ ಸಮಾಜಗಳಲ್ಲಿಯೂ ಕಂಡುಬರುವ ಸಾಮಾಜಿಕ ಸಮಸ್ಯೆಗಳಾಗಿವೆ. ಇದರಲ್ಲಿ ಪ್ರಮುಖವಾದುದೆಂದು ವೇಶ್ಯಾವೃತ್ತಿಯನ್ನು ಪರಿಗಣಿಸಲಾಗುತ್ತಿದೆ. ಇಂದು ಜಗತ್ತಿನಾದ್ಯಂತ ವೇಶ್ಯಾವೃತ್ತಿ ಚಾಲ್ತಿಯಲ್ಲಿದ್ದರೆ ಅದಕ್ಕೆ ಪ್ರಮುಖ ಕಾರಣ ಬಡತನವಾಗಿದೆ. ಹೆಣ್ಣನ್ನು ಮನುಷ್ಯಳೆಂದು ಪರಿಗಣಿಸಿ ಅವಳನ್ನು ಭೋಗದ ವಸ್ತುವೆಂದೇ ಪರಿಗಣಿಸಲಾಗುತ್ತಿದೆ. ಮನು ಹೆಣ್ಣನ್ನು ಕತ್ತಿಯ ಅಲುಗೆಂದೂ, ಭೋಗದ ವಸ್ತುವೆಂದೂ ಹೇಳಿದ್ದಾನೆ.

ದುಡಿಮೆಯ ಅನ್ಯ ಕೌಶಲ್ಯಗಳು ತಿಳಿಯದ, ಬಡತನದ ಬೇಗೆಗೆ ಬಸವಳಿದ ಹೆಣ್ಣು ಅಸಾಹಾಯಕವಾಗಿ ತನ್ನ ದೇಹವನ್ನೇ ಪರಪುರುಷನಿಗೆ ಮಾರಾಟದ ಸರಕಾಗಿಸುವಳು. ಇದೊಂದು ಅಮಾನುಷ ಕೃತ್ಯವೆಂದರೂ ಸರಿಯೆ. ಭಾರತೀಯ ಸಮಾಜದಲ್ಲಿ ಅನೇಕ ಮೌಢ್ಯಗಳು ತುಂಬಿವೆ. ಅಂತಹ ಮೌಢ್ಯಗಳೂ ಸಹ ಹೆಣ್ಣು ಪರರೊಂದಿಗೆ ದೇಹ ಹಂಚಿಕೊಳ್ಳುವಂತೆ ಮಾಡಿದೆ. ಹೆಣ್ಣಿನ ಮೌಢ್ಯವನ್ನೇ ಬಂಡವಾಳವಾಗಿಸಿಕೊಂಡು ದುರ್ಬಳಕೆ ಮಾಡಿಕೊಳ್ಳುವ ಗಂಡುಗಳು ನೂರಾರು ಜನರಿರುವರು. ಅದರಲ್ಲೂ ಧಾರ್ಮಿಕ ಮೌಢ್ಯವನ್ನು ತಮ್ಮ ಅಸ್ತ್ರವಾಗಿಸಿಕೊಳ್ಳುವ ಬಂಡವಾಳಶಾಹಿ ಮೇಲ್ಜಾತಿ, ವರ್ಗದ ಜನರು ಮುಗ್ಧ ಮಹಿಳೆಯರನ್ನು ನಿರಂತರವಾಗಿ ಶೋಷಣೆ ಮಾಡುತ್ತಲೇ ಬರುತ್ತಿರುವರು.

ವೇಶ್ಯಾವೃತ್ತಿಯೆಂಬುದು ಸಮಾಜದಲ್ಲಿ ಕಳಂಕಿತ ವೃತ್ತಿಯಾಗಿ ಕಂಗೊಳಿಸುತ್ತದೆ. ಇಲ್ಲಿ ಹೆಣ್ಣು ಕೇವಲ ಹಣಕ್ಕೆ ದೇಹವನ್ನು ಬಿಕರಿ ಮಾಡುವುದಿಲ್ಲ. ಅದರಾಚೆಗೆ ಅವಳ ಮನಸ್ಸು, ಸ್ವಾಭಿಮಾನಗಳೂ ಬಿಕರಿಯಾಗುತ್ತವೆ. ಪ್ರೌಢೆಯಾದಾಗಿನಿಂದಲೂ ನಿರಂತರವಾಗಿ ಎಷ್ಟೋ ಪುರುಷರಿಂದ ಲೈಂಗಿಕ ಶೋಷಣೆಗೆ ಲೈಂಗಿಕ ಕಾರ್ಯಕರ್ತೆ ಒಳಗಾಗುವಳು. ಮೇಲ್ನೋಟಕ್ಕೆ ವೇಶ್ಯೆಯೆಂದು ಯಾರು ತುಚ್ಛೀಕರಿಸುವರೋ ಅಂತಹ ವ್ಯವಸ್ಥೆಯೇ ಅವಳನ್ನು ದುರ್ಬಳಕೆ ಮಾಡಿಕೊಳ್ಳುತ್ತದೆ ಎಂಬುದನ್ನು ಮರೆಯಲಾಗದು.

ವೇಶ್ಯಾವಾಟಿಕೆಯೆಂಬುದು ಸಾಮಾಜಿಕ ವ್ಯವಸ್ಥೆಯ ಅತ್ಯಂತ ಗಂಭೀರವಾದ ಸಮಸ್ಯೆ ಎಂದು ಪರಿಗಣಿತವಾಗಿದೆ. ಪ್ರಸ್ತುತ ದಿನಗಳಲ್ಲಿ ಈ ಸಮಸ್ಯೆ ಸಮಾಜದಲ್ಲಿ ಉಳಿಯಲು ಎರಡು ಪ್ರಮುಖ ಕಾರಣಗಳಿವೆ.

"ಮೊದಲನೆಯದು ಬಡತನವಾದರೆ ಎರಡನೆಯದು ಜಾಗತಿಕ ಕಾರಣಗಳಿಗಾಗಿ ಸಮಾಜದಲ್ಲುಂಟಾಗುತ್ತಿರುವ ಒತ್ತಡಗಳು"[೫] ಎಂದು ಹೇಳಲಾಗುತ್ತಿದೆ. ಒಂದು ಕಡೆ ತನ್ನ ಹಾಗೂ ತನ್ನ ಕುಟುಂಬದ ಹಸಿವನ್ನು ಹಿಂಗಿಸಲು ಬಿಡಿಗಾಸಿಗಾಗಿ ದೇಹವನ್ನು ಮಾರಾಟಕ್ಕಿಡುವ ಮಹಿಳೆಯಾದರೆ ಮತ್ತೊಂದು ಕಡೆ ಜಾಗತೀಕರಣದ ಪ್ರಭಾವದಿಂದ ಸಮಾಜದಲ್ಲಿ ಉಂಟಾಗಿರುವ ಒಯ್ಯಾರಗಳಿಗೆ ಬಲಿಯಾದ ಮಹಿಳೆ ಅವುಗಳನ್ನು ಹೇಗಾದರೂ ಮಾಡಿ ಪಡೆಯಲೇಬೇಕೆಂಬ ಹಟದಿಂದಾಗಿ ವಿದ್ಯಾವಂತರೆನಿಸಿಕೊಂಡ ಮಹಿಳೆಯರೂ ಹಣದಾಸೆಗಾಗಿ ವೇಶ್ಯಾ ವೃತ್ತಿಗೆ ಧುಮುಕುತ್ತಿರುವುದನ್ನು ಕಾಣುತ್ತಿದ್ದೇವೆ. ಈ ಎರಡರಾಚೆಗೂ ಹಣದ ಆಸೆಗಾಗಿ ಅಮಾಯಕ ಬಾಲಕಿಯರನ್ನು ಬಲತ್ಕಾರವಾಗಿ ವೇಶ್ಯಾವಾಟಿಕೆಗೆ ತಳ್ಳುವ ಜಾಲವೂ ಈ ಸಮಾಜದಲ್ಲಿದೆ. ಐಷಾರಾಮಿ ಬದುಕಿಗೆ ಮರುಳಾದ ಎಷ್ಟೋ ವ್ಯಾಸಂಗನಿರತ ಯುವತಿಯರೂ ಲೈಂಗಿಕ ಕಾರ್ಯಕರ್ತೆಯರಾಗಲು ಪ್ರೇರಣೆಯಾಗಿದೆ.

"ರಾಷ್ಟ್ರೀಯ ಸಾಮಾಜಿಕ ಕಾರ್ಯಪಡೆ (ಖಓಖಂಈ) ಯ ಸಮೀಕ್ಷೆಯ ಪ್ರಕಾರ ಪ್ರವಾಸಿ ತಾಣಗಳಲ್ಲಿ ಪ್ರವಾಸಿಗರು ಹೆಚ್ಚಾಗಿ ವೀಕ್ಷಣೆಗೆ ಬರುವ ಸಮಯದಲ್ಲಿ ಪ್ರೌಢಾವಸ್ಥೆಯ ಯುವತಿಯರ ಹಾಜರಾತಿಯು ಗಣನೀಯವಾಗಿ ಕಡಿಮೆಯಾಗಿರುವುದಾಗಿ ತಿಳಿಸಿದೆ. ಉದಾಹರಣೆಗೆ ಗೋವಾ ರಾಜ್ಯದಲ್ಲಿ ಅಕ್ಟೋಬರ್‌ನಿಂದ ಮಾರ್ಚ್ ತಿಂಗಳ ನಡುವಿನ ಮಾಸಗಳಲ್ಲಿ ಶಾಲಾ ಕಾಲೇಜುಗಳ ಹಾಜರಾತಿಯಲ್ಲಿ ಯುವತಿಯರ ಪ್ರಮಾಣವು ಕ್ಷೀಣಿಸುವುದೆಂದು ವರದಿಯು ತಿಳಿಸುತ್ತದೆ"[೬] ಸಾಮಾಜಿಕವಾಗಿ ಇಂದು ವೇಶ್ಯಾವಾಟಿಕೆಯ ಜಾಲಕ್ಕೆ ಹೆಚ್ಚು ಹೆಚ್ಚು ಮಹಿಳೆಯರು ತಳ್ಳಲ್ಪಡುತ್ತಿದ್ದಾರೆ. ಒಂದು ಅಂದಾಜಿನ ಪ್ರಕಾರ ಭಾರತದಲ್ಲಿ ದಿನಕ್ಕೆ ಕನಿಷ್ಠ ೨೦೦ ಮಹಿಳೆಯರು ವೇಶ್ಯಾವೃತ್ತಿಗೆ ಪ್ರವೇಶಗೊಳ್ಳುತ್ತಿರುವರಂತೆ. ಇದಕ್ಕೆ ಮುಖ್ಯಕಾರಣ ಅನ್ಯ ವೃತ್ತಿಗಳಲ್ಲಿ ಅವಕಾಶಗಳ ಕೊರತೆ ಎಂದು ಹೇಳಲಾಗುತ್ತಿದೆ. ಇಂದು ಗ್ರಾಮೀಣ ಪ್ರದೇಶವು ಮಳೆಯಾಶ್ರಿತ ಕೃಷಿಯನ್ನೇ ಅವಲಂಭಿಸಿರುವುದು. ಅಸಮತೋಲನ ಮಳೆಯಿಂದಾಗಿ ಕೃಷಿ ಚಟುವಟಿಕೆಗಳು ಕುಂಟಿತಗೊಳ್ಳುತ್ತಿವೆ. ಕೃಷಿಕೂಲಿಕಾರರು ಅನಿವಾರ್ಯವಾಗಿ ಕೂಲಿಯನ್ನರಸಿ ನಗರ ಪ್ರದೇಶಗಳಿಗೆ ಗುಳೆ ಹೋಗುತ್ತಿರುವರು. ಗುಳೆ ನಿಯಂತ್ರಣಕ್ಕೆ

ಸರ್ಕಾರ ಏನೆಲ್ಲಾ ಪ್ರಯತ್ನಪಡುವುದಾದರೂ ಗುಳೆಯನ್ನು ನಿಯಂತ್ರಿಸಲಾಗುತ್ತಿಲ್ಲ. ಗುಳೆಹೋಗುವ ಕುಟುಂಬಗಳ ಬಹುತೇಕ ಮಹಿಳೆಯರು ನಗರ ಪ್ರದೇಶಗಳಲ್ಲಿ ಕೂಲಿ ಸಿಗದೇಹೋದಾಗ ಅನ್ಯ ಮಾರ್ಗಗಳಿಲ್ಲದೆ ವೇಶ್ಯಾವೃತ್ತಿಯನ್ನೇ ಆಯ್ಕೆಮಾಡಿಕೊಳ್ಳಬೇಕಾದ ಸ್ಥಿತಿ ಉಂಟಾಗುವುದು. ಅದೇ ರೀತಿಯಾಗಿ ನಿರುದ್ಯೋಗವೂ ಈ ವ್ಯವಸ್ಥೆಗೆ ದಾರಿಮಾಡಿಕೊಡುತ್ತಿದೆ. ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ಮುಚ್ಚಲ್ಪಟ್ಟ ಕಾರ್ಖಾನೆಗಳು ತಮ್ಮ ಕೆಲಸಗಾರರನ್ನು ಬೀದಿಗೆ ತಳ್ಳುವುದರೊಂದಿಗೆ ಆ ಕಾರ್ಮಿಕರ ಕುಟುಂಬಗಳೂ ಬೀದಿಗೆ ಬೀಳುತ್ತಿವೆ. ಹೀಗೆ ಬೀದಿಗೆ ಬಿದ್ದ ಕುಟುಂಬಗಳ ಮಹಿಳೆಯರನ್ನು ಅನಿವಾರ್ಯವಾಗಿ ವೇಶ್ಯಾವೃತ್ತಿಯ ಸುಳಿಗೆ ಸಿಲುಕಿಸಲಾಗುತ್ತದೆ. ವೇಶ್ಯಾವೃತ್ತಿ ಆ ಮಹಿಳೆಯರ ಆಯ್ಕೆಯಾಗಿರದೆ ಅನಿವಾರ್ಯವಾಗಿ ಹೇರಲ್ಪಟ್ಟಿದ್ದಾಗಿರುತ್ತದೆ. ಈ ವ್ಯವಸ್ಥೆಯೇ ಅನಿವಾರ್ಯ ಕಾರಣಗಳಿಗಾಗಿ ಮಹಿಳೆಯರು ವೇಶ್ಯಾವೃತ್ತಿಗೆ ಪ್ರವೇಶಿಸಲು ಕಾರಣವಾಗಿದೆ. ಆದರೆ ಅದೇ ಸಮಾಜವೇ ಅವರನ್ನು ತುಂಬಾ ನಿಕೃಷ್ಟವಾಗಿ ಕಾಣುತ್ತಿದೆ. "ಪಶ್ಚಿಮ ಬಂಗಾಲದ ಕೊಲ್ಕತ್ತಾದ ಸೊನಾಗಾಚಿ ಪ್ರದೇಶದಲ್ಲಿ ವೇಶ್ಯಾ ವೃತ್ತಿನಿರತ ಲೈಂಗಿಕ ಕಾರ್ಯಕರ್ತೆಯರು ರಾಷ್ಟ್ರೀಯ ಸಮಾವೇಶವೊಂದನ್ನು ನಡೆಸಿದರು. ರಾಷ್ಟ್ರೀಯ ಸಮಾವೇಶದಲ್ಲಿ ತಮ್ಮ ವೃತ್ತಿಗೆ ಅವಹೇಳನಕಾರಿ ಪದಗಳನ್ನು ಬಳಸದೆ ಗೌರವಯುತ ಪದಗಳನ್ನು ಉಪಯೋಗಿಸಬೇಕು, ಸಾಮಾಜಿಕವಾಗಿ ಪೋಲಿಸ್ ವ್ಯವಸ್ಥೆ ಹಾಗೂ ಗೂಂಡಾ ವ್ಯವಸ್ಥೆಯಿಂದ ತಮಗುಂಟಾಗುತ್ತಿರುವ ಕಿರುಕುಳದಿಂದ ತಮ್ಮನ್ನು ಪಾರುಮಾಡಲು ತಮ್ಮ ವೃತ್ತಿಗೆ ಮಾನ್ಯತೆಯನ್ನು ನೀಡಿ ತಾವೂ ಗೌರವಯುತವಾಗಿ ಬಾಳುವಂತೆ ಮಾಡಬೇಕೆಂದು ಹಕ್ಕೊತ್ತಾಯ ಮಾಡಿದರು."[೭] ೧೯೯೫–೯೬ರ ಮಹಿಳಾ ಆಯೋಗವು "ವೇಶ್ಯಾವಾಟಿಕೆಯಲ್ಲಿರುವ ಮಹಿಳೆ ಹಾಗೂ ಮಕ್ಕಳ ಮೇಲೆ ಸಾಮಾಜಿಕ ಹಿಂಸೆ ಎಂಬ ವರದಿಯಲ್ಲಿ ವಿಶ್ವ ಆರೋಗ್ಯ ಸಂಸ್ಥೆಯ ವಾಣಿಜ್ಯ ಲೈಂಗಿಕ ವೃತ್ತಿಯವರು, ಬಾಲ್ಯವೇಶ್ಯೆ, ವಿಕ್ರಯ ಇತ್ಯಾದಿ ಪದ ಬಳಕೆ ಮಾಡಿರುವುದನ್ನು ಆಧರಿಸಿ ಅದಕ್ಕೆ ತನ್ನ ಸಹಮತವನ್ನು ಸೂಚಿಸಿದೆ"[೮]

ಲೈಂಗಿಕ ಕಾರ್ಯಕರ್ತೆಯನ್ನು ಕಳಂಕಿತಳೆಂದು ಕರೆಯುವ ಈ ಸಮಾಜವು ಅವರಿಗೆ ಎಂತಹ ಮಾನವ ಹಕ್ಕುಗಳನ್ನು ನೀಡಬಹುದು. ಹಾಗಾಗಿಯೇ ಎಚ್ಚೆತ್ತ ವೇಶ್ಯಾವೃತ್ತಿನಿರತ ಲೈಂಗಿಕ ಕಾರ್ಯಕರ್ತೆಯರು ತಮ್ಮ ವೃತ್ತಿಗೆ ಅಂಟಿರುವ ಕಳಂಕಗಳನ್ನೆಲ್ಲಾ ತೊಡೆದುಹಾಕಿ ಅದಕ್ಕೆ ವೃತ್ತಿಯ ಮಾನ್ಯತೆಯನ್ನು ತಂದುಕೊಳ್ಳಲು ತಾವೇ ಸ್ವತಃ ಪ್ರಯತ್ನಿಸುತ್ತಿರುವರು.

ಮಹಿಳಾ ಆಯೋಗದ ವರದಿಯ ಪ್ರಕಾರ "ವೃತ್ತಿನಿರತ ವೇಶ್ಯೆಯರಿಂದ ಸರ್ಕಾರವು ನ್ಯಾಯಾಲಯಗಳ ದಂಡಗಳ ಮೂಲಕ ಪ್ರತಿವರ್ಷ ಮೂರು ಕೋಟಿ ಆದಾಯ ಪಡೆಯುತ್ತಿದೆ. ವಕೀಲರು ಕಾನೂನು ಶುಲ್ಕದ ರೂಪದಲ್ಲಿ ಪ್ರತಿವರ್ಷ ಒಂಭತ್ತುಕೋಟಿ ರೂಪಾಯಿ ಪಡೆಯುತ್ತಿರುವರು. ಕಾನೂನು ಪರಿಪಾಲನೆಗೆಂದೇ ನೇಮಿಸಲ್ಪಟ್ಟ ಪೋಲಿಸ್ ಇಲಾಖೆ ಸುಮಾರು ಹದಿನೈದು ಕೋಟಿ ರೂಪಾಯಿಗಳಷ್ಟು ಹಣವನ್ನು ಮಾಮೂಲಿ ಹೆಸರಿನಲ್ಲಿ ವಸೂಲಿ ಮಾಡುತ್ತದೆ. ಔಷಧಿ ಕಾರ್ಖಾನೆಗಳು ವೇಶ್ಯಾವೃತ್ತಿನಿರತ ಮಹಿಳೆಯರಿಂದ ಎಂಭತ್ತು ಕೋಟಿಗೂ ಹೆಚ್ಚು ಲಾಭ ಗಳಿಸುತ್ತಿರುವರು. ಈ ಮಹಿಳೆಯರಿಂದ

ಪ್ರತಿಶತ ಹದಿನೈದು ಕೋಟಿಯಷ್ಟು ಬಡ್ಡಿರೂಪದಲ್ಲಿ ಹಣ ವಸೂಲಿಯಾಗುವುದು. ಹೀಗೆ ಲೈಂಗಿಕ ವೃತ್ತಿನಿರತ ಮಹಿಳೆಯರಿಂದ ಪ್ರತಿಶತ ಎರಡುನೂರು ಕೋಟಿಗೂ ಅಧಿಕ ವಹಿವಾಟು ನಡೆಯುತ್ತದೆ."[೯] ಲೈಂಗಿಕ ವೃತ್ತಿನಿರತ ಮಹಿಳೆ ತನ್ನ ಪ್ರಾಣವನ್ನೇ ಪಣವಾಗಿಟ್ಟು ಅತ್ಯಂತ ಅಪಾಯಕರ ಪರಿಸ್ಥಿತಿಯಲ್ಲಿ ತನ್ನ ಮೇಲಾಗುವ ಮಾನಸಿಕ, ದೈಹಿಕ ಹಿಂಸೆಗಳನ್ನು ಪರಿಗಣಿಸದೆ ದುಡಿಯುವ ಹಣದಲ್ಲಿ ಪಾಲು ಪಡೆಯುವ ಈ ವ್ಯವಸ್ಥೆ, ಸರ್ಕಾರ ಅವರ ಕುರಿತು ಸ್ವಲ್ಪವೂ ಚಿಂತಿಸದೆ ಅವರಿಗೆ ಕಾನೂನಾತ್ಮಕ ರಕ್ಷಣೆ ನೀಡದೆ ಬೀದಿಗೆ ತಳ್ಳುವುದು ಮಾನವ ಹಕ್ಕುಗಳ ಉಲ್ಲಂಘನೆಯಲ್ಲದೆ ಮತ್ತೇನಾಗಲು ಸಾಧ್ಯ. ಯಾವುದೇ ವೃತ್ತಿಯಲ್ಲಿ ತೊಡಗಿರುವವರು ತನ್ನ ಶ್ರಮದ ಫಲವನ್ನು ಬಳಕೆಮಾಡಿಕೊಳ್ಳುವುದು ಸೂಕ್ತವಾದ, ನ್ಯಾಯಸಮ್ಮತವಾದ ಹಕ್ಕು. ಆದರೆ ವೇಶ್ಯಾವೃತ್ತಿಯನ್ನು ಮಾಡುವ ವರ್ಗಕ್ಕೆ ಸೂಕ್ತವಾದ ಮಾನ್ಯತೆ ನೀಡಿ ಅವರೂ ಗೌರವಯುತವಾಗಿ ಬಾಳುವಂತೆ ಮಾಡಬೇಕಾದುದು ಸರ್ಕಾರದ ಕರ್ತವ್ಯವಾಗಿದೆ. ಆದರೆ ಸರ್ಕಾರವು ಲೈಂಗಿಕ ಕಾರ್ಯಕರ್ತೆಯರಿಗೆ ಮಾನ್ಯತೆ ನೀಡಲು ಹಿಂಜರಿಯುತ್ತಿದೆ. ಮಾನ್ಯತೆ ನೀಡಲು ಹಿಂಜರಿಯುವುದಾದರೆ ಅವರಿಗೆ ಗೌರವಯುತವಾಗಿ ಬಾಳಲು ಪರ್ಯಾಯ ಮಾರ್ಗಗಳನ್ನು ಸೂಚಿಸಿ ಅವರಿಗೆ ಆರ್ಥಿಕ ಬೆಂಬಲ, ಪರವಾನಿಗೆ ಇತ್ಯಾದಿಗಳನ್ನು ನೀಡುವ ಕಾರ್ಯವನ್ನಾದರೂ ಸರ್ಕಾರ ಮಾಡಬೇಕು. ಆದರೆ ಅದನ್ನೂ ಈ ವ್ಯವಸ್ಥೆಯಲ್ಲಿ ಮಾಡಲಾಗುತ್ತಿಲ್ಲವೆಂಬುದು ನಾಚಿಗೆಕಾರಕ ವಿಚಾರವಾಗಿದೆ. "ನಮ್ಮ ಕಾನೂನುಗಳಲ್ಲಿ ವೇಶ್ಯಾವೃತ್ತಿ ನಿಷೇಧಿಸಲ್ಪಟ್ಟಿಲ್ಲ, ನಿಷೇಧಿಸಲ್ಪಟ್ಟಿರುವುದು ವಿಕ್ರಯ ಮಾತ್ರ."[೧೦] ಎಂಬುದು ಸತ್ಯದ ಮಾತಾಗಿದೆ. ಈ ವಿಕ್ರಯವನ್ನು ತಡೆಗಟ್ಟಲು ಸರ್ಕಾರಗಳಿಗೆ ಸಾಧ್ಯವಾಗುತ್ತಿಲ್ಲ ಎಂಬುದು ಅಧ್ಯಯನದಿಂದ ತಿಳಿದಿದೆ. ಅಸಂಖ್ಯಾತ ಮುಗ್ಧ ಹೆಣ್ಣುಮಕ್ಕಳನ್ನು ಪಶುಗಳಂತೆ ವ್ಯಾಪಾರ ಮಾಡಲಾಗುತ್ತಿದೆ. ಈ ವ್ಯಾಪಾರದ ಮಧ್ಯವರ್ತಿಗಳು ಬಲಿಷ್ಠರಾಗಿರುವರು. ಹೀಗಾಗಿ ಹೆಣ್ಣುಮಕ್ಕಳ ವ್ಯಾಪಾರವನ್ನು ತಡೆಗಟ್ಟುವಲ್ಲಿ ವ್ಯವಸ್ಥೆ ಸೋತಿದೆ. ಎಷ್ಟೋಸಾರಿ ಮಹಿಳಾ ವ್ಯಾಪಾರ ದಂಧೆಯನ್ನು ಭೇದಿಸಿ ತಡೆಗಟ್ಟಲಾಯಿತು ಎಂಬ ವರದಿಗಳು ಅಲ್ಲೊಂದು, ಇಲ್ಲೊಂದು ಕೇಳಿಬರುವವು. ಇಲ್ಲಿ ಗಮನಿಸಬೇಕಾದ ಮುಖ್ಯ ವಿಷಯವೆಂದರೆ ಮನಃಪೂರ್ವಕವಾಗಿ ಭೇದಿಸದೆ ಭೇದಿಸಿದಂತೆ ನಾಟಕವಾಡುವ, ಸುದ್ದಿ ಮಾಧ್ಯಮದಲ್ಲಿ ಪ್ರಚಾರ ಗಿಟ್ಟಿಸಿಕೊಳ್ಳುವಷ್ಟಕ್ಕೇ ಅದು ಸೀಮಿತವಾಗುತ್ತದೆ. ಒಮ್ಮೆ ಮಾರಾಟವಾಗಿ ಈ ಜಾಲದೊಳಗೆ ಮಹಿಳೆ ಸಿಲುಕಿಕೊಂಡರೆ ಹೊರಬರುವುದು ಅಷ್ಟು ಸುಲಭದ ಮಾತಲ್ಲ. ಅಡ್ಡೆಯ ಮಾಲೀಕನ ತೊತ್ತಿನವಳಾಗಿ ಗುಲಾಮಳಂತೆ ಜೀವನ ನಡೆಸಿ ಜೀವ ಸವೆಸಿ ಇನ್ನು ನಿರುಪಯುಕ್ತಳು ಎನಿಸಿಕೊಂಡಾಗಲೇ ಹೊರದಬ್ಬಲ್ಪಡುತ್ತಾಳೆ. ಇಂತಹ ವ್ಯಾಪಾರವನ್ನು ಮಾಧ್ಯಮಗಳು ಮಾಂಸದ ವ್ಯಾಪಾರ ಎಂದು ಕರೆಯುವ ಮೂಲಕ ತಮ್ಮ ನೈತಿಕ ದಿವಾಳಿತನವನ್ನು ಪ್ರದರ್ಶಿಸಿವೆ. ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಎಂದು ಕರೆಯುವ ಮಾನವ ಸಹಜ ಹಕ್ಕುಗಳು ಲೈಂಗಿಕ ವೃತ್ತಿನಿರತರ ವಿಚಾರದಲ್ಲಿ ತಿರಸ್ಕೃತಗೊಂಡಿವೆ.

### ೮.೧ ಮಹಿಳೆ ಮತ್ತು ಧರ್ಮ

ಸಮಾಜ ಮತ್ತು ಧರ್ಮ ಪರಸ್ಪರ ತಳಕುಹಾಕಿಕೊಂಡಿವೆ. ಧರ್ಮದ ಹೊರತಾದ ಸಮಾಜದ ಕಲ್ಪನೆಯೇ ಸಾಧ್ಯವಿಲ್ಲ. ಭಾರತದಂತಹ ಬೃಹತ್ ರಾಷ್ಟ್ರದಲ್ಲಿ ಎಷ್ಟೆಲ್ಲಾ ಧರ್ಮಗಳು ಆಗಿಹೋಗಿವೆ,

ಎಷ್ಟೆಲ್ಲಾ ಧರ್ಮಗಳು ಇಂದಿಗೂ ಪ್ರಚಲಿತವಿವೆ. "ಮಹಿಳೆಯನ್ನು ಎರಡನೇ ದರ್ಜೆ ಪ್ರಜೆಯಾಗಿಸಿ ಅವಳ ವ್ಯಕ್ತಿತ್ವವನ್ನು ಅಡಗಿಸಿದ್ದು ಎನ್ನುವ ಕಟುಸತ್ಯ ನಮ್ಮೊಂದಿಗಿದೆ."[೧೧] ಶಕ್ತಿ ಆರಾಧನೆಯನ್ನು ಅನುಸರಿಸುವ ಪ್ರಾಚೀನ ಸಂಸ್ಕೃತಿಗೆ ತದ್ವಿರುದ್ಧವಾಗಿ ಶಿವ ಆರಾಧನೆ ಪ್ರಾರಂಭಗೊಂಡಿದ್ದನ್ನು ಇಲ್ಲಿ ಕಾಣಬಹುದು. ಶಕ್ತಿ ಆರಾಧನೆಯ ನಿರ್ಲಕ್ಷ ಪ್ರಾಯಶಃ ಪುರುಷಶಾಹಿ ಅಧಿಕಾರದ ಹಿಡಿತವನ್ನು ಪ್ರದರ್ಶಿಸುತ್ತದೆ. ಹಿಂದೂ ಪರಂಪರೆಯ ಹೆಸರಿನಲ್ಲಿ ಇಂದು ದೇವರಿಗೆ ಬಿಡುವುದು, ದೇವದಾಸಿಯಾಗಿಸುವ ಕ್ರಿಯೆ ನಿರಂತರವಾಗಿ ನಡೆಯುತ್ತಿದೆ. ಇದನ್ನು ಬಹುತೇಕ ಅನುಸರಿಸುವವರು ತಳಸಮುದಾಯಗಳಿಗೆ ಸೇರಿದವರೇ ಆಗಿರುವರು. ಹೆಣ್ಣಿನ ಕುರಿತು ಮನುವಿನಂತಹ ಸ್ಮೃತಿಕಾರರ ಮನಸ್ಸುಗಳು ಅದೆಷ್ಟು ವಿಕೃತವಾಗಿದ್ದವು ಎಂಬುದನ್ನು ಮನುಸ್ಮೃತಿಯಂತಹ ಗ್ರಂಥಗಳು ತೋರ್ಪಡಿಸುತ್ತವೆ. ಹೆಣ್ಣನ್ನು ಭೋಗದ ವಸ್ತುವಾಗಿಯೋ, ಸರಕಾಗಿಯೋ ನಿಸ್ತೇಜ ಭೂಮಿಯಾಗಿಯೋ ಕಂಡಂಥ ಮನಸ್ಸುಗಳು ಹೆಣ್ಣನ್ನು ದ್ವಿತೀಯ ದರ್ಜೆಯಲ್ಲಿ ಸಮಾಜ ನೋಡುವಂತೆ ನಿರ್ದೇಶಿಸಿವೆ. ಜೈನ, ಬೌದ್ಧ ಧರ್ಮಗಳೂ ಹೆಣ್ಣಿಗೆ ಎರಡನೇ ಸ್ಥಾನವನ್ನೇ ಕೊಟ್ಟಿವೆ. ಜೈನ ಧರ್ಮದಲ್ಲಿ ಹೆಣ್ಣು ನೇರವಾಗಿ ಮೋಕ್ಷಕ್ಕೆ ಒಳಗಾಗಳು. ಅವಳಿಗೆ ಮೋಕ್ಷ ದೊರೆಯಬೇಕೆಂದರೆ ತನ್ನ ಕರ್ಮಫಲಗಳನ್ನು ಸವೆಸಿ ಕೊನೆಗೆ ಪುರುಷನಾಗಿ ಮೋಕ್ಷಗೊಳ್ಳಬೇಕಾಗುತ್ತದೆ. ಇದಕ್ಕೆ ಹೊರತಾದ ಮನೋಭಾವನೆಯೇನೂ ಬೌದ್ಧ ಧರ್ಮದ್ದಲ್ಲಿಲ್ಲ. ಬಹುತೇಕ ಬಸವಣ್ಣನವರ ಸಮಾನತೆಯ ಪರಿಕಲ್ಪನೆಯ ವೀರಶೈವದ ಹೊರತಾಗಿ ಎಲ್ಲಾ ಧರ್ಮಗಳೂ ಹೆಣ್ಣನ್ನು ಪುರುಷನಿಗೆ ಸಮಾನವಾಗಿ ಕಂಡಿಲ್ಲ. ಇಂತಹ ವ್ಯವಸ್ಥೆಯಲ್ಲಿ ಹೆಣ್ಣು ಕೇವಲ ಗಂಡಿನ ಚಪಲಗಳನ್ನು ತೀರಿಸುವ ಒಂದು ಅಸ್ತ್ರವಾಗಿ ಮಾತ್ರ ಉಳಿದಿರುವುದು ದುರಂತವೇ ಸರಿ. ಧಾರ್ಮಿಕವಾದ ಶೋಷಣೆಯು ದೇವದಾಸಿ ಪದ್ಧತಿಯ ಮೂಲಕ ಜೀವಂತವಾಗುಳಿದಿದೆ. ಇದೇ ಧರ್ಮದ ಅಡಿಯಲ್ಲಿಯೇ ಜೀವನವನ್ನು ಕಟ್ಟಿಕೊಳ್ಳುತ್ತಿರುವ ಈ ಪುರುಷಶಾಹಿ ವ್ಯವಸ್ಥೆಯು ತಾನು ಎಲ್ಲೇ ಇದ್ದರೂ ಅಲ್ಲೆಲ್ಲಾ ತನ್ನ ಪ್ರಭಾವವನ್ನು ನಿರಂತರವಾಗಿ ಅಚ್ಚು ಒತ್ತುತ್ತುಲೇ ಸಾಗುತ್ತಿದೆ. ಧರ್ಮ ಎಂಬುದು ಇಡೀ ವ್ಯವಸ್ಥೆಯನ್ನು ತನ್ನ ಮುಷ್ಟಿಯಲ್ಲಿರಿಸಿಕೊಂಡಿದೆ. ಹಾಗೆಯೇ ಧರ್ಮ ಎಂಬುದು ಪುರುಷ ವ್ಯವಸ್ಥೆಯ ಮುಷ್ಠಿಯಲ್ಲಿದೆ. ಭಾರತದ ಯಾವುದೇ ಧರ್ಮದ ಹೆಸರಿನ ಗುಂಪುಗಳಿಗೆ ಒಡೆಯರಾಗಿರುವವರು (ಮಠಾಧೀಶ) ಪುರುಷರೇ ಹೊರತು ಮಹಿಳೆ ಧಾರ್ಮಿಕ ಪಂಗಡಗಳ ಒಡತಿಯಾಗಿರುವ ಉದಾಹರಣೆಗಳಿಲ್ಲ. ಶಂಕರಾಚಾರ್ಯರಿಂದ ಹಿಡಿದು ಬಹುತೇಕ ಧರ್ಮಗಳಿಗೆ ಹೆಣ್ಣು ಕೇವಲ ಭೋಗದ ವಸ್ತುವಾಗಿ ಮಾತ್ರ ಕಂಡಿರುವಳು. ಇಂತಹ ಸಮಾಜದಲ್ಲಿ ಹೆಣ್ಣು ಅಬಲೆಯಾಗಿಯೋ, ದುರ್ಬಳಳಾಗಿಯೋ, ವಿಚಾರರಹಿತಳೋ, ಅನೀತಿಯುಳ್ಳವಳಾಗಿ ಕಾಣುವ ಮೂಲಕ ಅವಳ ಬದುಕನ್ನು ನಿರ್ದೇಶಿಸುವ ಮಟ್ಟಿಗೆ ಪುರುಷಶಾಹಿ ತನ್ನ ಹಿಡಿತವನ್ನು ಸಾಧಿಸಿದೆ. ಇದನ್ನೇ ಸಾಮಾಜಿಕ ಮೌಲ್ಯವೆಂದು ಬಿಂಬಿಸಲಾಗುತ್ತಿರುವುದು. ಪೂರ್ವಪೀಡಿತವಾದ ಈ ರೀತಿಯ ಸಾಮಾಜಿಕ ಮನೋಭಾವವೇ ಮಹಿಳೆಯ ಕುರಿತಾದ ತಪ್ಪು ಗ್ರಹಿಕೆಗೆ, ಅವಘಡಗಳಿಗೆ ಕಾರಣವಾಗಿದೆ. ಪುರುಷ ಮಹಿಳೆ ಇಬ್ಬರಿಂದಾಗಿಯೇ ಈ ಸಮಾಜದ ಸೃಷ್ಟಿ. ಎರಡೂ ಕೈಗಳು ತಟ್ಟಿದಾಗ ಮಾತ್ರ ಚಪ್ಪಾಳೆಯುಂಟಾಗುವುದು. ಪುರುಷರು ಮಹಿಳೆಯರ ಅಸಾಹಯಕತೆಯನ್ನು ಬಳಸಿಕೊಂಡು ಸಮಾಜ

ರೂಪಿಸಿದ ಕಟ್ಟಳೆಗಳನ್ನು ಮೀರಿ ಲೈಂಗಿಕ ಕ್ರಿಯೆ ನಡೆಸುವನು. ಮಹಿಳೆಯನ್ನು ದುರ್ಬಳಕೆ ಮಾಡಿಕೊಂಡ ಪುರುಷನೇ ಮಹಿಳೆಗೆ ಹಾದರರದ ಪಟ್ಟವನ್ನೂ ಕಟ್ಟುವನು. ಇದು ಪುರುಷ ತಳೆಯುವ ಏಕಪರವಾದ ನಿಲುವು ಎಂದೆನಿಸುವುದಲ್ಲವೆ.

ಇಪ್ಪತ್ತನೇ ಶತಮಾನ ದಾಟಿ ಇಪ್ಪತ್ತೊಂದನೇ ಶತಮಾನಕ್ಕೆ ಈಗಾಗಲೆ ಕಾಲಿರಿಸಿದ್ದೇವೆ. ಇಪ್ಪತ್ತೊಂದನೇ ಶತಮಾನದ ಆಧುನಿಕತೆಯ ನಡುವೆಯೂ ಅನಕ್ಷರತೆ, ಬಡತನ, ನಿರುದ್ಯೋಗ, ಅಪೌಷ್ಟಿಕತೆ, ಹೆಣ್ಣು ಭ್ರೂಣ ಹತ್ಯೆಯಂತಹ ಸಮಸ್ಯೆಗಳು ಮಹಿಳೆಯರನ್ನು ಕಾಡುತ್ತಲೇ ಇವೆ. ಈ ಸಮಸ್ಯೆಗಳ ನಡುವೆ ಯಾರು ತಮಗೆ ರಕ್ಷಣೆ ಕೊಡುವವರು ಎಂದು ನಂಬಿರುವರೋ ಅಂತಹ ವ್ಯವಸ್ಥೆಯೇ ರಕ್ಷಣೆ ನೀಡದೆ ಕಿರುಕುಳ ನೀಡುತ್ತಿರುವುದೊಂದು ವಿಪರ್ಯಾಸವೇ ಸರಿ. ಇದಕ್ಕೆ ಉತ್ತಮ ಉದಾಹರಣೆ ಪೋಲಿಸ್ ವ್ಯವಸ್ಥೆಯಾಗಿದೆ.

### ೮.೨ ಪೋಲಿಸ್ ವ್ಯವಸ್ಥೆ ಮತ್ತು ವೇಶ್ಯಾವೃತ್ತಿ

ವೇಶ್ಯಾವೃತ್ತಿಗೂ ಪೊಲಿಸ್ ವ್ಯವಸ್ಥೆಗೂ ಅವಿನಾಭಾವ ಸಂಬಂಧ. ಕಳ್ಳರಿಗೂ ಪೋಲಿಸರಿಗೂ ಇಂತಹದೇ ಸಂಬಂಧವಿದೆ. ಬಹುತೇಕ ಪೋಲಿಸ್ ವ್ಯವಸ್ಥೆ ಜನಸಾಮಾನ್ಯರಿಗೆ ರಕ್ಷಣೆ ಒದಗಿಸುವ ಕಾರ್ಯವನ್ನು ಮಾಡಬೇಕು. ಇಲ್ಲಿ ಸಾಮಾನ್ಯ ಜನರು ಎಂದರೆ ಯಾರು ಎನ್ನುವ ಪ್ರಶ್ನೆ ಕಾಡುತ್ತದೆ. ವೇಶ್ಯೆಯರು, ಹೊಟ್ಟೆಪಾಡಿಗಾಗಿ ಚಿಕ್ಕಪುಟ್ಟ ಕಳ್ಳತನ ಮಾಡುವವರು ಕೂಡ ಸಾಮಾನ್ಯ ಜನರಲ್ಲವೆ? ಅವರಿಂದ ತಪ್ಪುಗಳಾದಾಗ ಅವುಗಳನ್ನು ಸರಿಪಡಿಸಿ ಸಮಾಜದಲ್ಲಿ ಗೌರವದಿಂದ ಬಾಳಲು ಅವಕಾಶ ಮಾಡಿಕೊಡುವುದು ಅಥವಾ ಗೌರವದಿಂದ ಬಾಳಲು ಇರುವ ಪರ್ಯಾಯ ವ್ಯವಸ್ಥೆಗಳನ್ನು ಕಲ್ಪಿಸುವುದು ಇಲ್ಲವೇ ಮಾರ್ಗದರ್ಶನ ಮಾಡುವುದು ಪೋಲಿಸರ ಹೊಣೆಯಲ್ಲವೆ ಎನ್ನುವ ಪ್ರಶ್ನೆಗಳೂ ಕಾಡುತ್ತವೆ.

ಹೊಟ್ಟೆಪಾಡಿಗೆ ಲೈಂಗಿಕ ವೃತ್ತಿ ನಡೆಸುವ ಮಹಿಳೆಯರ ಮೇಲೆ ಪೋಲಿಸ್ ವ್ಯವಸ್ಥೆ ಸುಳ್ಳು ದಾಖಲೆಗಳನ್ನು ಹಾಕಿ ಹಿಂಸಿಸುತ್ತದೆ ಎಂದು ಸ್ವತಃ ಲೈಂಗಿಕ ಕಾರ್ಯಕರ್ತೆಯರೇ ಹೇಳುವರು. ಸಾರ್ವಜನಿಕರ ರಕ್ಷಣೆ ಮಾಡಬೇಕಾದ ಪೋಲಿಸ್ ವ್ಯವಸ್ಥೆಯೇ ಅಸಾಹಾಯಕ ಲೈಂಗಿಕ ಕಾರ್ಯಕರ್ತೆಯರ ಮೇಲೆ ದಬ್ಬಾಳಿಕೆ ಮಾಡುವ, ದೈಹಿಕ ಹಿಂಸೆ ನೀಡುವ, ಅವರ ಮಾನಾಹರಣ ಮಾಡುವಷ್ಟು ಕೀಳುತನಕ್ಕೆ ಇಳಿಯುತ್ತಿರುವುದು ಶೋಚನೀಯ ವಿಚಾರವಾಗಿದೆ. ನಗರ ಪ್ರದೇಶಗಳಲ್ಲಿ ಪುರುಷ ಪೋಲಿಸರು ದಿನಕ್ಕೆ ಕನಿಷ್ಠ ಒಂದು ನೂರು ರೂಪಾಯಿಯಿಂದ ಐದು ನೂರು ರೂಪಾಯಿಯವರೆಗೂ ಒಬ್ಬ ವೇಶ್ಯೆಯಿಂದ ಇಲ್ಲವೆ ವೇಶ್ಯಾ ಅಡ್ಡೆಗಳಿಂದ ಮಾಮೂಲು ಪಡೆಯುವರು. ಒಂದು ಅಡ್ಡೆಯಿಂದ ಮಾಸಿಕವಾಗಿ ಎಂಟರಿಂದ ಹದಿನೈದು ಸಾವಿರದವರೆಗೂ ಪೋಲಿಸರು ವಸೂಲಿ ಮಾಡುವರು. ಪೋಲಿಸರು ಅಕ್ರಮವಾಗಿ ವಸೂಲಿಮಾಡುವ ಹಣದಲ್ಲಿ ಸಾಮಾನ್ಯ ಕಾನಸ್ಟೇಬಲಿನಿಂದ ಉನ್ನತ ಪೋಲಿಸ್ ಅಧಿಕಾರಿಯವರೆಗೂ ಹಣ ಹಂಚಿಕೆಯಾಗುವುದಾಗಿ ಪೋಲಿಸ್ ಕಾನಸ್ಟೇಬಲರೇ ಹೇಳುವರು. ವೇಶ್ಯಾ ಅಡ್ಡೆಗಳು ಪೋಲಿಸರಿಗೆ ನೀಡುವ ಮಾಮೂಲು ಹಣದ ಬಾಬ್ತನ್ನು ಅಡ್ಡೆಯ ಮಾಲೀಕ ವೇಶ್ಯೆಯರಿಂದ ವಸೂಲು ಮಾಡುತ್ತಾನೆ. ಅಕಸ್ಮಾತ್ ಮಾಮೂಲು ನೀಡದಿದ್ದರೆ ಮಾಮೂಲು

ಹಣದ ಬದಲಿಗೆ ಕೆಲವು ಪೋಲಿಸರಿಗೆ ದೇಹವನ್ನು ಹಂಚಬೇಕಾಗುವುದು. ಕೆಲವು ಪೋಲಿಸರಂತೂ ಪುಕ್ಕಟೆ ದೈಹಿಕ ತೀಟೆ ತೀರಿಸಿಕೊಳ್ಳುವುದರ ಜೊತೆಗೆ ಮಾಮೂಲು ಹಣವನ್ನೂ ಕಿತ್ತುಕೊಂಡು ಹೋಗುವರು.

ಮಹಿಳಾ ಪೋಲಿಸರು ಪುರುಷ ಪೋಲಿಸರಿಗಿಂತ ಅಪಾಯಕಾರಿಗಳು ಎಂದು ಲೈಂಗಿಕ ಕಾರ್ಯಕರ್ತೆಯರು ಅಭಿಪ್ರಾಯಪಡುತ್ತಾರೆ. ಅಸಾಹಯಕತೆಯಿಂದ ಈ ವೃತ್ತಿಯನ್ನು ಆಯ್ದುಕೊಂಡಿರುವೆವು ಎಂಬುದು ತಿಳಿದಿದ್ದರೂ ಕೂಡ ತಾನೂ ಒಬ್ಬ ಹೆಣ್ಣು ಎಂಬುದನ್ನು ಮರೆತು ಲೈಂಗಿಕ ಕಾರ್ಯಕರ್ತೆಯರೊಂದಿಗೆ ಅಮಾನುಷವಾಗಿ ವರ್ತಿಸುವರಂತೆ. ಮಹಿಳಾ ಪೋಲಿಸರು ಗುಪ್ತಾಂಗಗಳಿಗೆ ಖಾರದಪುಡಿ ಸವರಲೂ ಹಿಂಜರಿಯರು ಎಂದು ಲೈಂಗಿಕ ಕಾರ್ಯಕರ್ತೆಯರು ತಿಳಿಸುವರು. ಪೋಲಿಸ್ ವ್ಯವಸ್ಥೆಗೆ ಮಾಮೂಲು ಸಂದಾಯವಾದರೂ ತಿಂಗಳಿಗೋ, ಎರಡು ತಿಂಗಳಿಗೊಮ್ಮೆಯೋ ಲೈಂಗಿಕ ಕಾರ್ಯಕರ್ತೆಯರನ್ನು ಬಂಧಿಸುವುದು, ಕೋರ್ಟಿಗೆ ಹಾಜರುಪಡಿಸಿ ಶಿಕ್ಷೆಗೆ ಗುರಿಮಾಡುವುದು ಮಾಮೂಲು ಎಂದು ಲೈಂಗಿಕ ಕಾರ್ಯಕರ್ತರು ತಿಳಿಸುವರು.

**೮.೩ ಗೂಂಡಾ ವ್ಯವಸ್ಥೆ**

ಪಾತಕಲೋಕದ ಅಪರಾಧಿಗಳ ಒಡನಾಟದಲ್ಲಿಯೇ ಲೈಂಗಿಕ ವೃತ್ತಿ ನಡೆಯುವುದು. ತಮ್ಮ ವೃತ್ತಿಯನ್ನು ನಡೆಸಲು ಲೈಂಗಿಕ ವೃತ್ತಿಯಲ್ಲಿ ತೊಡಗಿದ ಮಹಿಳೆ ಸ್ಥಳೀಯವಾದ ರೌಡಿಗಳು, ಪೋಲಿಸ್ ವ್ಯವಸ್ಥೆಗಳನ್ನು ಸಂತೈಸಲು, ಹಣ, ಹೆಂಡ, ಕೆಲವೊಮ್ಮೆ ಉಚಿತ ಸೇವೆಯನ್ನೂ ನೀಡಬೇಕಾಗುವುದು. ಗೂಂಡಾ ಜಗತ್ತಿನ ಭೀತಿಯಲ್ಲಿಯೇ ಮಹಿಳೆ ವೃತ್ತಿಯಲ್ಲಿ ನಿರತಳಾಗಬೇಕಾದ ಅನಿವಾರ್ಯ ಸ್ಥಿತಿಯನ್ನು ವ್ಯವಸ್ಥೆ ಒದಗಿಸಿದೆ.

ನಗರ ಪ್ರದೇಶದ ಗೂಂಡಾಗಳು ಪೋಲಿಸರಿಗಿಂತ ಭಿನ್ನವಾಗಿಯೇನೂ ವರ್ತಿಸಲಾರರು. ಇವರಿಗೆ ಪ್ರತಿ ತಿಂಗಳೂ ಮಾಮೂಲು ಹಫ್ತಾವನ್ನು ವೇಶ್ಯಾ ಅಡ್ಡೆಗಳು, ವೈಯಕ್ತಿಕವಾಗಿ ವೇಶ್ಯೆಯರು ಸಲ್ಲಿಸಲೇಬೇಕು. ಜೊತೆಗೆ ಅವರಿಗೆ ತೆವಲು ಬಂದಾಗಲೆಲ್ಲಾ ದೇಹವನ್ನು ಹಂಚಿಕೊಳ್ಳುವ ಕೆಲಸವನ್ನೂ ಈ ಮಹಿಳೆಯರು ಮಾಡಬೇಕಾಗಿರುತ್ತದೆ. ಅಡ್ಡೆಗೆ ಯಾವುದೇ ಹೊಸ ಹುಡುಗಿ ಬಂದರೂ ಮೊದಲಿಗೆ ಈ ಗೂಂಡಾಗಳಿಗೆ ಸಮರ್ಪಿಸಬೇಕು. ಇಲ್ಲದಿದ್ದರೆ ಅಡ್ಡೆಯ ಮೇಲೆ ದಾಳಿಮಾಡಿ ಹೊಡೆಯುವುದು, ಚಿತ್ರಹಿಂಸೆ ಮಾಡುವುದು ಸಹಜವಾಗಿರುತ್ತದೆ. ಈ ನಾಗರಿಕ ಸಮಾಜದಲ್ಲಿ ಇಂತಹ ಗೂಂಡಾಗಳ ಹಿಂಸೆ, ಹಣವಸೂಲಿ ಎಲ್ಲವನ್ನು ಸಹಿಸಿಕೊಂಡು ತನ್ನ ನಿತ್ಯಜೀವನಕ್ಕಾಗಿ ಮೈಮಾರಬೇಕಾದ ಸ್ಥಿತಿ ಲೈಂಗಿಕ ಕಾರ್ಯಕರ್ತರದ್ದಾಗಿದೆ.

**೮.೪ ಸ್ಥಳೀಯ ಪುಡಾರಿಗಳು**

ಪೋಲಿಸ್ ವ್ಯವಸ್ಥೆ, ಗೂಂಡಾಗಳಿಗಿಂತ ಹೆಚ್ಚು ಅಪಾಯಕಾರಿಗಳು ಸ್ಥಳೀಯ ಪುಡಾರಿಗಳಾಗಿರುವರು. ಲೈಂಗಿಕ ಕಾರ್ಯಕರ್ತೆಯರು, ವೇಶ್ಯಾವಾಟಿಕೆ ಅಡ್ಡೆಗಳ ಯಜಮಾನರು ಸ್ಥಳೀಯ ಪುಡಾರಿಗಳನ್ನು

ಒಲೈಸುತ್ತಲೇ ಜೀವನ ಸಾಗಿಸಬೇಕು. ಪೋಲಿಸ್ ದಾಳಿ, ಗೂಂಡಾಗಳ ಅವರ್ತನೆಗಳಾದಾಗ ವೇಶ್ಯೆಯರಿಗೆ, ವೇಶ್ಯಾಗೃಹಗಳಿಗೆ ಅಭಯವಿಟ್ಟು ಕಾಪಾಡುವವರು ಈ ಸ್ಥಳೀಯ ಪುಡಾರಿಗಳಾಗಿರುವರು. ಇವರಿಗೂ ಮಾಮೂಲು ಹಾಗೂ ಅವಶ್ಯವೆಂದಾಗ ಹುಡುಗಿಯರನ್ನು ಹೊಂದಿಸಿ ಕೊಡಲೇಬೇಕು. ರಾಜಕೀಯವಾಗಿ ಅಭಿವೃದ್ಧಿಹೊಂದಲು ಇಂತಹ ಲೈಂಗಿಕ ಕಾರ್ಯಕರ್ತೆಯರನ್ನು ಸ್ಥಳೀಯ ಪುಡಾರಿಗಳು ಮೆಟ್ಟಿಲಾಗಿಸಿಕೊಳ್ಳುವರು. ರಾಜ್ಯದ ಪ್ರಮುಖ ರಜಕಾರಣಿಗಳು ಠಿಕಾಣಿ ಹೂಡಿದಾಗ ಅವರ ಮನವೊಲಿಸಿಕೊಳ್ಳಲು ಲೈಂಗಿಕ ಕಾರ್ಯಕರ್ತೆಯರ ಬಿಟ್ಟಿ ಸೇವೆಯನ್ನು ಕೊಟ್ಟು ಪುಡಾರಿಗಳು ಭೇಷ್ ಎನಿಸಿಕೊಳ್ಳುವರು ಎಂದು ಲೈಂಗಿಕ ಕಾರ್ಯಕರ್ತೆಯರು ತಿಳಿಸಿದರು.

**೮.೫ ಬಾಡಿಗೆ ಗಂಡಂದಿರು**

ಲೈಂಗಿಕ ಕಾರ್ಯಕರ್ತೆಯರು ತಾವು ಮಾನವಂತರೆಂದು ತೋರಿಸಿಕೊಳ್ಳಲು ಈ ಸಮಾಜದಲ್ಲಿ ಹುಸಿಗೌರವದ ನಟನೆಯನ್ನು ಮಾಡಬೇಕಾಗುವುದಾಗಿ ಹೇಳುವರು. ಹುಸಿಗೌರವ ಹೆಚ್ಚಿಸಿಕೊಳ್ಳಲು ತಾವು ಕುಟುಂಬ ಹೊಂದಿದ ಮರ್ಯಾದಸ್ಥರು ಎಂದು ತೋರ್ಪಡಿಸಿಕೊಳ್ಳಲು ಬಾಡಿಗೆ ಗಂಡಂದಿರ ಮೊರೆಹೋಗುವರು. ತಮ್ಮಲ್ಲಿಗೆ ಬರುವ ಗಿರಾಕಿಗಳಲ್ಲಿ ಸ್ವಲ್ಪ ವಿಶ್ವಾಸಕ್ಕೆ ಅರ್ಹನೆನಿಸುವ ಗಂಡು ಸಿಕ್ಕರೆ ಅವನಿಗೆ ದುಂಬಾಲು ಬಿದ್ದು ಸ್ವಲ್ಪ ದಿನಕ್ಕಾದರೂ ತನಗೆ ಗಂಡ ಎನ್ನುವ ಸೋಗನ್ನು ಹಾಕಬೇಕಾಗಿ ಬೇಡುವಳು. ಬಾಡಿಗೆದಾರನು ಕುಟುಂಬಸ್ಥರಿಗಲ್ಲದೆ ಬೇರೆಯವರಿಗೆ ಮನೆ ಕೊಡುವುದಿಲ್ಲ ಎಂಬ ಕಾರಣಕ್ಕಾಗಿ ಈ ರೀತಿಯ ನಟನೆ ಮಾಡಲೇಬೇಕಾಗುತ್ತದೆ. ಒಮ್ಮೆ ಬಾಡಿಗೆ ಪಡೆದರೆ ಗಂಡ ಎಂದು ಹೇಳಿಕೊಳ್ಳುವ ಪ್ರಾಣಿಯ ಅವಶ್ಯಕತೆ ಲೈಂಗಿಕ ಕಾರ್ಯಕರ್ತೆಗೆ ಇರಲಾರದು. ಆದರೆ ಬಾಡಿಗೆ ಗಂಡನಾದವನಿಗೆ ಲೈಂಗಿಕ ಕಾರ್ಯಕರ್ತೆಯ ಅವಶ್ಯಕತೆ ಹೆಚ್ಚಾಗಿರುತ್ತದೆ. ಬಾಡಿಗೆ ಗಂಡ ಎನಿಸಿಕೊಂಡ ತರುವಾಯ ಅವಳನ್ನು ಪುಕ್ಕಟೆಯಾಗಿಯೇ ಅನುಭವಿಸಲು ಪ್ರಾರಂಭಿಸುತ್ತಾನೆ. ಅಷ್ಟೇ ಅಲ್ಲದೆ ಅವಳ ದುಡುಮೆಯಲ್ಲಿ ಪಾಲನ್ನೂ ಬೇಡುತ್ತಾನೆ. ಹಣಕೊಡದಿದ್ದರೆ ದೈಹಿಕವಾಗಿ ಚಿತ್ರಹಿಂಸೆ ನೀಡಲೂ ಹಿಂಜರಿಯುವುದಿಲ್ಲ. ಬಹುತೇಕ ಬಾಡಿಗೆ ಗಂಡನಾದವರು ಎಷ್ಟೋಬಾರಿ ಪೂರ್ಣವಾಗಿ ಇವಳ ದುಡಿಮೆಯನ್ನೇ ಆಶ್ರಯಿಸಿ ಇರುವುದೂ ಉಂಟು. ಸಮಾಜದಿಂದ ರಕ್ಷಣೆ ಹೊಂದಲು ಒಂದು ಗಂಡು ಎಂಬ ಪ್ರಾಣಿಯನ್ನು ತಾತ್ಕಾಲಿಕವಾಗಿ ಹೆಣ್ಣು ಆಶ್ರಯಿಸಲು ಬಯಸುವಳಾದರೂ ಆ ಗಂಡೆ ತನ್ನ ಪೀಡಕನಾಗುತ್ತಾನೆ ಎಂಬ ಪ್ರಜ್ಞೆ ಪ್ರಾರಂಭಿಕವಾಗಿ ಅಂತಹ ಮಹಿಳೆಯರಿಗೆ ಇರಲಾರದೇನೊ. ಕೆಲವೊಮ್ಮೆ ಎಲ್ಲವೂ ಮೊದಲಿಗೆ ತಿಳಿದಿದ್ದರೂ ಸಮಾಜದ ಭಯಕ್ಕಾಗಿ ಎಲ್ಲಾ ಪೀಡನೆಗಳನ್ನೂ ಅವಳು ಸಹಿಸಿಕೊಳ್ಳಬೇಕಾದ ಅನಿವಾರ್ಯತೆ ಇರುತ್ತದೆ.

ಸ್ವಾತಂತ್ರ್ಯ ಪೂರ್ವಕ್ಕಿಂತ ಸ್ವಾತಂತ್ರ್ಯ ನಂತರ ಭಾರತದ ನಗರಗಳು ವೇಶ್ಯಾವಾಟಿಕೆಯನ್ನು ಸಾರ್ವತ್ರಿಕಗೊಳಿಸಿದವು. "ವಲಸೆಹೋಗುವ ಪುರುಷ, ಕುಟುಂಬದ ವಿಘಟನೆ, ಎರಡು ಮಹಾಯುದ್ಧಗಳು, ಹೆಚ್ಚಿದ ಬಡತನ"[೨] ಹೀಗೆ ಹತ್ತು ಹಲವು ಕಾರಣಗಳನ್ನು ವೇಶ್ಯಾವಾಟಿಕೆ ಪ್ರಮಾಣ ಸಾರ್ವತ್ರಿಕವಾಗಿ ಹೆಚ್ಚಾಗಲು ಕಾರಣ ಎಂದು ಹೇಳುವರು.

ಜಾಗತೀಕರಣದ ಈ ಸಂದರ್ಭದಲ್ಲಿ ತೆಹಲ್ಕಾ ಪ್ರಕರಣವನ್ನೇ ಉದಾಹರಣೆಯಾಗಿ ನೋಡುವುದಾದರೆ ಆ ಪ್ರಕಣದಲ್ಲಿಯೂ ಹೆಣ್ಣು ಸರಕಾಗಿರುವುದನ್ನು ತೆಹಲ್ಕಾ ಪ್ರಕರಣ ಸಂಬಂಧಿ ವರದಿಗಳು ತಿಳಿಸುತ್ತವೆ. ಜಾಗತೀಕರಣ ಪ್ರಕ್ರಿಯೆಯಿಂದ ಎಷ್ಟೋ ಕುಶಲಕರ್ಮಿ ಸಮುದಾಯಗಳು, ರೈತಾಪಿ ವರ್ಗದ ಕುಟುಂಬಗಳು ಕೆಲಸ ಕಳೆದುಕೊಂಡು ಅಸಾಹಾಯಕ ಸ್ಥಿತಿ ತಲುಪಿವೆ. ಇಂತಹ ಕುಟುಂಬಗಳ ಮಹಿಳೆಯರಿಗೆ ಬದುಕಿಗೆ ದಾರಿಯೆಂದರೆ ಮೈಮಾರಿ ಜೀವಿಸುವುದಷ್ಟೇ ಆಗಿದೆ.

ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ವೇಶ್ಯಾವಾಟಿಕೆಯೆಂಬುದು ಪ್ರವಾಸೋಧ್ಯಮದ ಒಂದು ಅಂಗವಾಗಿ ಮಾರ್ಪಾಡು ಹೊಂದುತ್ತಿದೆ. ಇದಕ್ಕೆ ಉತ್ತಮ ಉದಾಹರಣೆ "ಥೈಲ್ಯಾಂಡ್ ದೇಶವನ್ನೇ ತೆಗೆದುಕೊಳ್ಳಬಹುದು. ಇದೊಂದು ಚಿಕ್ಕ ರಾಷ್ಟ್ರ, ಅಮೆರಿಕಾದ ಸೈನಿಕರ ದೈಹಿಕ ಆಕಾಂಕ್ಷೆ ತೀರಿಸುವುದನ್ನೇ ಮುಖ್ಯವಾಗಿಸಿಕೊಂಡು ೧೯೬೭ರ ಸುಮಾರಿಗೆ ಥೈಲ್ಯಾಂಡ್ ಅಮೆರಿಕಾ ಸೈನಿಕರ ವಿಶ್ರಾಂತಿಗೆ ಆಶ್ರಯ ನೀಡಲು ಅಮೆರಿಕದೊಂದಿಗೆ ಒಪ್ಪಂದವನ್ನು ಮಾಡಿಕೊಂಡಿತು. ಉಳ್ಳವರ ದೈಹಿಕ ತೃಷೆ ಹಿಂಗಿಸಲು ಥೈಲ್ಯಾಂಡಿನಂತಹ ತೃತೀಯ ರಾಷ್ಟ್ರಗಳು ಸೆಕ್ಸ್ ಉದ್ಯಮವನ್ನು ಒಂದು ಬೃಹತ್ ಉದ್ಯಮವನ್ನಾಗಿಸಿ ಲಾಭ ಪಡೆಯಲು ಮುಗಿಬಿದ್ದವು. ಆ ಸಂದರ್ಭದಲ್ಲಿಯೇ ಒಂದು ದಶಕದೊಳಗೆ ಥೈಲ್ಯಾಂಡ್ ಒಂದರಲ್ಲಿಯೇ ಸಾವಿರಾರು ವೇಶ್ಯಾಗೃಹಗಳು ತಲೆಯೆತ್ತಿದವು. ಸಮೀಕ್ಷೆಯೊಂದರ ಪ್ರಕಾರ ಈ ವೇಶ್ಯಾಗೃಹಗಳು ಆರಂಭವಾಗುವ ಮೊದಲು ಥೈಲ್ಯಾಂಡಿಗೆ ಭೇಟಿ ನೀಡುತ್ತಿದ್ದ ಪ್ರವಾಸಿಗರ ಸಂಖ್ಯೆ ಹದಿನೆಂಟು ಲಕ್ಷವಿದ್ದತು. ೧೯೮೮ರಲ್ಲಿ ಈ ಸಂಖ್ಯೆ ನಲವತ್ತೈದು ಲಕ್ಷಕ್ಕೇರಿತು."[೧೩] ಭಾರತದಲ್ಲಿರುವ ರಾಜ್ಯಗಳಲ್ಲಿ ಬಹುತೇಕ ಗೋವಾದಂತಹ ರಾಜ್ಯವು ಪ್ರವಾಸೋದ್ಯಮವನ್ನೇ ನೆಚ್ಚಿದೆ. ಇಲ್ಲಿಯ ಹೆಂಡ, ಹೆಣ್ಣುಗಳೇ ಪ್ರವಾಸಿಗರ ಆಕರ್ಷಣೆ ಎಂಬುದು ಬಹುತೇಕ ಎಲ್ಲರಿಗೂ ಗೊತ್ತಿರುವ ವಿಚಾರವಾಗಿದೆ.

ಒಟ್ಟಾರೆಯಾಗಿ ಈ ಸಮಾಜ ಹೆಣ್ಣನ್ನು ಭಾವನೆಗಳಿರುವ ಜೀವವೆಂದು ಭಾವಿಸದೆ ಕೇವಲ ಸರಕಾಗಿ ಮಾತ್ರ ನೋಡುವ ಪ್ರವೃತ್ತಿ ಬೆಳೆದಿದೆ ಎಂಬುದು ಮಾತ್ರ ಸತ್ಯ.

**ಕೊನೆ ಟಿಪ್ಪಣಿ**

೧ ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಪುಟ – ೨೦೪

೨ ತಿಪ್ಪೇಸ್ವಾಮಿ ಎಚ್, ಕನ್ನಡ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ – ೧೭೪

೩ ಕಮಲಾ ಹಂಪನಾ, ಬೊಗಸೆ, ೨೦೦೩, ಪುಟ–೯೩

೪ ಕಕ್ಕಿಲ್ಲಾಯ, ಏಂಗೆಲ್ಸ್ ವಿಚಾರಗಳು, ೧೯೯೮, ಪುಟ– ೧೨೪

೫ ದೇವಿಪ್ರಸಾದ ಚಟ್ಟೋಪಧ್ಯಾಯ, ಮಾತೆಯರು ಮಾನ್ಯರಾಗಿದ್ದಾಗ, ೧೯೯೭, ಪುಟ –೨೧

೬ ಅದೇ, ಪುಟ–೮೪

೭ ಪ್ರಕಾಶ್ ಜಿ, ಲೈಂಗಿಕ ಕಾರ್ಯಕರ್ತೆಯರು ಮತ್ತು ಬಡತನ. ೨೦೧೩, ಪುಟ –೩೪

೮ ಲೀಲಾ ಸಂಪಿಗೆ, ಬುಡಕಟ್ಟು ಮತ್ತು ಜನಪದ ಸಮುದಾಯಗಳಲ್ಲಿ ವೇಶ್ಯಾವಾಟಿಕೆಗಳು: ಪರಂಪರೆ ಮತ್ತು ಸಮಸ್ಯೆಗಳು, ೨೦೧೫, ಪುಟ– ೬೫

೯ ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಪುಟ– ೨೦೪

೧೦ ತಿಪ್ಪೇಸ್ವಾಮಿ ಎಚ್, ಕನ್ನಡ ಶಾಸನಗಳಲ್ಲಿ ವೇಶ್ಯೆಯರು, ೨೦೧೬, ಪುಟ– ೧೭೪

೧೧ ೧೯೯೫–೯೬ರ ಮಹಿಳಾ ಆಯೋಗದ ವರದಿ

೧೨ ಇಂದಿರಾ ಆರ್, ಮಹಿಳೆ– ಸಮಾಜ ಸಂಸ್ಕೃತಿ, ೨೦೦೨, ಪುಟ–೩೮

೧೩ ಲೀಲಾ ಸಂಪಿಗೆ, ಬುಡಕಟ್ಟು ಮತ್ತು ಜನಪದ ಸಮುದಾಯಗಳಲ್ಲಿ ವೇಶ್ಯಾವಾಟಿಕೆಗಳು: ಪರಂಪರೆ ಮತ್ತು ಸಮಸ್ಯೆಗಳು, ೨೦೧೫, ಪುಟ– ೬೫

# ಅಧ್ಯಾಯ : ಒಂಭತ್ತು
## ಲೈಂಗಿಕ ಕಾರ್ಯಕರ್ತರ ಬದುಕು-ಬವಣೆ

ಈ ಅಧ್ಯಯನ ಪೂರ್ಣತೆಯನ್ನು ಪಡೆಯಬೇಕಾದರೆ ಕೇಲವು ಲೈಂಗಿಕ ಕಾರ್ಯಕರ್ತೆಯರ ಬದುಕಿನ ಸಂಕ್ಷಿಪ್ತ ಚಿತ್ರಣವನ್ನು ಕೊಡಲೇಬೇಕು. ಈ ಅಧ್ಯಯನಕ್ಕಾಗಿ ಬಳ್ಳಾರಿ, ಕೊಪ್ಪಳ ಜಿಲ್ಲೆಗಳಲ್ಲಿ ಅಧ್ಯಯನ ಕೈಗೊಂಡಾಗ ಬಹುತೇಕ ಲೈಂಗಿಕ ಕಾರ್ಯಕರ್ತರು ತಮ್ಮ ವೈಯಕ್ತಿಕವಾದ ಕುಟುಂಬ, ಬದುಕಿನ ಕುರಿತು ತಿಳಿಸಲು ಹಿಂಜರಿಯುತ್ತಿದ್ದರು. ಎಷ್ಟೋ ಮಹಿಳೆಯರು ತಮ್ಮ ಹೆಸರುಗಳನ್ನು ಹೇಳುವಾಗ ಮೂಲ ಹೆಸರನ್ನು ಬಿಟ್ಟು ಬೇರೆ ಯಾವುದೋ ಹೆಸರನ್ನು ಹೇಳಿದ ಉದಾಹರಣೆಗಳೂ ಇವೆ. ಆದರೆ ಇವರಲ್ಲಿ ಕೆಲವು ಲೈಂಗಿಕ ಕಾರ್ಯಕರ್ತೆಯರನ್ನು ವಿಶ್ವಾಸಕ್ಕೆ ಪಡೆದಾಗ ಮುಕ್ತವಾಗಿ ತಮ್ಮ ಬದುಕಿನ ಬವಣೆಗಳನ್ನು ಹೇಳಿಕೊಂಡಿರುವರು. ಅಂತಹ ಮಹಿಳೆಯರನ್ನು ಆಯ್ದುಕೊಂಡು ವ್ಯಕ್ತಿ ಅಧ್ಯಯನ ನಡೆಸಲಾಗಿದೆ. ಅವರ ಜೀವನದ ಎಲ್ಲಾ ನೋವು ನಲಿವುಗಳನ್ನು ಇಲ್ಲಿ ಹೇಳಲಾಗಿದೆಯೆಂದು ಭಾವಿಸಬಾರದು. ಆದರೆ ಅವರು ತಮ್ಮ ಬದುಕಿನ ಕುರಿತು ಹೇಳಿದ ಮಾತುಗಳನ್ನು ಇಲ್ಲಿ ದಾಖಲಿಸಲಾಗಿದೆ. ಲೈಂಗಿಕ ವೃತ್ತಿಯಲ್ಲಿರುವವರು ತಮ್ಮ ಮೂಲ ಊರು, ಹೆಸರುಗಳನ್ನು ದಾಖಲಿಸಿದರೆ ತಮ್ಮ ಗೌರವಕ್ಕೆ ದಕ್ಕೆಯಾಗುವುದೆಂದು ತಿಳಿಸಿದರು. ಹಾಗಾಗಿ ಅವರ ಮೂಲ ಹೆಸರು ಹಾಗೂ ಊರುಗಳ ಹೆಸರನ್ನು ಬದಲಾಯಿಸಿ ಆಯ್ದ ಲೈಂಗಿಕ ಕಾರ್ಯಕರ್ತರ ಬದುಕಿನ ಚಿತ್ರಣವನ್ನು ಈ ಕೆಳಗೆ ನೀಡಲಾಗಿದೆ. ಹಾಗೆಯೇ ತಮ್ಮ ಹೆಸರುಗಳನ್ನು ದಾಖಲಿಸಬಾರದೆಂದು ಕೇಳಿದ್ದರಿಂದಾಗಿ ಅನುಬಂಧದಲ್ಲಿಯೂ ಮಾಹಿತಿದಾರರ ಪಟ್ಟಿಯನ್ನು ನೀಡಿರುವುದಿಲ್ಲ.

**೧ ಎಲ್ಲಮ್ಮ, (ವಯಸ್ಸು ೨೭, ಹೆಸರು ಬದಲಿಸಿದೆ)**

ನನ್ನ ಹೆಸರು ಎಲ್ಲಮ್ಮ, ತಂದೆ ಹೆಸರು ಕೆಂಚಪ್ಪ, ತಾಯಿ ಹೆಸರು ರಾಮಕ್ಕ, ನಾವು ಜಾತಿಯಿಂದ ಮಾದಿಗರು, ನಮ್ಮೂರು ಎರಡೋಣಿ, ನಮ್ಮ ತಂದೆಯ ಮೂಲ ಆಂಧ್ರಪ್ರದೇಶದ ಕರ್ನೂಲು. ಭೂಮಾಲೀಕರು ಆಂಧ್ರದಿಂದ ವಲಸೆ ಬಂದಾಗ ಅವರೊಂದಿಗೆ ಕೂಲಿಕಾರರಾದ ತಾತ, ಅಪ್ಪ,

ಅಮ್ಮ ಎಲ್ಲರೂ ವಲಸೆ ಬಂದರಂತೆ. ನಮ್ಮದು ಬಡ ಕುಟುಂಬ, ಅಪ್ಪ, ಅಮ್ಮ ಇಬ್ಬರೂ ಆಂಧ್ರದ ಭೂಮಾಲೀಕರ ಬಳಿ ಕೂಲಿ ಕೆಲಸ ಮಾಡುತ್ತಾರೆ. ಇಬ್ಬರಿಗೂ ಕುಡಿತದ ಚಟ, ನಮಗೆ ಸ್ವಂತ ಮನೆ ಇರಲಿಲ್ಲ. ಗದ್ದೆಯ ಧಣಿಯ ಜಾಗದಲ್ಲಿಯೇ ಗುಡಿಸಲು ಹಾಕಿಕೊಂಡಿದ್ದೆವು. ನಾನು ಮೂರನೇ ತರಗತಿವರೆಗೆ ಎರಡೋಣಿಯ ಸರ್ಕಾರಿ ಶಾಲೆಗೆ ಹೋಗಿದ್ದೆ. ನನಗೆ ೧೨ ವರ್ಷವಿದ್ದಾಗ ಅಪ್ಪ, ಅಮ್ಮ ಹುಲಿಗೆಮ್ಮಗ ಕರಕೊಂಡಹೋಗಿ ದೇವರು ಕಟ್ಟಿಸಿದರು. ಅವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ದಕ್ಕದೇ ಇದ್ದುದ್ದರಿಂದ ತಮಗೆ ಮಕ್ಕಳು ಹುಟ್ಟಿ ಸಾಯದೇ ಇದ್ದರೆ ದೇವರು ಕಟ್ಟಿಸುವುದಾಗಿ ಹುಲಿಗೆಮ್ಮನಿಗೆ ಬೇಡಿಕೊಂಡಿದ್ದರಂತೆ. ಬದುಕಿದ ಮಕ್ಕಳಲ್ಲಿ ನಾನೇ ಮೊದಲ ಮಗಳು. ಸಾಯಲಿಲ್ಲವಾಗಿ ದೇವರು ಕಟ್ಟಿಸಿದರು. ನನ್ನ ಹತ್ತನೇ ವಯಸ್ಸಿಗಾಗಲೇ ಅಮ್ಮನೊಂದಿಗೆ ಕಳೆ ತೆಗೆಯೋಕೆ ಹೋಗುತ್ತಿದ್ದೆ. ೧೩ನೇ ವಯಸ್ಸಿಗೆ ಮೈನೆರೆದೆ. ನನಗೆ ಕಾರ್ಯ ಮಾಡುವ ಚಿಂತೆ ಅಪ್ಪ ಅಮ್ಮನಿಗೆ ಸುರುವಾಯಿತು. ೧೪ನೇ ವಯಸ್ಸಿನವರೆಗೂ ಸುಮ್ಮನಿದ್ರು, ನನ್ನ ಹದಿನಾಲ್ಕನೇ ವಯಸ್ಸಿಗೆ ಆಗಲೆ ಮೈಕೈ ತುಂಬಿಕೊಂಡಿದ್ದೆ. ನಮ್ಮ ಧಣಿಯೇ ನನಗೆ ಹೆಣ್ಣು ಮಾಡಲು ಆಪೇಕ್ಷಿಸಿದ. ಒಳ್ಳೆ ಗಟ್ಟಿ ಉಳ್ಳ ಧಣಿ ಸಿಕ್ಕ ಅಂತ ಅಪ್ಪನಿಗೆ ಖುಷಿಯಾಯಿತು. ಅಮ್ಮನಿಗೆ ಏನನ್ನಿಸಿತ್ತೋ ದೇವರಿಗೇ ಗೊತ್ತು. ಯಾಕಂದ್ರೆ ಆ ಧಣಿ ನಮ್ಮಮ್ಮನ ಬಳಿಯೂ ಮಲಗುತ್ತಿದ್ದ. ಹೆಣ್ಣುಮಾಡಿದ ತರುವಾಯ ಧಣಿಯೇ ಗುಡಿಸಿಲಿದ್ದ ಜಾಗದಲ್ಲಿ ಸಣ್ಣ ಮನೆ ಕಟ್ಟಿಸಿ ಮೇಲೆ ತಗಡು ಹೊದಿಸಿಕೊಟ್ಟ. ದಿನಾಲೂ ಆತನ ಪಂಪುಸೆಟ್ಟಿಗೆ ಹೋಗಿ ಅವನೊಂದಿಗೆ ಅಲ್ಲಿಯೇ ರಾತ್ರಿ ಕಳೆಯುತ್ತಿದ್ದೆ. ದಿನಾಲೂ ರಾತ್ರಿ ಕುಡಕೊಂಡು ಬರೋನು, ತನಗೆ ತಿಳಿದಂಗೆ ಹಿಂಸೆ ಕೊಡೋನು. ಆ ಹಿಂಸೆಯನ್ನೇ ಸುಖ ಅಂದುಕೊಳ್ಳೋ ವಯಸ್ಸು ನಂದು. ಸರಿಸುಮಾರು ಒಂದು ವರ್ಷ ನನ್ನೊಂದಿಗೆ ಸಂಬಂಧ ಇರಿಸಿಕೊಂಡಿದ್ದ. ತರುವಾಯ ನಾನು ಹಳಬಳಾದೆಯೆಂದು ಕಾಣಿಸುತ್ತದೆ. ಹೊಸ ಹುಡುಗಿಯರೊಂದಿಗೆ ಸಂಬಂಧ ಬೆಳೆಸಲು ಪ್ರಾರಂಭಿಸಿದನು. ಆತನಿಗೆ ಹೆಚ್ಚುಕಡಿಮೆ ನಮ್ಮ ಅಪ್ಪನ ವಯಸ್ಸು ಇರಬಹುದೇನೊ. ಆತ ದೂರ ಸರಿದಮೇಲೆ ಬೇರೆ ಜನರ ಸಂಪರ್ಕ ದೊರೆಯಿತು. ಅದೇ ಆಂಧ್ರದ ಹೆಣ್ಣುಮಕ್ಕಳು ಗಂಗಾವತಿಗೆ ಸಂತೆಗೆ ಹೋಗುತ್ತಿದ್ದರು. ಅವರೊಂದಿಗೆ ನಾನೂ ಹೋಗಲು ಪ್ರಾರಂಭಿಸಿದೆ. ಅವರಿಂದಾಗಿಯೇ ದಂಧೆ ಮಾಡುವ ಅಡ್ಡೆಗಳ ಪರಿಚಯವಾಗಿದ್ದು. ಅಡ್ಡೆಯನ್ನು ನಡೆಸುತ್ತಿದ್ದಾಕಿ ೬೦ರ ಪ್ರಾಯದ ಈರಮ್ಮ ಎಂಬಾಕೆ. ಆಕೆಯೂ ಆಂಧ್ರದ ಮೂಲದ ಗುಮ್ಮನೂರಿನವಳು. ಅವಳಿಗೆ ನನ್ನನ್ನು ಪರಿಚಯಿಸಿ ಆ ಹೆಂಗಸರು ಕಮಿಷನ್ ಪಡೆದರು. ಅವರೂ ಕೂಡ ಸಂತೆ ದಿನ ಇದೇ ಅಡ್ಡೆಗೆ ಬಂದು ದಂಧೆ ಮಾಡುತ್ತಿದ್ದರು. ಬೆಳಿಗ್ಗೆ ಬಂದರೆ ಸಂಜೆ ಮನೆಗೆ ಹೋಗುತ್ತಿದ್ರು, ಅವರೊಂದಿಗೆ ನಾನೂ ಬೆಳಿಗ್ಗೆ ಬಂದು ಸಂಜೆ ಮನೆಗೆ ಹೋಗುತ್ತಿದ್ದೆ. ಮನೆಯಲ್ಲಿ ಎಲ್ಲಿ ಹೋಗಿದ್ದಿ, ಏನು ಮಾಡ್ತಿ ಅಂತ ಯಾರೂ ಕೇಳುತ್ತಿರಲಿಲ್ಲ. ಮನೆಗೆ ಹೋಗಿ ಅಂದಿನ ದುಡಿಮೆಯಲ್ಲಿ ಮುಕ್ಕಾಲು ರೊಕ್ಕ ಅಮ್ಮನಿಗೆ ಕೊಡುತ್ತಿದ್ದೆ. ಕಾಲುಭಾಗ ಮುಚ್ಚಿಟ್ಟುಕೊಳ್ಳುತ್ತಿದ್ದೆ. ದಿನಕ್ಕೆ ಐದಾರು ಗಂಡಸರ ಬಳಿ ಮಲಗಿಕೊಳ್ಳಬೇಕಾಗಿತ್ತು. ಒಬ್ಬ ಗಿರಾಕಿಯಿಂದ ಒಂದು ನೂರು ರೂಪಾಯಿ ಪಡೆದರೆ ಅದರಲ್ಲಿ ಐವತ್ತು ಯಜಮಾನಿ ಇಟ್ಕೊಂಡು ಇನ್ನ ಐವತ್ತು ರೂಪಾಯಿ ನನಗೆ ಕೊಡುತ್ತಿದ್ದಳು. ಹೀಗೆ ದಿನಾ ಕಳಿತಾ ಇತ್ತು. ಹೀಗೆ ಉಳಿಕೆ ಹಣದಲ್ಲಿ ಹೊಸ ಸೀರೆ, ಸ್ನೋ ಪೌಡರು, ಬ್ರಾ, ಚಪ್ಪಲಿ

ಇತ್ಯಾದಿ ಕೊಳ್ಳುತ್ತಿದ್ದೆ. ಒಳ್ಳೆ ಡ್ರೆಸ್ ಮಾಡಿಕೊಂಡರೆ ಗಿರಾಕಿಯನ್ನು ಆಕರ್ಷಿಸಬಹುದು. ಹೊಸದಾಗಿ ದಂಧೆ ಮಾಡಲು ಬಂದ ಹುಡುಗಿಯರ ಪರಿಚಯ ಆಯಿತು. ನನಗೆ ಮೊದಲೇ ತೆಲುಗು ಬರುತ್ತಿತ್ತು. ಮನೆಯಲ್ಲಿ ನಾವೆಲ್ಲ ತೆಲಗನ್ನೇ ಮಾತಾಡ್ತಿದ್ದುದ್ದು. ಹೊರಗಂತೂ ಕನ್ನಡ ಗೊತ್ತೇ ಇರಲಿಲ್ಲ. ಹೊಸ ಹುಡುಗಿಯರ ಪರಿಚಯದಿಂದ ಹಿಂದಿ, ಲಂಬಾಣಿ ಭಾಷೆ ಕಲಿತೆ. ಹಿಂದಿ ಬರುತ್ತಿದ್ದಂಗೆ ನಮ್ಮೊಂದಿಗೆ ದಂಧೆ ಮಾಡೋ ಹುಡುಗಿಯರು ನನ್ನನ್ನು ಗೋವಾ ಮುಂತಾದ ಕಡೆ ದಂಧೆಗಾಗಿ ಕರಕೊಂಡು ಹೋಗತೊಡಗಿದರು. ಅವರ ಸಂಪರ್ಕದಿಂದ ಕುಡಿತ ಕಲಿತೆ. ಮನೆಯಲ್ಲಿ ಅಪ್ಪ ಅಮ್ಮ ನನ್ನ ಆದಾಯವನ್ನೇ ನಿರೀಕ್ಷಿಸುತಿದ್ರು. ನನ್ನ ಬೆನ್ನ ಹಿಂದೆ ಸಾಲಾಗಿ ನಾಲ್ಕು ಮಕ್ಕಳಾದವು. ಅವುಗಳನ್ನು ಸಾಕಲು ಹಣಬೇಕಲ್ಲ. ಜೊತೆಗೆ ಅವರ ಚಟಗಳಿಗೂ ಹಣ ಬೇಕು, ಏನು ಮಾಡುವುದು. ನಾನು ಗೋವಾ, ಪುಣೆ, ಮೈಸೂರು, ಬೆಂಗಳೂರಿಗೆಲ್ಲಾ ದಂಧೆಗಾಗಿಯೇ ಹೋಗಿಬರುತ್ತಿದ್ದೆ. ಹಾಗೆ ಹೋದರೆ ತಿಂಗಳಾದರೂ ಮನೆಗೆ ಬರುತ್ತಿರಲಿಲ್ಲ. ಇಲ್ಲಿದ್ದಾಗ ಹಂಪೆ, ವಿರುಪಾಪುರ ಗಡ್ಡೆ, ಆನೆಗೊಂದಿಗಳಲ್ಲಿಯೂ ಇದ್ದು ದಂಧೆ ಮಾಡುತ್ತಿದ್ದೆ. ವಿದೇಶಿಯರ ಜೊತೆ ಮಲಗಿದರೆ ಹೆಚ್ಚು ಹಣ ಸಿಗುತ್ತದೆ. ಹಂಪೆ ಸಂಪರ್ಕ ಬಂದಮೇಲೆ ಇಂಗ್ಲಿಷ್ ಮಾತನಾಡುವುದನ್ನೂ ಕಲಿತಿದ್ದೇನೆ. ಒಬ್ಬ ಮಗ ಹುಟ್ಟಿದ್ದಾನೆ. ಅವನಿಗೆ ಗಂಗಾವತಿಯಲ್ಲಿ ಹಾಸ್ಟೆಲಿನಲ್ಲಿಟ್ಟು ಓದಿಸುತ್ತಿದ್ದೇನೆ. ದಂಧೆ ಅಂದಮೇಲೆ ಅದರೊಂದಿಗೆ ಬರೋ ರೋಗಗಳೂ ಇರುತ್ತವೆಯಲ್ಲ. ಅವುಗಳನ್ನೆಲ್ಲಾ ನಿಭಾಯಿಸಬೇಕು. ಡಾಕ್ಟರಿಗೆ ಹಣ ಕೊಟ್ಟರೂ ಸರಿಯಾಗಿ ತಪಾಸಣೆ ಮಾಡುತ್ತಾರೆಂಬ ನಂಬಿಕೆ ಇಲ್ಲ. ದಂಧೆ ಮಾಡುವವರನ್ನು ಕಂಡರೆ ಅವರಿಗೂ ತಾತ್ಸಾರವೆ. ದೇವರ ದಯದಿಂದ ಏಡ್ಸ್‌ನಂತಹ ಜಡ್ಡು ನನಗೆ ತಗುಲಿಲ್ಲ. ಇತ್ತೀಚೆಗೆ ನಿರೋಧ ಬಳಸುತ್ತಿದ್ದೇನೆ. ಮನೆಯ ಸಂಪರ್ಕದಿಂದ ದೂರವಾಗಿದ್ದೇನೆ. ಅಪ್ಪ ಅಮ್ಮ ರೊಕ್ಕದ ದೆವ್ವಗಳು. ಅವರಿಗೆ ಎಷ್ಟು ಹಣ ಕೊಟ್ರೂ ಸಾಲದು. ಈಗ ಮಗ ಇರೋದರಿಂದ ಅವನ ಭವಿಷ್ಯದ ಬಗ್ಗೆ ಚಿಂತೆ ಹತ್ತಿದೆ. ಅವನು ಈ ಪ್ರಪಂಚದಲ್ಲಿ ಒಳ್ಳೆ ಗೌರವದಿಂದ ಬಾಳಬೇಕು, ಒಳ್ಳೆ ಹುದ್ದೆ ಇಡೀಬೇಕು, ಅಷ್ಟೇ ನನ್ನ ಆಸೆ. ಅವನಿಗಾಗಿ ಬದುಕಬೇಕಾಗಿದೆ. ಡಾಕ್ಟರು ಹೇಳಿದ್ದರಿಂದ ಕುಡಿತ ಕಡಿಮೆ ಮಾಡಿದ್ದೇನೆ. ದಯವಿಟ್ಟು ನನ್ನ ಹೆಸರು, ಊರು ಇತ್ಯಾದಿ ವಿಚಾರ ಎಲ್ಲಿಯೂ ಬರೀಬೇಡ್ರಿ.

**ಕಾಳಮ್ಮ (ವಯಸ್ಸು ೩೭, ಹೆಸರು ಬದಲಿಸಿದೆ)**

ನನ್ನ ಹೆಸರು ಕಾಳಮ್ಮ. ತವರುಮನೆ ಬಂಡೆಬಸಾಪುರ, ಗಂಡನಮನೆ ಚಿಲಕನಹಟ್ಟಿ, ನಾವು ಜಾತಿಯಿಂದ ಬಾರಿಕೇರು, ನೀವು ಬೆಸ್ತರು ಅಂತ ಕರೀತೀರಲ್ಲ ಆ ಜಾತಿ ನಮ್ಮದು. ನನಗೆ ಶಾಲೆಗೆ ಹೋಗಲು ಸಾಧ್ಯವಾಗಲೇ ಇಲ್ಲ. ಯಾಕಂದ್ರೆ ನಮ್ಮ ಮನೆಯಾಗೆ ಯಾರೂ ಶಾಲೆಗೆ ಹೋಗಿಯೇ ಗೊತ್ತಿಲ್ಲ. ಊರು ಸುತ್ತ ಬರೀ ತಾಳೆ ಮರಗಳು. ನಾನು ಸಣ್ಣಾಕಿದ್ದಾಗ ಬರೀ ತಮ್ಮ ತಂಗೇರ್ನ ಆಡಿಸೋದೆ ಕೆಲಸ. ಅಪ್ಪ ಅಮ್ಮ ಕೂಲಿಗೆ ಹೋಗೋರು. ಸ್ವಲ್ಪ ದೊಡ್ಡಾಕಿ ಆದ್ನ, ಅಡುಗೆ, ಕಸಮುಸುರೆ ಮಾಡೋಕೆ ಹತ್ತಿದೆ. ಮನೆ ಕೆಲಸ ಮುಗಿಸಿ ನಮ್ಮೂರ ಶಾನುಭೋಗರ ಮನೆಗೆ ಕಸಮುಸುರೆ ಕೆಲಸಕ್ಕೂ ಹೋಗುತ್ತಿದ್ದೆ. ನನಗೆ ಮೊದಲು ಕೆಡಿಸಿದ್ದು ಶಾನುಭೋಗರ ಮಗ. ಅವಾಗ ಒಂದು ಹದಿನೈದು

ವರ್ಷ ಇರಬೋದು. ಒಂದಿನ ಕಸಮುಸುರೆ ಮಾಡಿದ ಮ್ಯಾಲೆ ಅವರ ಆಕಳಿಗೆ ಸೊಪ್ಪೆ ತರೋಕೆ ಅವರದೇ ಅಟ್ಟೇವಿಗೆ ಹೋಗಿದ್ದೆ. ನನ್ನ ಜೊತೆಗೆ ಸೊಪ್ಪೆ ತರೋ ನೆವದಾಗ ಬಂದ ಶಾನುಭೋಗರ ಮಗ ಬಂದು ಹಿಂದಿನಿಂದ ಎದೆಗೇ ಕೈಹಾಕಿದ, ಆತನಿಗೆ ೨೩–೨೪ ವರ್ಷ ಇರಬೋದು. ಬ್ಯಾಡಣ್ಣ, ಬ್ಯಾಡಣ್ಣ ಅಂದ್ರೂ ಕೇಳದೆ ಸೊಪ್ಪೆ ಬಣವಿ ಮರೆಗೆ ಹಕ್ಕೊಂಡು ಕೆಡಿಸಿಬಿಟ್ಟ. ನಾನು ಏನು ಕೊಸರಾಡಿದ್ರೂ ಬಿಡಲಿಲ್ಲ. ಆಮೇಲೆ ಯಾರು ಮುಂದೆ ಹೇಳುಬ್ಯಾಡ ಅಂತ ಹೇಳಿದ. ನನಗೂ ಅದೇನೋ ಮಜ ಅನಿಸ್ತು. ಹಿಂಗೆ ವಾರಕ್ಕೊಮ್ಮೆ ಎರಡು ವಾರಕ್ಕೊಮ್ಮೆ ಕೆಲಸ ಸುರುಹಚ್ಕೊಂಡ. ನನಗೂ ಅದು ಬೇಕು ಅನಿಸ್ತಿತ್ತು. ಆಗೇನೂ ತಿಳುವಳಿಕೆ ಇರಲಿಲ್ಲ. ಹಿಂಗೆ ಆರೆಂಟು ತಿಂಗಳು ಮುಗಿಯಾದ್ರಾಗೆ ನಂಗೆ ಹೊಟ್ಟೆ ಮುಂದಕ್ಕ ಬಂತು. ಆಮೇಲೆ ನಮ್ಮವ್ವಗ ವಿಷಯ ಗೊತ್ತಾತು. ಹೊಟ್ಟೆ ತಗಸಾಕ ಮದ್ದು ಮಸಿ ಕೊಡಿಸಿದಳು. ಏನೂ ಪ್ರಯೋಜ್ನ ಆಗಲಿಲ್ಲ. ಅಪ್ಪಗ ಹೇಳಿ ಅವಸರದಾಗ ಗಂಡು ನೋಡಿದ್ರು, ಚಿಲಕನಹಟ್ಟಿಯಾಗ ಯಾರೂ ದಿಕ್ಕಿಲ್ದ ಅರೆಹುಚ್ಚನಂತ ಒಬ್ಬ ಹುಡುಗಗ ನನ್ನ ಕೊಟ್ಟು ಮದುವೆ ಮಾಡಿದ್ರು. ಮದುವೆಯಾದ ಮೇಲೆ ಗಂಡಾದೋನು ಒಂದು ದಿನಕೂ ನನ್ನ ಮಗ್ಗಲು ಬರಲಿಲ್ಲ. ಆರೇಳು ತಿಂಗಳಾಗ ಒಂದು ಹೆಣ್ಣು ಕೂಸಾತು. ನಾನು ಕರ್‍ರಗ, ನನ್ನ ಗಂಡ ಕರ್‍ರಗ, ಆದ್ರೆ ಹುಟ್ಟಿದ ಕೂಸು ಕೆಂಪುಗ ಶಾನುಬೋಗ್ರ ಮಗನಂಗಿತ್ತು. ಮಗು ಹುಟ್ಟಿ ಒಂದು ಮೂರು ನಾಕು ತಿಂಗಳಾತು. ಮೊದಲೇ ರುಚಿಕಂಡಿತ್ತ. ಇಲ್ಲಿ ಗಂಡನೂ ಕೈ ಆಡಿಸಂಗಿಲ್ಲ. ಆಮೇಲಾಮೇಲೆ ಕೂಲಿ ಕೆಲಸಕ್ಕೆ ಹೋದಾಗ ಬೇರೆ ಗಂಡಸರ ಸವಾಸ ಸಿಗಾಕತ್ತಿತು. ಹಿಂಗೆ ಇನ್ನೆರಡು ಮಕ್ಕಳಾದವು. ಸಂಸಾರ ಒಜ್ಜೆ ಆಗಾಕತ್ತಿತು. ಗಂಡ ಕೆಲಸಕ್ಕೆ ಹೋದ್ರೆ ಹೋದ, ಇಲ್ಲದಿದ್ದರೆ ಇಲ್ಲ. ಆತನ ಆದಾಯ ನೆಚ್ಚಿ ಸಂಸಾರ ನಡೆಸಾಕಾಗುತ್ತಿದ್ದಿದ್ದಿಲ್ಲ. ಹಿಂಗಿರಬೇಕಾದ್ರೆ ನಮ್ಮ ಮನೆ ಮಗ್ಗಲ ಹನುಮಂತಮ್ಮ ಅಂತ ಒಬ್ಬಾಕಿ ಇದ್ಲು. ಆಕಿ ದಿನಾಲಿ ಕಟ್ಟಿಗಿ ತರೋ ನೆವದಾಗ ಅಡವಿಗೆ ಹೋಗುತಿದ್ಲು. ನಂಗೆ ಕೆಲಸ ಇಲ್ದಾಗ ಆಕಿ ಜೊತೆಗೆ ಕಟ್ಟಿಗೆಗೂ ಹೋಗುತ್ತಿದ್ದೆ. ಜಂಬಯ್ಯನ ಕೆರೆ ಕಡೆ ಹೋಗುತಿದ್ವಿ. ಬೆಂಗಳೂರು ರೋಡು ಮಗ್ಗಲಾಗೆ ಹೋಗುತ್ತೈತಿ. ಅಡುವಿ ಮಗ್ಗಲು ಆಕೆ ಚಾಪೆ ತಲೆದಿಂಡು ಇಟ್ಟಿದ್ಲು. ಅದು ಯಾಕೆ ಅಂಬೋದು ನನಗೆ ಮೊದ್ಲು ತಿಳೀಲಿಲ್ಲ. ಆಮೇಲಾಮೇಲೆ ತಿಳೀತು. ಬೆಂಗಳೂರಿಗೆ ಹೋಗಿ ಬರೋ ಲಾರಿ ಡ್ರೈವರುಗಳು ಆಕೆಗೆ ಗಿರಾಕಿಗಳು. ರೋಡು ಮಗ್ಗಲು ಲಾರಿ ನಿಲ್ಲಿಸಿ ಆಕಿ ಜೊತೆಗೆ ಅಡುವ್ಯಾಗೋಗಿ ಮಲಗಿಕೊಂಡು ಬರೋರು. ದುಡ್ಡು ಕೊಡೋರು. ದಿನಕ್ಕೆ ನಾಕೈದು ಗಿರಾಕಿಗಳತಾಗೆ ಮಲಗುತಿದ್ದಳೇನೊ. ಇದನ್ನು ನೋಡಿದ ಮ್ಯಾಲೆ ಆಕಿ ಜೊತೆಗೆ ನಾನು ಅದೇ ದಂಧೆಗೆ ಇಳಿದೆ. ನನಗೂ ನಾಕೈದು ಗಿರಾಕಿ ಸಿಗೋರು. ಯಾರಿಗೂ ಕಮಿಷನ್ ಕೊಡಂಗಿಲ್ಲ, ಪೋಲಿಸರ ಕಾಟ ಇಲ್ಲ. ಮನೆ ಖರ್ಚಿಗಂತು ದುಡ್ಡು ಸಾಲುತ್ತಿತ್ತು. ಆದ್ರೆ ಇತ್ತೀಚೆಗೆ ಮೈಯಾಗ ಕಸುವಿಲ್ಲ, ಏನೋ ಸುಸ್ತು. ಒಂದ್ಸಾರಿ ಹೊಸಪೇಟ್ಯಾಗ ಸರ್ಕಾರದ ಆಸ್ಪತ್ರೆಗೆ ತೋರಿಸಿದೆ, ರಕ್ತ ಪರೀಕ್ಷೆ, ಇನ್ನೇನೋ ಮಾಡಿದ್ರು, ಸ್ವಲ್ಪ ಗುಳಿಗಿ ಕೊಟ್ರು, ನಂಗೆ ಎಚ್ ಐ ವಿ ಐತೆ ಅಂತ ಹೇಳಿದ್ರು, ಅಂಗಂದ್ರೆ ಏನು ಅಂತ ಕೇಳಿದೆ, ಏಡ್ಸ್ ಅಂದ್ರು, ಭಯ ಆತು. ಯಾವ ಪುಣ್ಯಾತ್ಮ ನನಗೆ ಅದ್ನ ಹಂಚಿದ್ನೋ ಏನೊ, ನಾನು ಎಷ್ಟು ಜನಕ್ಕೆ ಹಂಚೀನೋ ಏನೊ, ಆ ದೇವ್ರಿಗೆ ಗೊತ್ತು. ಈಗೀಗ ನಂಗೆ ಈ ಕೆಲಸ ಬಿಟ್ಟು ಬ್ಯಾರೆ ಮಾಡಾಕ ಆಗಾದಿಲ್ಲ. ಹಂಗೆ ಮೈತೊಳಕೊಂಡು

ಇವತ್ತಿಗೂ ರೋಡು ಮಗ್ಗಲು ಹೋಗ್ತೀನಿ, ಗಿರಾಕಿ ಸಿಕ್ಕೇ ಸಿಗುತಾವು. ಅಷ್ಟರಾಗೆ ಜೀವನ. ಅದ್ರೆ ಈಗೀಗ ಡಾಕ್ಟರು ಹೇಳಿದ ಮ್ಯಾಲೆ ನಿರೋಧ ಜೊತೆಗೆ ಒಯ್ತೀನಿ. ಕೆಲವು ಗಿರಾಕಿಗಳು ಅವನ್ನ ಹಾಕಿಕೊಳ್ಳಾಕ ಬ್ಯಾಡ ಅಂತಾರೆ. ಆದ್ರೂ ರಮಿಸಿ ಹಾಕಿಸ್ತೀನಿ. ಅದ್ರಾಗೆ ಮೊದ್ಲು ಮಗಳನ್ನ ಇಲ್ಲೆ ಹೊಸಪೇಟೆಗೆ ಕೊಟ್ಟೀನಿ, ಇನ್ನಳಿದವು ಸಣ್ಣವು ಅದಾವು, ಸಾಲಿಗಿ ಹೋಗುತಾವೆ. ಮುಂದೆ ಎಷ್ಟು ದಿನ ಬದುಕುತೀನೋ ದೇವ್ರಿಗೇ ಗೊತ್ತು. ನೋಡಾನ ಇದ್ದಷ್ಟು ದಿನ ಜೀವನ ದೂಡಬೇಕಲ್ಲ.

**೨ ಈರಮ್ಮ (೬೫, ಹೆಸರು ಬದಲಿಸಿದೆ)**

ನಮ್ಮೂರು ಬಳ್ಳಾರಿಗೆ ಹತ್ರ, ಆಂಧ್ರದಾಗೈತಿ. ಗುಮ್ಮನೂರು ಅಂತ. ನಾವು ಒಡ್ರು, ನಮ್ಮಮ್ಮ, ಅಪ್ಪ ಮನೆಕಟ್ಟೋಕೆ ಹೋಗೋರು. ನಮ್ದು ಬಡತನ. ಆ ಕಾಲದಾಗ ಮನೆ ಕಟ್ಟಿದ್ರೆ ನಮಗೆಷ್ಟು ರೊಕ್ಕ ಕೊಡುತಿದ್ರು, ಉಪ್ಪಿಗಾದ್ರೆ ಹುಣುಸೆಣ್ಣಿಗೆ ಆಗಂಗಿಲ್ಲ. ಅಷ್ಟು ಕೊಡಾರು. ಬಳ್ಳಾರೆಯಾಗ ಗಡಿಗೆರು ಬಂಗ್ಲೆ ಐತಲ್ಲ. ಅದನ ನಮ್ಮಪ್ಪನೇ ಕಟ್ಟಿದ್ನಂತೆ. ಸಾಯೋವರೆಗೂ ಭಾಳ ಹೆಮ್ಮೆಯಿಂದ ಹೇಳಿಕೊಳ್ಳೋನು. ಆ ಮನೆ ಕಟ್ಟಬೇಕಾದ್ರೆ ನಾವು ಬಳ್ಳಾರಿಗೆ ಸೇರಿದ್ವಿ, ವಡ್ಡರಬಂಡೆ ಕಡೆ ಒಂದು ಗುಡುಸಲು ಹಾಕ್ಕೊಂಡು ಇದ್ವಿ, ಆಗೆಲ್ಲ ಯಾರು ಹೇಳೋರಿಲ್ಲ, ಕೇಳೋರಿಲ್ಲ. ನಾವು ಇಡಕೊಂಡಷ್ಟು ಜಾಗ ನಮ್ಮದೆ. ಹಿಂಗಾಗಿ ಗುಡುಸಲು ಮುಂದೆ ದೊಡ್ಡ ಅಂಗಳಾನೆ ಇತ್ತು. ನಾಕಾರು ಎಮ್ಮೆ ಸಾಕಿದ್ವಿ, ಈಗೇನು ಎಪಿಎಂಸಿ ಮಾಡ್ಯಾರಲ್ಲ. ದೊಡ್ಡ ಬೀಳದು. ಅಡವಿ, ಅಲ್ಲಿಯೇ ಎಮ್ಮೆ ಮೇಯಿಸುತಿದ್ವಿ, ನಂಗಾಗ ಒಂದು ಹತ್ತು ವರ್ಷ ಇದ್ದೀತು. ಆಗಿನಿಂದ ಎಮ್ಮೆ ಮೇಯಿಸುತಿದ್ವಿ, ನಮ್ಮನೆ ಸುತ್ತ ಗೌಳೇರ ಒಂದೆರಡು ಮನೆಗಳಿದ್ವು, ಆ ಮನೆ ಹುಡುಗರೂ ಹುಡುಗೇರು ಎಮ್ಮೆ ಮೇಯಿಸೋಕೆ ಬರೋರು. ಎಮ್ಮೆನ ಒಂದು ಕಡೆ ಮೇಯಾಕ ಬಿಟ್ಟು ಎಲ್ಲರೂ ಕಲ್ತು ಆಟ ಆಡುತಿದ್ವಿ, ಹಿಂಗೆ ನಾನು ಒಂದು ಹದಿಮೂರು ವರ್ಷದಾಕಿ ಆದೆ, ಮೈನೆರೆತೆ. ಆದ್ರೂ ಎಮ್ಮೆ ಕಾಯಾಕ ಹೋಗುತಿದ್ದೆ. ಮೈನೆರತಮ್ಯಾಲೆ ಸ್ವಲ್ಪ ಮೈಕೈ ತುಂಬಿಕೊಂಡೆ. ಎಮ್ಮೆ ಕಾಯಾಕ ಬರೋ ಗೌಳೇರು ಹುಡುಗುರಾಗೆ ಒಬ್ಬಾತ ಒಂದಿನ ಅಡುವ್ಯಾಗ ಕರಕೊಂಡೋಗಿ ನನಗೆ ಮಾಡಿದ. ಆ ಹುಡುಗನ ಜೊತೆಗೆ ಮೈನೆರೆಯೋದಕ್ಕೆ ಮೊದಲು ಕೂಡ ಮಲಗಿಕೊಂಡಿದ್ದೆ. ಆಗೇನು ತಿಳಿತಿದ್ದಿಲ್ಲ. ಮೈನೆರತ ಮ್ಯಾಲೆ ಮಜಾ ಅನಿಸೋಕೆ ಹತ್ತಿತು. ಮೊದ್ಲು ಒಬ್ಬನಿಂದ ಸುರುವಾದ ಕೆಲಸ ಆಮೇಲೆ ಎಮ್ಮೆ ಕಾಯೋಕೆ ಬರೋ ಹುಡುಗರ ಜೊತೆಗೆಲ್ಲಾ ಸುರುವಾತು. ಇದೆಲ್ಲ ಅದೆಂಗೋ ನಮ್ಮವ್ವಗ ಗೊತ್ತಾತು. ಆಕಿ ಒಂದಿನ ದುರುಗಮ್ಮನ ಗುಡಿಗೆ ಕರಕೊಂಡುಹೋಗಿ ಪೂಜಾರಿನ ದೇವ್ರು ಕಟ್ಟಿಸಲು ಕೇಳಿದಳು. ಅಲ್ಲೆ ಹತ್ತರದಾಗ ಹುಲಿಗೆಮ್ಮನ ಸಣ್ಣ ಗುಡಿ ಐತೆ. ಅದರ ಹತ್ರ ಕರಕೊಂಡೋಗಿ ದೇವ್ರು ಕಟ್ಟಿಸಿದರು. ಆಮೇಲೆ ನಾನು ಯಾರತಾಗೆ ಮಲಗಿದ್ರೂ ನಮ್ಮಮ್ಮ ಬೈತಿದಿಲ್ಲ. ಆದ್ರೆ ಮಲಗಾಕ ರೊಕ್ಕ ಇಸುಕೋ ಆಂತ ಹೇಳುತಿದ್ಲು. ಹಿಂಗೆ ಹೊಸ ಹೊಸ ಗಿರಾಕಿಗಳತಾಗೆ ಮಲಗೋಕತ್ತಿದೆ. ಎಮ್ಮೆ ಕಾಯೋ ಕೆಲಸಕ್ಕೆ ನಮ್ಮ ತಮ್ಮನೋರಿಗೆ ಹಚ್ಚಿದ್ರು, ಅಲ್ಲಿಂದ ಮನೆಬಿಟ್ಟು ಬಂದು ಬಸವನಕುಂಟೆಯಾಗಿರೋಕೆ ಹತ್ತಿದೆ. ನನ್ನತಾಕೆ ಗಿರಾಕಿಗಳು ಬರತೊಡಗಿದರು. ಅಲ್ಲಿಯ ಹೆಂಗಸರು ಕೂಡ ಅದೇ ದಂಧೆ ಮಾಡೋರು. ಗಿರಾಕಿಗಳು ಇಲ್ಲದಾಗ ಬೇರೆ ಬೇರೆ ಊರಿಗೆ ಹೋಗೋರು.

ಕಂಪ್ಲಿ, ಗಂಗಾವತಿಗೆ ಹೋಗುತಿದ್ರು, ಅವ್ರ ಜೊತೆಗೆ ನಾನೂ ಹೋಗುತಿದ್ದೆ. ಜುಲೈನಗರದ ಲಾಡ್ಜ್ ಓನರ್ ನಮಗೆ ಕರೆಸುತಿದ್ದ. ಅವನ ಲಾಡ್ಜಿಗೆ ಅಂತಾವೆ ಗಿರಾಕಿಗಳು ಬರೋವು. ಬಂದ ರೊಕ್ಕದಾಗ ನಮಗರ್ಧ ಅವನಿಗರ್ಧ. ಇವತ್ತು ಈ ಊರಾಗ (ಗಂಗಾವತಿ) ದೊಡ್ಡ ಸೌಕಾರಾತ. ಬಡ್ಡಿಸಾಲಕ್ಕೆ ಲಕ್ಷಗಟ್ಟಲೆ ರೊಕ್ಕ ಕೊಡತಾನ. ಹಿಂಗೆ ವಯಸ್ಸಿರೋವರೆಗೆ ದಂಧೆ ಮಾಡಿದೆ. ಬಂದು ರೊಕ್ಕದಾಗೆ ಅಪ್ಪ ಅಮ್ಮಾರಿಗೂ ಕೊಡತಿದ್ದೆ. ಅಪ್ಪ ಅಮ್ ಸತ್ತೋಗ್ಯಾರ. ಈಗೀಗ ತಮ್ಮನೋರು ಬರುತಾರ. ತಮಗೇನಾದ್ರೂ ಕಷ್ಟಿದ್ರೆ ರೊಕ್ಕ ಇಸಗೊಂಡೋಗುತಾರೆ. ನನಗೆ ವಯಸ್ಸಾತು, ಗಿರಾಕಿಗಳು ಹಿಡಿಯೋದೆಂಗೆ ಅಂತ ಚಿಂತೆ ಮಾಡುವಾಗ ಅಡ್ಡೆ ನಡೆಸೋಕೆ ಹೇಳಿದವನೇ ಆ ಲಾಡ್ಜ್ ಓನರ್ರು. ನಂಗೇನೋ ಈ ದಂಧೆ ಮಾಡೋ ಬೇಕಷ್ಟು ಹುಡುಗೇರು ಗೊತ್ತು. ಆದ್ರೆ ದಂಧೆ ಮಾಡೋದ್ಕೆ ಜಾಗ ಬೇಕಲ್ಲ. ಅದಕೆ ಜಾಗ ಕೊಡಿಸಿದಾತ ಆ ಧಣಿಯೆ. ಮಾರ್ಕೆಟ್ ಬಳಿ ಈ ಜಾಗ ಬೀಳು ಬಿದ್ದಿತ್ತು. ಇದು ಆ ಕಡೆ ಮೇನ್ರೋಡಿಗೆ ಹೊಂದಿಕೊಂಡೈತೆ. ಅದನ್ನ ಕಟ್ಟಿಸಾಕೆ, ಖಾನವಳಿ ಇಡಲು ಆತನೇ ರೊಕ್ಕ ಕೊಟ್ಟ. ಆತನ ರೊಕ್ಕ ತೀರಿಸಬೇಕು, ಬಂದ ಲಾಭದಾಗೆ ಅರ್ಧ ಆತಗೂ ಕೊಡಬೇಕು. ಖಾನವಳಿಯ ರೊಕ್ಕ ನನಗೆ. ಆದ್ರೆ ದಂಧೆಯಾಗ ಬಂದ ರೊಕ್ಕ ಆತನಿಗೆ ಕೊಡಬೇಕು. ಆತೇನು ರೊಕ್ಕ ಕೇಳೋಕೆ ಬರೋದಿಲ್ಲ. ಆತನ ಕಡೆ ಆಳುಗಳು ಬಂದು ಇಸಕೊಂಡು ಹೋಗುತಾರೆ. ಈ ಊರಾಗ ನಂದೇ ದೊಡ್ಡ ಅಡ್ಡೆ. ಬ್ಯಾರೇವು ಒಂದು ಮೂರುನಾಕು ಅದಾವು. ಅವರದು ಅವ್ರಿಗೇ, ನಂದು ನನಗೆ. ಆ ಅಡ್ಡೆಗಳಿಗೂ ಆ ಧಣಿನೇ ರೊಕ್ಕ ಕೊಟ್ಟಿರಬೇಕು ಅನಿಸ್ತತೆ. ಆದ್ರೆ ಅದರ ಬಗ್ಗೆ ಒಂದ್ಸಲನೂ ಏನು ಹೇಳಿಲ್ಲ. ಹದಿಮೂರು ವರ್ಷದಿಂದ ಇಲ್ಲಿವರೆಗೂ ನೂರಾರು ಗಿರಾಕಿಗಳನ್ನ ನೋಡೇನಿ. ನನಗೆ ಇವತ್ತಿಗೂ ಒಂದು ರೋಗ ಇಲ್ಲ. ಯಾವ ಏಡ್ಸ್ ಬಂದಿಲ್ಲ, ಯಾವ ಸುಡುಗಾಡೂ ಬಂದಿಲ್ಲ. ಇವತ್ತಿಗೂ ಗಿರಾಕಿ ಇಷ್ಟಪಟ್ರೆ ಹೋಗಿ ಮಲಗಿಕೊಳ್ತೀನಿ. ಮುಂದೆ ಖಾನಾವಳಿ ನೋಡಾಕೆ ನಮ್ಮ ಮ್ಯಾನೇಜರ್ ಅದಾನ. ಬಹಳಷ್ಟು ಜನ ಅವನದೇ ಖಾನವಳಿ ಅಂತ ತಿಳಕೊಂಡಾರ. ಅವನಿಗೆ ತಿಂಗ್ಳಾ ಸಂಬಳ ಕೊಡ್ತೀನಿ. ನಮ್ಮಲ್ಲಿ ಬರೋ ಹುಡಿಗೇರು ಗಿರಾಕಿಗಳತಾಗೆ ಮಲಗಿಕೊಳ್ತಾರೆ, ಗಿರಾಕಿಗಳು ಇಲ್ಲದಾಗ ರೊಟ್ಟಿ ಸುಡಾದು ಇತ್ಯಾದಿ ಅಡುಗೆ ಕೆಲಸಾನೂ ಮಾಡ್ತಾರೆ. ಖಾನಾವಳಿಗೆ ಮಾಡೋ ಕೆಲಸಕ್ಕೆ ಬ್ಯಾರೆ ಕೂಲಿ ಕೊಡ್ತೀನಿ. ಮೊದ್ಲು ಒಂದು ಗಿರಾಕಿ ಒಂದ್ಸಲ ಮಲಗೋಕೆ ಐವತ್ತು ರೂಪಾಯಿ ತಗೋಳತಿದ್ವಿ, ಅದು ನೂರಾಯ್ತು, ಈಗ ನೂರೈವತ್ತು ರೂಪಾಯಿ ತಗೋಳ್ತೀವಿ. ಅದ್ರಾಗೆ ಅರ್ಧ ಆ ಹುಡುಗೇರಿಗೆ ಕೊಡುತೀನಿ. ಸುಮಾರು ಎಂಟು ಹತ್ತು ಹುಡುಗೇರು ಅದಾರ. ಅವಾಗವಾಗ ಬೇರೆ ಕಡೆಯಿಂದ್ಲೂ ಹುಡುಗೇರು ಬರುತಾರೆ, ಬೆಂಗಳೂರು, ಬೆಳಗಾವಿ, ಬಾಗಲಕೋಟೆ, ಇಳಕಲ್ಲು ಕಡೆ ಹುಡುಗೇರಲ್ಲದೆ ಆಂಧ್ರದ ಹೆಂಗಸರು ಸಂತೆ ದಿನ ಬಂದು ನಮ್ಮ ಅಡ್ಡೆಯ ಮೂಲಕ ವ್ಯವಹರಿಸ್ತಾರೆ. ಯಾರ್‍ಯಾರಿಗೆ ಎಷ್ಟೆಷ್ಟು ಸಲ್ಲಬೇಕೊ ಅಷ್ಟು ದುಡ್ಡನ್ನು ಅವತ್ತವತ್ತೇ ಚುಕ್ತಾ ಮಾಡ್ತೀನಿ. ಕೆಲವು ಹುಡುಗೇರು ವಾರಪೂರ್ತಿ ನಂತಾಗ ಬಿಟ್ಟು ವಾರಕ್ಕೊಮ್ಮೆ ಇಸಕೊಳ್ತಾರೆ. ನಂಗೆ ಬಂದ ಅರ್ಧ ರೊಕ್ಕದಾಗ ಈ ಜಾಗ ತಗೋಳಾದಕೆ ರೊಕ್ಕ ಕೊಟ್ಟಿದ್ನಲ್ಲ ಆತಗ ಪಾಲು ಕೊಡಬೇಕು. ಪೋಲಿಸ್ ಮಾಮೂಲು ಇತ್ಯಾದಿ ಆತನೇ ನೋಡಿಕೊಳ್ತಾನೆ. ಪೋಲಿಸರು ತಮಗೆ ಕೇಸ್ ಸಿಗದಾಗ ಒಂದೆರಡು ಹುಡುಗೇರನ

ಅರೆಸ್ಟ್ ಮಾಡಿದ ನಾಟಕ ಮಾಡ್ತಾರೆ, ಆಗ ಕೋರ್ಟ್, ಲಾಯರಿಗೂ ಆತನೇ ಖರ್ಚು ಮಾಡೋದು. ಈ ಊರಿನ ಎಂಎಲ್ಎ, ಎಂಪಿ. ಮಿನಿಸ್ಟ್ರು ಎಲ್ಲರಿಗೂ ನಮ್ಮ ಅಡ್ಡೆ ಗೊತ್ತು. ಅವರಿಗೆ ಬೇಕಾದಾಗ ಕೂಡ ನಮ್ಮ ಅಡ್ಡೆಯಿಂದ ಹುಡುಗೇರನ ಕಳಿಸ್ತೀನಿ. ಇದರಿಂದ ನಾನೇನೂ ದೊಡ್ಡ ಸೌಕಾರತಿ ಆಗಿಲ್ಲ. ನನಗೇನು ಮಕ್ಕಳಿಲ್ಲ ಮರಿ ಇಲ್ಲ. ನನ್ನ ಜೀವನ ಯಾವ ಕೊರತೆ ಇಲ್ಲದೆ ನಡೀತೈತೆ. ನಾನು ಭಾಳ ದುಡುದು ಯಾರಿಗೆ ಕೊಡೋದು. ನನ್ನ ದುಡುಮೆಯಾಗೆ ದೇವ್ರು ದಿಂಡ್ರಿಗೆ ಕೊಡುತೀನಿ. ನಾಕಾರು ಹುಡುಗೇರು ನಮ್ಮ ಅಡ್ಡೆ ನೆರಳಾಗ ಬದುಕುತಾರೆ. ಅಷ್ಟು ಸಾಕು. ನಾನು ಸತ್ತ ಕಾಲಕ್ಕೆ ನಮ್ಮಲ್ಲಿ ಬರೋ ಹುಡುಗೇರು ಯಾರಾದ್ರೂ ಇದನ್ನ ನಡೆಸಿಕೊಂಡು ಹೋಗ್ತಾರೆ. ನಂಗೂ ವಯಸ್ಸಾತು. ಇನ್ನೆಷ್ಟು ಕಾಲ ಬದುಕತೀನೋ ಯಾರಿಗೊತ್ತು.

**೩. ಚಾಂದನಿ (ವಯಸ್ಸು ೩೮, ಹೆಸರು ಬದಲಿಸಿದೆ)**

ನನ್ನ ಹೆಸರು ಚಾಂದನಿ. ಇದು ಈ ದಂಧೆಗೆ ಬಂದನಂತರ ಇಟ್ಟ ಹೆಸರು. ಮೂಲ ಹೆಸರು ಮೆಹರುನ್ನಿಸಾ ಬೇಗಂ ಅಂತ. ನಮ್ಮ ಊರು ಬಳ್ಳಾರಿ ತಾಲೂಕಿಗೆ ಸೇರಿದ ಸಿರಿಗೇರಿ. ನಾನು ಹುಟ್ಟಿ ಬೆಳೆದ ಊರು ಅದು. ಅಲ್ಲಿ ನಮ್ಮಪ್ಪನಿಗೆ ಎರುಡೆಕೆರೆ ಜಮೀನು ಇತ್ತು. ಅದೂ ಒಣಭೂಮಿ. ಮಳೆ ಬಂದರೆ ಮಾತ್ರ ಬೆಳೆ. ಇಲ್ಲದಿದ್ದರೆ ಇಲ್ಲ. ನಮ್ಮಪ್ಪ ಕೂಲಿ ಕೆಲಸ ಮಾಡುತಿದ್ದ. ಜೊತೆಗೆ ಮುಲ್ಲ ಕೆಲಸಾನೂ ಮಾಡುತಿದ್ದ. ನಮ್ಮೂರೊಳಗೆ ಯಾರೆ ಕುರಿ, ಕೋಳಿಗೆ ಮುಲ್ಲ ಮಾಡಿಸಬೇಕಂದ್ರೆ ನಮ್ಮಪ್ಪನ ಬಳಿಗೇ ಬರುತಿದ್ರು, ಒಂದು ಕೋಳಿಗೆ ಚೂರಿ ಹಾಕಿದರೆ ಎರಡು ರೂಪಾಯಿ, ಕುರಿಗೆ ಚೂರಿ ಹಾಕಿದರೆ ೫ ರೂಪಾಯಿ ಕೊಡತಿದ್ರು, ಊರವರು ಕುರಿ ಕೊಯ್ದರೆ ಕಳ್ಳುಪಚ್ಚೆ, ರಕ್ತ ಇತ್ಯಾದಿ ಕೊಡುತಿದ್ರು, ಅವತ್ತು ನಮ್ಮನೆಯಲ್ಲಿ ಮಾಂಸದ ಊಟ. ಇಲ್ಲದಿದ್ದರೆ ಈದ್ ಮಿಲಾದ್‌ನಲ್ಲಿ ಮಾಂಸ ದಾನ ಮಾಡೋರು. ನಮ್ಮಪ್ಪ ಮುಲ್ಲ ಆಗಿದ್ರಿಂದ ಸ್ವಲ್ಪ ಮಾಂಸಾನೂ ಸಿಗುತಿತ್ತು. ಮಾಂಸ ಮಾಡಿ ಮಿಕ್ಕಿದರೆ ನಮ್ಮಮ್ಮ ಅದನ್ನು ಒಣಗಿಸಿ ಸಣ್ಣ ಗಡಿಗಿಗೆ ತುಂಬಿ ಇಡೋರು. ಅಮ್ಮ ಮನೆಯಲ್ಲಿದ್ದೇ ದುಡ್ಡಿಗೆ ಬೇರೆಯವರಿಗೆ ಕೌದಿ ಹೊಲಿದುಕೊಡುತಿದ್ರು, ನಮ್ಮಮ್ಮನಿಗೆ ನಾವು ಐದು ಜನ ಮಕ್ಕಳು. ಅದರಲ್ಲಿ ನಾಲ್ಕು ಹೆಣ್ಣು, ಒಂದೇ ಗಂಡು. ಅಷ್ಟು ಮಕ್ಕಳನ್ನು ಸಾಕಬೇಕಾಗಿತ್ತು. ನಾನೇ ದೊಡ್ಡ ಮಗಳು. ನನಗೆ ೧೬ನೇ ವಯಸ್ಸಿಗೆ ಮದುವೆ ಮಾಡಿದ್ರು, ಗಂಡನಾದೋನಿಗೆ ಆಗಲೇ ವಯಸ್ಸಾಗಿತ್ತು. ಹಿಟ್ಟಿನ ಜನ್ನಿನೊಳಗೆ ಜಿನ್ನು ಬಿಡೋ ಕೆಲಸ ಮಾಡೋನು. ಹಿಟ್ಟಿನ ಧೂಳು ಕುಡಿದು ಕುಡಿದು ಅಸ್ತಮ ಬಂದಿತ್ತು. ಅಸ್ತಮದ ಕಾಟ ತಪ್ಪಿಸಿಕೊಳ್ಳೋಕೆ ಸಾರಾಯಿ ಕುಡಿಯೋನು. ನಾ ಬರುವುದಕ್ಕೆ ಮೊದಲೇ ಭಾರೀ ಉರಿದಾಡಿದ್ದಾನೆಂದು ಹೇಳುತ್ತಾರೆ. ನನ್ನ ಜೊತೆಗಿನ ಸಂಸಾರ ಮಾತ್ರ ಸೊನ್ನೆ. ರಾತ್ರಿಯಲ್ಲಾ ಕೆಮ್ಮತ್ತ, ಉಬ್ಬಸ ಪಡುತ್ತಾ ಮಲಗಿರೋನು. ಒಂದು ದಿನಕ್ಕೂ ನನ್ನ ಮಗ್ಗಲಿಗೆ ಬರಲಿಲ್ಲ. ಹೆಸರಿಗಷ್ಟೇ ಗಂಡ. ನನಗೆ ಹರೇವು ಬೇರೆ, ನನ್ನ ಗಂಡನ ಅಣ್ಣತಮ್ಮಗೋಳು ನಾಲ್ಕು ಜನ. ದೊಡ್ಡೋರಿಬ್ಬರು ಮದುವೆಯಾಗಿ ಬೇರೆ ಮನೆ ಮಾಡಿಕೊಂಡಿದ್ದರು. ಅತ್ತೆ ಮಾವ ಸತ್ತೋಗಿದ್ದರು. ಮದುವೆಯಾಗದ ಮೈದುನ, ನಾನು, ನನ್ನ ಗಂಡ ಮೂವರೂ ಒಂದು ಮನೆಯೊಳಗಿರುತಿದ್ವಿ ನನ್ನ

ಮೈದುನ ಹೆಚ್ಚುಕಮ್ಮಿ ನನಗಿಗಿಂತ ಎರಡು ವರ್ಷ ದೊಡ್ಡೋನಿರಬೋದು. ಗಂಡ ಜಿನ್ನಿಗೆ ಮುಂಜಾನೆ ಹೋದರೆ ಮಧ್ಯಾಹ್ನ ಊಟಕ್ಕೆ ಬರೋನು, ಇಲ್ಲದಿದ್ರೆ ಅಲ್ಲೆ ಹೋಟೆಲಿನೊಳಗೆ ಒಗ್ಗರಣೆ ತಿಂದು ಇರೋನು. ಮೈದುನ ಹೊಲ ಗದ್ದೆ ಕೆಲಸಕ್ಕೆ ಹೋಗೋನು. ಬೆಳಿಗ್ಗೆ ಏಳು ಗಂಟೆಗೆ ಹೋದರೆ ಮಧ್ಯಾಹ್ನ ಒಂದು ಗಂಟೆಗೆಲ್ಲಾ ಮನೆಗೆ ಬರೋನು. ಅವನ ಊಟೋಪಚಾರ ನಾನೇ ನೋಡಿಕೊಳ್ಳುತ್ತಿದ್ದೆ. ಮಧ್ಯಾಹ್ನ ಊಟ ಮಾಡಿ ಮಲಗಿಕೊಂಡುಬಿಡೋನು. ನನಗೆ ಹರೆಯ ಬೇರೆ, ಹೆಂಗೋ ನನಗೂ ಮೈದುನನಗೂ ಸಂಬಂಧ ಬೆಳೀತು. ಅವನಿಂದಾಗಿ ಬಸಿರಾದೆ. ಗಂಡನಿಗೆ ಗೊತ್ತಾಯ್ತು. ಗೊತ್ತಾದರೂ ಅವನು ಏನೂ ಅನಲಿಲ್ಲ. ಒಂದು ಮಗು ಹುಟ್ಟಿತು. ಮಗು ಹುಟ್ಟಿ ಐದು ತಿಂಗಳಿಗೇ ಮತ್ತೆ ಬಸಿರಾದೆ. ದಿನ ತುಂಬಿ ಎರಡನೇ ಮಗನೂ ಹುಟ್ಟಿದ. ನಮ್ಮೊಳಗಿನ ಸಂಬಂಧ ನನ್ನ ಗಂಡನ ಅಣ್ಣಂದಿರಿಗೆ ತಿಳೀತು. ಅವರು ನನಗೇನೂ ಅನಲಿಲ್ಲ. ಆದರೆ ಮೈದುನಗೆ ಇಟಗಿಯಾಗೆ ಹೆಣ್ಣು ತೆಗೆದು ಮದುವೆ ಮಾಡಿದರು. ಹುಡುಗಿ ನನಗಿಂತ ಸುಂದರಿ. ಮೈದುನಗೆ ಮದುವೆಯಾದ ನಂತರ ಅವನ ದೃಷ್ಟಿಯಲ್ಲಾ ಅವನ ಹೆಂಡತಿ ಕಡೆ ಹೊರಳಿತು. ಮೊದಮೊದಲು ಜಗಳ ಮಾಡಿದೆ. ನನ್ನ ಕಿರಿ ಕಿರಿ ತಡೀದೆ ಬೇರೆ ಮನೆ ಮಾಡಿದ್ರು, ಅನಿವಾರ್ಯವಾಗಿ ನಾನು ಸುಮ್ಮನಾದೆ. ತರುವಾಯ ನನಗೆ ತೆವಲು ಬಂದಾಗೆಲ್ಲಾ ಓಣಿಯ ಬೇರೆ ಗಂಡಸರ ಜೊತೆ ಸಂಬಂಧ ಬೆಳೆಸಿಕೊಂಡೆ. ನಮ್ಮೋಣಿಯ ಒಬ್ಬ ಹೆಂಗಸಿನಿಂದ ವ್ಯವಹಾರ ಮಾಡೋದು ಕಲಿತೆ. ಮೊದ ಮೊದಲು ಸುಮ್ಮನೆ ತೆವಲಿಗೆ ಮಲಗುತ್ತಿದ್ದೆ. ಆಮೇಲೆ ದುಡ್ಡುಪಡೆದು ಮಲಗತೊಡಗಿದೆ. ದಂಧೆಗಾಗಿ ಗಂಗಾವತಿ, ಬಳ್ಳಾರಿ, ಹೊಸಪೇಟೆ, ಕೊಪ್ಪಳ, ಸಿಂಧನೂರು, ರಾಯಚೂರು ಎಲ್ಲಾ ಕಡೆಗೆ ಹೋಗಿಬರುತ್ತೇನೆ. ಇಬ್ಬರು ಮಕ್ಕಳಿಗೆ ಮದುವೆ ಮಾಡಿರುವೆ. ಸರ್ಕಾರದ ವಸತಿ ಯೋಜನೆಯಡಿ ಇಬ್ಬರು ಮಕ್ಕಳಿಗೆ ಎರಡು ಮನೆ ಕಟ್ಟಿಸಿರುವೆ. ಮನೆ ಸ್ಯಾಂಕ್ಷನ್ ಮಾಡಿಸಿಕೊಳ್ಳಲು ಮೆಂಬರ್‌ಗಳು ಅಧಿಕಾರಿಗಳ ಬಳಿಯಲ್ಲಾ ಮಲಗಬೇಕಾಯಿತು. ಆದರೆ ಒಂದು ಪೈಸೆ ಲಂಚಕೊಡದೆ ಮನೆ ಕಟ್ಟಿಸಿಕೊಂಡೆ. ನನ್ನ ದೊಡ್ಡ ಮಗ ಸೋಮಾರಿ, ಕೆಲಸಕ್ಕೆ ಹೋಗೊದಿಲ್ಲ. ಅವನು ದುಡಿದುಕೊಂಡು ಜೀವನ ಮಾಡಲಿ ಅಂತ ಆಟೋ ಕೊಡಿಸಿದೆ. ಆಟೋ ಒತ್ತಿಟ್ಟ. ಅವನ ಬದುಕೂ ಹೆಂಡತಿಯ ಮೇಲೆ ಜರಗುವುದು. ಇನ್ನು ಎರಡನೇ ಮಗ ಹೊಸಪೇಟೆಯ ಯಾವುದೋ ಫ್ಯಾಕ್ಟರಿಗೆ ಕೆಲಸಕ್ಕೆ ಹೋಗುತ್ತಾನೆ. ಅವನದೇನೂ ಸಮಸ್ಯೆ ಇಲ್ಲ. ಸೊಸೆ ಕಷ್ಟ ಪಡೋದನ್ನು ನೋಡಲಾರದೆ ನಾನೇ ಮನೆ ಖರ್ಚಿಗೆ ದುಡ್ಡು ಕೊಡುತ್ತೇನೆ. ಇವತ್ತಿಗೂ ದಂಧೆಯಿಂದಲೇ ಜೀವನ. ಪೋಲಿಸರ ಕಾಟ ಇದ್ದದ್ದೆ. ಅವರಿಗೆ ಬೇಕಾದಾಗ ಅವರ ಬಳಿಯೂ ಮಲಗುತ್ತೇನೆ. ಮಾಡುವುದೇನು. ನನಗೆ ಗೊತ್ತಿಲ್ಲದೆ ಈ ಜಾಲದೊಳಗೆ ಬಿದ್ದೆ. ಈಗ ಹೊರಬರಲು ಆಗುತ್ತಿಲ್ಲ.

**೪ ಹುಲಿಗೆಮ್ಮ (ವಯಸ್ಸು ೨೫, ಹೆಸರು ಬದಲಿಸಿದೆ)**

ನನ್ನ ಹೆಸರು ಹುಲಿಗೆಮ್ಮ. ನಮ್ಮದು ಹೊಸಪೇಟೆ. ನಮ್ಮಮ್ಮ ಡೇಲಿ ಮಾರ್ಕೆಟ್ಟಿನೊಳಗೆ ತರಕಾರಿ ವ್ಯಾಪಾರ ಮಾಡುತ್ತಾಳೆ. ನಮ್ಮಮ್ಮ ದೇವದಾಸಿ. ನಮ್ಮಮ್ಮನ್ನ ಈ ಊರಿನ ಮೇದರ ವ್ಯಕ್ತಿಯೊಬ್ಬ ಇಟ್ಟುಕೊಂಡಿರುವನು. ಮೊದಲೆಲ್ಲಾ ದಿನಾಲೂ ಮನೆಗೆ ಬರೋನು, ರಾತ್ರಿ ನಮ್ಮನೆಯೊಳಗೇ

ಮಲಗೋನು. ಈಗೀಗ ದಿನಾಲು ಬರೋದಿಲ್ಲ. ತಿಂಗಳಿಗೋ, ಹದಿನೈದು ದಿನಕ್ಕೋ ಬರುತ್ತಾನೆ. ನಾನು ಸರ್ಕಾರಿ ಶಾಲೆಯಲ್ಲಿ ಏಳನೇ ತರಗತಿವರೆಗೆ ಓದಿರುವೆ. ಎಂಟನೇ ತರಗತಿಗೆ ಅಮ್ಮ ತಮ್ಮನೋರನ್ನ ಎತ್ತಿಕೊಳ್ಳೋಕಂತ ಶಾಲೆ ಬಿಡಿಸಿದಳು. ಮತ್ತೆ ಶಾಲೆಗೆ ಹೋಗಲಾಗಲಿಲ್ಲ. ತಮ್ಮಂದಿರು ದೊಡ್ಡೋರಾಗಿ ಶಾಲೆಗೆ ಹೋಗೋಕತ್ತಿದ ಮೇಲೆ ನಾನು ಅಮ್ಮನ ಜೊತೆಗೆ ವ್ಯಾಪಾರಕ್ಕೆ ಮಾರ್ಕೆಟಿಗೆ ಬಂದೆ. ಮಾರ್ಕೆಟಿನಾಗೆ ಕೊತ್ತಂಬರಿ, ಪಲ್ಲೆ, ಅಲ್ಲ, ಕರಿಬೇವು ಮಾರುತ್ತೇನೆ. ಅಮ್ಮ ನನಗೆ ಬೇರೆ ಅಂಗಡಿ ಮಾಡಿಕೊಟ್ಟಿದ್ದಾಳೆ. ನಾನು ವ್ಯಾಪಾರಕ್ಕೆ ಇಳಿದ ನಂತರ ನನ್ನ ಬದುಕಿನ ದಿಕ್ಕೇ ಬದಲಾಯಿತು. ಕೊತ್ತಂಬರಿ ಕರಿಬೇವು ಪಲ್ಲೆಗಳನ್ನು ಅಮ್ಮನೇ ಸಗಟು ವ್ಯಾಪಾರಿಗಳತಾಗೆ ಖರೀದಿ ಮಾಡಿ ಕೊಡೋಳು. ಸಾಯಂಕಾಲ ದುಡುಮೆಯ ದುಡ್ಡನ್ನು ಅಮ್ಮನಿಗೆ ಕೊಡುತ್ತಿದ್ದೆ. ಅದೇ ದುಡ್ಡನ್ನು ಮಾರನೆ ದಿನ ಅಂಗಡಿಗೆ ಕಟ್ಟಿ ತರಕಾರಿ ತರೋಳು. ದುಡಿದ ದುಡ್ಡಿನೊಳಗೇ ಸ್ವಲ್ಪ ಮುಚ್ಚಿಟ್ಟುಕೊಳ್ಳುತ್ತಿದ್ದೆ. ನನಗೆ ಸಿನೆಮಾ ನೋಡೋ ಚಟ. ತರಕಾರಿ ವ್ಯಾಪಾರ ಮಾಡಲು ಒಬ್ಬ ಹುಡುಗ ಬರೋನು. ಇಲ್ಲಿ ಇಂಜಿನಿಯರಿಂಗೋ ಏನೋ ಓದುತ್ತಿದ್ದನಂತೆ. ಅವನು ವ್ಯಾಪಾರದ ನೆವದಲ್ಲಿ ಮಾರ್ಕೆಟಿಗೆ ಬಂದು ನನಗೆ ಲೈನಿಂಗ್ ಹೊಡೆಯೋನು. ವ್ಯಾಪಾರ ಮಾಡುತ್ತ ನನ್ನ ಪರಿಚಯ ಮಾಡಿಕೊಂಡ. ಹುಡುಗ ನೋಡಲು ಚೆನ್ನಾಗಿದ್ದ. ನನಗೂ ಅವನಂದರೆ ಆಸಕ್ತಿ ಉಂಟಾಯಿತು. ಪ್ರತಿ ಗುರುವಾರ ಮಾರ್ಕೆಟ್ ರಜೆ ಮಾಡುತ್ತಿದ್ದೆ. ಅವತ್ತು ಅವನ ಜೊತೆ ಸಿನೆಮಾಕ್ಕೆ ಹೋಗುತ್ತಿದ್ದೆ. ಕೆಲವು ಸಾರೆ ಮುನಿರಾಬಾದಿನ ಪಾರ್ಕಿಗೆ ಹೋಗುತಿದ್ವಿ. ಹೀಗೆ ನಿಧಾನಕ್ಕೆ ಸಂಬಂಧ ಬೆಳೀತು. ನನಗೆ ಮದುವೆಯಾಗುವುದಾಗಿ ಮಾತು ಕೊಟ್ಟ. ನಾನೂ ಮದುವೆಯಾಗುವನೆಂಬ ನಂಬಿಕೆ ಇಟ್ಟಿದ್ದೆ. ಒಂದು ಸಾರಿ ಬೆಂಗಳೂರಿಗೆ ಯಾವುದೋ ಇಂಟರಿವ್‌ಗೆ ಹೋಗುತ್ತೇನೆ ಬಾ ಎಂದು ಕರೆದ. ಅವತ್ತು ಗುರುವಾರ ಇತ್ತು. ಸಾಯಂಕಾಲ ಅಮ್ಮನಿಗೆ ತಿಳಿಯದಂಗೆ ಅವನ ಜೊತೆ ಹೋಗಿಬಿಟ್ಟೆ. ಬೆಂಗಳೂರು ಮುಟ್ಟಿದೆವು. ಅವನ ಇಂಟರಿವ್ಯು ಮುಗೀತು. ಮರಳಿ ತುಮಕೂರಿಗೆ ಬಂದೆವು. ನನ್ನ ಬಳಿ ಕಳ್ಳತನದಲ್ಲಿ ಉಳಿಸಿಕೊಂಡಿದ್ದ ಸ್ವಲ್ಪ ದುಡ್ಡಿತ್ತು. ಹೆಚ್ಚು ಕಡಿಮೆ ಮೂರು ದಿನ ಲಾಡ್ಜಿನಲ್ಲಿದ್ದು ಮಜಾ ಮಾಡಿದೆವು. ನಾಲ್ಕನೇ ದಿನ ಟಿಫನ್ ತಗಂಡುಬರ್ತೀನಿ ಅಂತ ಕೆಳಗೆ ಹೋದೋನು ಎಷ್ಟೊತ್ತಾದರೂ ಮರಳಿ ಬರಲಿಲ್ಲ. ಅವತ್ತೆಲ್ಲಾ ಉಪವಾಸ. ನನ್ನ ಬಳಿ ಇದ್ದ ದುಡ್ಡು ಖರ್ಚಾಗಿ ಹೋಗಿತ್ತು. ಮರಳಿ ಮನೆಗೆ ಬಂದರೆ ಅಮ್ಮನಿಂದ ಒದೆ ಬೀಳುತ್ತವೆಯಂಬ ಭಯ, ಓಣಿಯವರೆಲ್ಲಾ ತನಗೆ ಕೆಟ್ಟದಾಗಿ ನೋಡುವರೆಂಬ ನಾಚಿಕೆ. ನನ್ನನ್ನು ಕರಕೊಂಡು ಬಂದವನು ಯಾವ ಊರಿನವನೂ ಅಂತಾನೂ ಗೊತ್ತಿಲ್ಲ. ಅವನ ಅಡ್ರೆಸ್ಸೂ ಗೊತ್ತಿಲ್ಲ. ನಾನು ನಿಮ್ಮೂರು ಯಾವುದು ಅಂತ ಕೇಳಿದರೆ ಒಮ್ಮೆ ದಾವಣಗೆರೆ ಅನ್ನೋನು, ಇನ್ನೊಮ್ಮೆ ದುರ್ಗ ಅನ್ನೋನು. ಅಷ್ಟು ದೊಡ್ಡ ಊರಿನೊಳಗೆ ಎಲ್ಲಿ ಅಂತ ಹುಡುಕೋದು. ನನ್ನಲ್ಲಿ ಫೋನು ಇರಲಿಲ್ಲ. ಅವನ ಫೋನ್ ನಂಬರೂ ಗೊತ್ತಿಲ್ಲ. ಮಾಡೋದೇನು. ಲಾಡ್ಜಿನಲ್ಲಿ ಅವನು ಬಾರದೇ ಇದ್ದಾಗ ಲಾಡ್ಜ್ ಮ್ಯಾನೇಜರನ್ನು ಕೇಳಿದೆ. ಅವರಿಗೆ ಎಲ್ಲಾ ಅರ್ಥ ಆಯಿತು. ನಮ್ಮಂಥೋರನ್ನು ಎಷ್ಟು ಜನರನ್ನು ಅವರು ನೋಡಿರಲಿಕ್ಕಿಲ್ಲ. ಲಾಡ್ಜಿಗೆ ಅಡ್ವಾನ್ಸ್ ಕಟ್ಟಿದ್ದೆವು. ಅಡ್ವಾನ್ಸ್ ಮುಗಿದು ನಾವೇ ಅವರಿಗೆ ಹಣ ಕೊಡಬೇಕಾಗಿತ್ತು. ನಾನು ಅಳೋದಕ್ಕೆ ಸುರು ಮಾಡಿದೆ. ಮ್ಯಾನೇಜರ್ ಸಮಾಧಾನ

ಮಾಡಿದ, ಊಟ ತರಿಸಿಕೊಟ್ಟ. ಇನ್ನುಳಿದ ಬಾಡಿಗೆ ಹಣಕ್ಕೆ ಏನು ಮಾಡುತ್ತಿ ಅಂತ ಕೇಳಿದ, ನನ್ನಲ್ಲಿ ದುಡ್ಡಿಲ್ಲ ಅಂದೆ, ಊರಿಗೆ ಹೋಗುತ್ತೀಯ ಅಂದ, ಹೋದರೆ ನಮ್ಮಮ್ಮ ಒದೆಯುತ್ತಾಳೆ ಅಂದೆ. ಅಂದು ರಾತ್ರಿ ಲಾಡ್ಜಿನಲ್ಲಿಯೇ ಉಳಿಯಲು ಅವಕಾಶ ಮಾಡಿಕೊಟ್ಟ. ರಾತ್ರಿ ಹನ್ನೊಂದರ ನಂತರ ನನ್ನ ರೂಮಿಗೆ ಬಂದ. ನನ್ನ ಜೊತೆ ಮಲಗಿದರೆ ಲಾಡ್ಜ್ ಬಾಡಿಗೆ ಬಿಡುವೆನಂದ. ಬೇರೆ ದಾರಿ ಇರಲಿಲ್ಲ. ಅವತ್ತು ಅವನೊಂದಿಗೆ ಮಲಗಿದೆ. ಮಾರನೇ ದಿನ ಎಲ್ಲಿಗೋಗುತ್ತಿ ಅಂತ ಕೇಳಿದ, ನನಗೆ ಗೊತ್ತಿಲ್ಲ, ಸಾಯಬೇಕು ಅಷ್ಟೆ ಅಂತ ಹೇಳಿದೆ. ಸರಿ ನನ್ನೊಂದಿಗೆ ಬಾ, ಮನೆ ಮಾಡಿ ಇಡುತ್ತೇನೆ ಎಂದ. ಬೇರೆ ದಾರಿ ಇರಲಿಲ್ಲ. ಅವನು ತೋರಿಸಿದ ಒಂದು ಸಣ್ಣ ಮನೆಯಲ್ಲಿ ಇರತೊಡಗಿದೆ. ಅವನು ರಾತ್ರಿ ಹನ್ನೊಂದು ಗಂಟೆಗೆ ಮನೆಗೆ ಬಂದು ಮಲಗಿ ಬೆಳಿಗ್ಗೆ ಹೋಗೋನು. ಅಡುಗೆ ಮಾಡಿಕೊಳ್ಳಲು ಗ್ಯಾಸ್, ಪಾತ್ರೆ ಕೊಡಿಸಿದ್ದನು. ಮನೆಗೆ ದಿನಸಿ ಎಲ್ಲಾ ತಂದು ಹಾಕುತ್ತಿದ್ದ. ರಾತ್ರಿ ನನ್ನ ಜೊತೆಗೇ ಉಂಡು ಮಲಗೋನು. ಹೀಗೆ ಎರಡು ತಿಂಗಳು ಕಳೀತು. ಆಮೇಲೆ ಒಂದಿನ ಲಾಡ್ಜಿಗೆ ಬರಲು ಹೇಳಿದ. ಹೋದೆ. ಅಲ್ಲಿ ತೋರಿಸಿದ ಗಿರಾಕಿಯೊಂದಿಗೆ ಮಲಗಲು ತಿಳಿಸಿದ, ಒಲ್ಲೆ ಅಂತ ಹೇಳಿದೆ. ಹಂಗಾದ್ರೆ ನಾಳೆಯಿಂದ ನಾನೂ ಬರೋದಿಲ್ಲ, ನಿನ್ನ ಸಾಕೋದಿಲ್ಲ ಅಂತ ಹೆದರಿಸಿದ. ಬೇರೆ ದಾರಿ ಇರಲಿಲ್ಲ. ಅವನು ತೋರಿಸಿದ ಗಿರಾಕಿಯೊಂದಿಗೆ ಮಲಗತೊಡಗಿದೆ. ಹೀಗೆ ದಿನಕ್ಕೊಂದು ಗಿರಾಕಿ ಬಳಿ ಮಲಗಿಸುತ್ತಿದ್ದ. ಅವರಿಂದ ಬಂದ ದುಡ್ಡನ್ನು ಕೊಡುತ್ತಿರಲಿಲ್ಲ. ಬಿಟ್ಟಿಯಾಗಿ ಜನರ ಬಳಿ ಮಲಗುತ್ತಿದ್ದೆ. ಹೀಗೆ ಒಂದು ವರ್ಷ ಕಳೆಯಿತು. ಮ್ಯಾನೇಜರ್ ಹಾರ್ಟ್ ಅಟ್ಯಾಕ್ಕಾಗಿ ಒಂದಿನ ಸತ್ತ. ಮತ್ತೆ ನಾನು ಬೀದಿಗೆ ಬಿದ್ದೆ. ಒಂದು ವರ್ಷದಲ್ಲಿ ಗಿರಾಕಿಗಳೊಂದಿಗೆ ಒಡನಾಡಿ ಅಭ್ಯಾಸವಾಗಿತ್ತು. ತುಮಕೂರು ಬಿಟ್ಟು ಬೆಂಗಳೂರಿಗೆ ಹೋದೆ. ಅಲ್ಲಿ ಒಬ್ಬ ಮಧ್ಯವರ್ತಿಯಿಂದ ವೇಶ್ಯಾಗೃಹ ಸೇರಿದೆ. ನನಗೆ ಅಲ್ಲಿ ದುಡುಮೆಯ ಅರ್ಧದಷ್ಟಾದರೂ ಹಣ ಸಿಗುತ್ತಿತ್ತು. ಒಂದು ವರ್ಷ ಬೆಂಗಳೂರಲ್ಲಿ ಕಳೆದ ಮೇಲೆ ಅಮ್ಮನ ನೆನಪಾಗತೊಡಗಿತು. ಒಮ್ಮೆ ಮನೆಗೆ ಹೋಗಿ ಬರೋಣ ಅನಿಸಿತು. ಅಮ್ಮ ಬೈದರೆ ಮರಳಿ ಬೆಂಗಳೂರಿಗೆ ಬಂದರಾಯಿತು ಅಂತ ಹೊಸಪೇಟೆ ಬಸ್ ಹತ್ತಿ ಊರಿಗೆ ಬಂದೆ. ಬೆಳಿಗ್ಗೆ ಮನೆಗೆ ಹೋದೆ. ತಮ್ಮಂದಿರೆಲ್ಲ ಎತ್ತರವಾಗಿದ್ದರು. ಅಮ್ಮ ನನ್ನ ನೋಡಿ ಹೊಲಸು ಹೊಲಸು ಬೈಯತೊಡಗಿದಳು. ಬೈದು ಸಾಕಾದಮೇಲೆ ಅಳತೊಡಗಿದಳು. ಎಲ್ಲದಕ್ಕೂ ಸುಮ್ಮನಿದ್ದೆ. ಕೊನೆಗೆ ಅತ್ತು ಸಾಕಾದ ಮೇಲೆ ಇನ್ನಾದರೂ ಮನೆಯಲ್ಲಿರುತ್ಯಾ ಇಲ್ಲ ಯಾವನ ಹಿಂದಾದರೂ ಹೋಗುತ್ತೀಯ ಅಂತ ಕೇಳಿದಳು. ಮನೆಯಲ್ಲಿರುವುದಾಗಿ ಹೇಳಿದೆ. ಮತ್ತೆ ಅಮ್ಮ ತನ್ನ ಅಂಗಡಿಯ ಮುಂದೆ ಕೊತ್ತಂಬರಿ ಪಲ್ಲೆ ಮಾರಲು ನನಗೆ ಅವಕಾಶ ಮಾಡಿಕೊಟ್ಟಳು. ಸಾಯಂಕಾಲದವರೆಗೂ ವ್ಯಾಪಾರ ಮಾಡುತ್ತೇನೆ. ಸಾಯಂಕಾಲ ಆದ ಮೇಲೆ ಗಿರಾಕಿಗಳನ್ನು ಹುಡುಕುವೆ. ಅದಕ್ಕಾಗಿ ಇಲ್ಲಿ ಬೇಕಾದಷ್ಟು ಜನ ಮಧ್ಯವರ್ತಿಗಳಿರುವರು. ಅವರಿಂದ ಗಿರಾಕಿಗಳನ್ನು ಹಿಡಿದು ರಾತ್ರಿ ಕಳೆಯುತ್ತೇನೆ. ಸಾಮಾನ್ಯವಾಗಿ ಲಾಡ್ಜ್‌ಗಳಿಗೆ ಹೋಗಿ ತಂಗುತ್ತೇವೆ. ತರಕಾರಿ ವ್ಯಾಪಾರ ಇರುವುದರಿಂದ ಊರು ಬಿಟ್ಟು ಹೋಗುವುದು ಕಷ್ಟ. ಹೋದರೂ ಗುರುವಾರ ಮಾತ್ರ ಹೊಗಬಹುದು. ನನ್ನ ಈ ದಂಧೆಯ ವಿಚಾರ ಅಮ್ಮನಿಗೂ ಗೊತ್ತು. ಆಕೆಯೂ ಏನೂ ಅನ್ನುವುದಿಲ್ಲ. ದುಡಿಮೆಯ ದುಡ್ಡನ್ನು ಅಮ್ಮನಿಗೇ ಕೊಡುತ್ತೇನೆ. ಮಕ್ಕಳಾಗಿಲ್ಲ.

ರೋಗಗಳು ಬರಬಾರದೆಂದು ಕಾಂಡೋಮ್ ಬಳಸುತ್ತೇನೆ. ನನ್ನ ಪಾಡಿಗೆ ನಾನು ಜೀವನ ಮಾಡಬಲ್ಲೆ ಎಂಬ ಧೈರ್ಯ ಬಂದಿದೆ. ಮದುವೆಯಾದರೂ ಯಾವ ಗಂಡು ನನ್ನ ಮದುವೆಯಾಗಬಲ್ಲ. ಹೀಗಾಗಿ ಮದುವೆಯಾಗುವ ಆಲೋಚನೆ ಇಲ್ಲ.

**೫ ರೋಜಿ (ವಯಸ್ಸು ೨೮, ಹೆಸರು ಬದಲಿಸಿದೆ)**

ನನ್ನ ಹೆಸರು ರೋಜಿ, ರೋಜಮ್ಮ ಅಂತ ಕರೆಯುತ್ತಾರೆ. ನಾವು ಕ್ರಿಶ್ಚಿಯನ್. ನಮ್ಮ ಊರು ಬಳ್ಳಾರಿ. ಪಿಯುಸಿವರೆಗೆ ಓದಿರುವೆ. ಹೆಚ್ಚು ಓದಲು ಸಾಧ್ಯವಾಗಲಿಲ್ಲ. ಕಾಲೇಜಿಗೆ ಹೋಗುವಾಗ ಆಟೋ ಡ್ರೈವರನ ಪರಿಚಯ ಆಯಿತು. ಪಿಯುಸಿ ಮುಗಿಯುತ್ತಿದ್ದಂತೆ ಆತನನ್ನು ಮದುವೆಯಾದೆ. ಮನೆಯಲ್ಲಿ ಮದುವೆಯಾಗಲು ಒಪ್ಪಿಗೆ ಕೊಟ್ಟಿದ್ದರು. ಆ ಹುಡುಗ ಮಾದಿಗರವನು. ಅವನೂ ಕ್ರಿಶ್ಚಿಯಾನಿಟಿಗೆ ಕನ್ವರ್ಟ್ ಆದನು. ಒಂದೆರಡು ವರ್ಷ ಸುಖವಾಗಿ ಜೀವನ ಸಾಗಿಸಿದೆವು. ಒಂದು ದಿನ ಬೆಂಗಳೂರು ರಸ್ತೆಯಲ್ಲಿ ಆಟೋ ಆಕ್ಸಿಡೆಂಟಾಗಿ ಗಂಡ ತೀರಿಕೊಂಡ. ನಾನು ಒಬ್ಬಂಟಿಯಾದೆ. ಮಾಡಲು ಏನು ಕೆಲಸವಿರಲಿಲ್ಲ. ಖಾಸಗಿ ಆಸ್ಪತ್ರೆಯಲ್ಲಿ ನರ್ಸ್ ಆಗಿ ಕೆಲಸಕ್ಕೆ ಸೇರಿದೆ. ರಾತ್ರಿ ಡ್ಯೂಟಿಯೂ ಮಾಡಬೇಕಿತ್ತು. ಆಸ್ಪತ್ರೆಯಲ್ಲಿ ನನ್ನೊಂದಿಗೆ ಕೆಲಸ ಮಾಡುವ ಹುಡುಗನೊಂದಿಗೆ ಸಂಬಂಧ ಬೆಳೆಯಿತು. ಅವನು ನನ್ನೊಂದಿಗೇನೋ ಮಲಗಿಕೊಳ್ಳುತ್ತಿದ್ದ, ಆದರೆ ಮದುವೆಯಾಗಲು ನಿರಾಕರಿಸಿದನು. ತಾನು ಜಾತಿಯಿಂದ ಲಿಂಗಾಯತ, ನಿನ್ನನ್ನು ಮದುವೆಯಾದರೆ ಮನೆಯಲ್ಲಿ ಎಲ್ಲರನ್ನೂ ಎದುರು ಹಾಕಿಕೊಳ್ಳಬೇಕಾಗುತ್ತದೆ ಎಂದು ತಿಳಿಸಿದನು. ಅನಿವಾರ್ಯವಾಗಿ ಅವನಿಂದ ದೂರ ಆದೆನು. ಆ ಆಸ್ಪತ್ರೆ ಬಿಟ್ಟು ಬೇರೆ ಆಸ್ಪತ್ರೆಗೆ ಸೇರಿದೆ. ಅಲ್ಲಿಯೂ ಇದೇ ಕಥೆಯೆ. ಎಲ್ಲಾ ಹುಡುಗರು ಮಜಾ ಮಾಡಲು ಮುಂದಾಗುವರಾದರೂ ಜವಾಬ್ದಾರಿ ಹೊರಲು ಮುಂದೆಬರುತ್ತಿರಲಿಲ್ಲ. ಈ ಗಂಡಸರ ಮೇಲೆಯೇ ಅಸಹ್ಯ ಬರತೊಡಗಿತು. ಯಾರನ್ನೂ ನಂಬಲು ಸಾಧ್ಯವಿರಲಿಲ್ಲ. ಆದರೆ ದೈಹಿಕ ಆಸೆ ಈಡೇರಿಸಿಕೊಳ್ಳಲೇಬೇಕಲ್ಲ. ಪುಕ್ಕಟೆಯಾಗಿ ಯಾರ ಬಳಿ ಏಕೆ ಮಲಗಬೇಕು. ಹಣವಿದ್ದವರ ಬಳಿ ಮಲಗಿ ಹಣ ಕೀಳಬೇಕು ಎಂಬ ಮನೋಭಾವನೆ ಬೆಳೆಯಿತು. ಹಿಂಗಾಗಿ ಮಧ್ಯವರ್ತಿಗಳಿಂದ ಹಣವಂತರನ್ನು ಪರಿಚಯ ಮಾಡಿಕೊಂಡು ವ್ಯವಹರಿಸುತ್ತೇನೆ. ನನ್ನ ಆರೋಗ್ಯದ ಬಗ್ಗೆ ಕಾಳಜಿ ಇದೆ. ಕುಡಿತದ ವ್ಯಸನಕ್ಕೆ ಬಿದ್ದಿಲ್ಲ. ಎಷ್ಟೋ ಗಂಡಸರು ನನಗೆ ಕುಡಿಯಲು ಒತ್ತಾಯ ಮಾಡುವರು. ನಾಜೂಕಾಗಿಯೇ ನಿರಾಕರಿಸುತ್ತೇನೆ. ಕಾಂಡೊಮ್ ಹಾಕದೆ ಯಾವ ಗಂಡಿನ ಬಳಿಯೂ ಮಲಗುವುದಿಲ್ಲ. ಗಂಡಸರ ಮನೋಭಾವ ನೋಡಿ ಅವರಿಗೆ ಕಾಂಡೋಮ್ ತೊಡಿಸಲು ಪ್ರಯತ್ನಿಸುವೆ. ಅವರು ಕಾಂಡೋಮ್ ತೊಡಲು ನಿರಾಕರಿಸಿದರೆ ಹೆಂಗಸರು ಹಾಕುವ ಕಾಂಡೋಮ್‌ಗಳನ್ನು ಸ್ವತಃ ನಾನೇ ಹಾಕಿಕೊಳ್ಳುವೆ. ಗಂಡಸರ ಕಾಂಡೋಮ್ ಎಲ್ಲಾ ಕಡೆಯೂ ದೊರೆಯುವವು. ಆದರೆ ಹೆಂಗಸರ ಕಾಂಡೋಮ್ ಎಲ್ಲಾ ಕಡೆ ದೊರೆಯುವುದಿಲ್ಲ. ಇಲ್ಲಿ ಕೆಲವೇ ಕೆಲವು ಮೆಡಿಕಲ್ ಷಾಪ್‌ಗಳಲ್ಲಿ ದೊರೆಯುತ್ತವೆ. ಆರೋಗ್ಯದ ಕಡೆ ಗಮನ ಕೊಟ್ಟಂತೆ ಹಣದ ಕಡೆಯೂ ಗಮನ ಕೊಡುತ್ತೇನೆ. ನನಗೆ ಮಕ್ಕಳನ್ನು ಹೆರುವ ಆಸೆ ಇಲ್ಲ. ಇನ್ನೂ ಸ್ವಲ್ಪ ದಿನವಾದ ತರುವಾಯ ಯಾವುದಾದರೂ

ಅನಾಥ ಮಗುವನ್ನು ಸಾಕಬೇಕೆಂದಿರುವೆ. ವಯಸ್ಸಿರುವವರೆಗೂ ದಂಧೆ ಮಾಡಿ ಹಣ ಗಳಿಸುವೆ. ವಯಸ್ಸಾದ ಮೇಲೆ ಯಾವುದಾದರೂ ಒಳ್ಳೆಯ ಸೇವಾ ಕಾರ್ಯ ಮಾಡಬೇಕೆಂದಿರುವೆ. ಇವತ್ತು ಸಮಾಜದಲ್ಲಿ ಹಣಕ್ಕೆ ಜನರು ಬೆಲೆ ಕೊಡುವರಾಗಲಿ ಗುಣಕ್ಕೆ ಯಾರೂ ಬೆಲೆ ಕೊಡಲಾರರು.

**೬ ಅಂಜನಮ್ಮ (ವಯಸ್ಸು ೪೦, ಹೆಸರು ಬದಲಿಸಿದೆ)**

ನನ್ನ ಹೆಸರು ಅಂಜನಮ್ಮ, ನಾವು ನಾಯಕರು. ನಮ್ಮ ಊರು ಕೂಡ್ಲಿಗಿ. ಬಳ್ಳಾರಿ ಜಿಲ್ಲೆಯಲ್ಲಿ ಕೂಡ್ಲಿಗಿಯನ್ನು ಗುರುತಿಸುವುದೇ ನಮ್ಮಂಥ ದಂಧೆಯವರಿಂದ. ಕೂಡ್ಲಿಗಿ ಎರಡಕ್ಕೆ ಪ್ರಸಿದ್ದಿ. ಒಂದು ಹುಣುಸೆ ಹಣ್ಣು, ಮತ್ತೊಂದು ನಮ್ಮಂತಹ ಬೆಲೆವೆಣ್ಣುಗಳಿಗೆ. ನಾನು ೧೪ ವರ್ಷದವಳಿದ್ದಾಗಲೇ ನನಗೆ ಆಂಜನೇಯನಿಗೆ ಬಿಟ್ಟರು. ನಮ್ಮಮ್ಮ ಬಯಲಾಟಗಳಲ್ಲಿ ಪಾತ್ರ ಮಾಡೋಳು. ನನಗೂ ಬಯಲಾಟಗಳಲ್ಲಿ ಪಾತ್ರ ಮಾಡಲು ಹಚ್ಚಿದ. ನನಗೆ ಬಯಲಾಟದ ಹಾಡುಗಳನ್ನು ಸ್ವತಃ ಅಮ್ಮನೇ ಹೇಳಿಕೊಡುತ್ತಿದ್ದಳು. ನನ್ನ ಕಂಠವೂ ಚೆನ್ನಾಗಿದೆ. ಹಳ್ಳಿಗಳಿಗೆ ಬಯಲಾಟಕ್ಕೆ ಹೋಗುತ್ತೇನೆ. ಸಾಮಾನ್ಯವಾಗಿ ಹಳ್ಳಿಯಲ್ಲಿ ಬಯಲಾಟವಾಡುವವರು ನಮಗೆ ಎರಡು ಕಾರಣಕ್ಕೆ ಕರೆಸುತ್ತಾರೆ. ಒಂದು ಬಯಲಾಟದಲ್ಲಿ ಒಳ್ಳೆಯ ಪಾತ್ರ ಮಾಡುತ್ತೇವೆಯೆಂದು, ಮತ್ತೊಂದು ನಮ್ಮೊಂದಿಗೆ ಸುಖಿಸಬಹುದೆಂದು. ಒಂದು ಬಯಲಾಟಕ್ಕೆ ಹತ್ತರಿಂದ ಹದಿನೈದು ಸಾವಿರ ರೂಪಾಯಿ ಪಡೆಯುತ್ತೇನೆ. ಜೊತೆಗೆ ಮಲಗಲು ಬೇರೆ ಹಣ ಪಡೆಯುತ್ತೇನೆ. ಬಯಲಾಟಗಳು ನಾಗರ ಪಂಚಮಿಯ ನಂತರ ಸುಗ್ಗಿಕಾಲದಲ್ಲಿಯೇ ಹೆಚ್ಚಾಗಿ ನಡೆಯುವುದು. ಬೇಸಿಗೆಯಲ್ಲಿ ಕಡಿಮೆ. ಅಂತಹ ಸಮಯದಲ್ಲಿ ಹುಣುಸೆ ಹಣ್ಣು ಮಾರುತ್ತೇನೆ. ಇತ್ತೀಚೆಗೆ ವಯಸ್ಸಾಯಿತು. ಬಯಲಾಟಕ್ಕೆ ಕರೆಯುವವರೂ ಕಡಿಮೆ. ಹೀಗಾಗಿ ಊರಲ್ಲಿಯೇ ಗಿರಾಕಿಗಳನ್ನು ಹಿಡಿದು ದಂಧೆ ಮಾಡುತ್ತೇನೆ. ದಂಧೆಗೆ ಲಾಡ್ಜ್‌ಗೆ ಹೋಗುವುದಿಲ್ಲ. ಗಿರಾಕಿಗಳನ್ನು ಮನೆಗೇ ಕರೆದುಕೊಂಡು ಹೋಗುತ್ತೇನೆ. ಅವನು ನಮ್ಮ ಮನೆಯಲ್ಲಿದ್ದಷ್ಟು ಕಾಲ ಗಂಡನಿಗೆ ಚಾಕರಿ ಮಾಡಿದಂತೆ ಚಾಕರಿ ಮಾಡುವೆ. ಅದಕ್ಕೆ ಹಣ ಪಡೆಯುತ್ತೇನೆ. ಹಣವಿರದ ಗಂಡಸರನ್ನು ಮನೆ ಹತ್ತಿರ ಸುಳಿಯಲು ಬಿಡುವುದಿಲ್ಲ. ನನಗೊಬ್ಬಳು ಮಗಳಿದ್ದಾಳೆ. ಪಿಯುಸಿ ಓದುತ್ತಿರುವಳು. ಅವಳಿಗೆ ಮನೆಯಲ್ಲಿಯೇ ಬಿಟ್ಟುಕೊ ಎಂದು ನಮ್ಮವ್ವ ಒತ್ತಾಯಿಸುತ್ತಾಳೆ. ಆದರೆ ನನ್ನ ಮಗಳಿಗೆ ಓದಿಸಿ ಒಳ್ಳೆಯ ಕಡೆ ಸಂಬಂಧ ಹುಡುಕಿ ಮದುವೆ ಮಾಡುವ ಆಸೆ ಇದೆ. ನನಗೂ ಮದುವೆಯಾಗುವ ಆಸೆ ಇತ್ತು. ಅದಕ್ಕೆ ನಮ್ಮವ್ವನೇ ಎಳ್ಳುನೀರು ಬಿಟ್ಟಳು. ನಾನು ಸಾಧಿಸಲಾರದ್ದನ್ನು ನನ್ನ ಮಗಳಾದರೂ ಸಾಧಿಸಲಿ ಎನ್ನುವ ಆಸೆ ನನ್ನದು.

**೭ ಅಮೀರಾಬಾಯಿ (ವಯಸ್ಸು ೪೯, ಹೆಸರು ಬದಲಿಸಿದೆ)**

ನನ್ನ ಹೆಸರು ಅಮೀರಾಬಾಯಿ. ನಾವು ನಟುವರು. ನಮ್ಮದು ಮೊದಲಿಗೆ ಪಾತರದವರ ವಂಶವಂತೆ. ಹೈದರಾಬಾದ ನಿಜಾಮರ ಕಾಲಕ್ಕೋ ಯಾವಾಗಲೋ ಮುಸ್ಲಿಮರಾಗಿ ಬದಲಾದೆವಂತೆ. ನಮ್ಮದು ಜಾತಿ ಬದಲಾಯಿತಾಗಲಿ ವೃತ್ತಿ ಹಾಗೆಯೇ ಉಳಿಯಿತು. ನಮ್ಮ ಊರು ಕೊಪ್ಪಳ. ಊರ ಮಧ್ಯಭಾಗಕ್ಕೆ ನಮ್ಮ ಮನೆ. ತುಂಬಾ ದೊಡ್ಡ ಮನೆ. ಒಳಗೆಲ್ಲಾ ಸಣ್ಣ ಸಣ್ಣ ಖೋಲಿಗಳಿವೆ. ಪಡಸಾಲಿ ದೊಡ್ಡದಿದ್ದು

ಹಾಡು ಕುಣಿತಕ್ಕೆ ಹೇಳಿ ಮಾಡಿಸಿದಂತಿದೆ. ನಮ್ಮದು ನಾಚ್‌ವಾಲಿಗಳ ಮನೆ. ಇಲ್ಲಿ ಯಾವಾಗಲೂ ಹಾಡು, ಕುಣಿತ ಇದ್ದೇ ಇರುತ್ತದೆ. ನಾನು ಫೇಟಿ ಚೆಂದಾಗಿ ಬಾರಿಸುತ್ತೇನೆ. ಅದಕ್ಕೆ ತಬಲಾ ಇತ್ಯಾದಿ ಸಾತ್ ನೀಡುವವರು ನಮ್ಮ ಕುಟುಂಬದ ವ್ಯಕ್ತಿಗಳೆ. ಇವತ್ತು ನನಗೆ ವಯಸ್ಸಾಗಿದೆ. ಗಿರಾಕಿಗಳನ್ನು ಆಕರ್ಷಿಸುವ ಶಕ್ತಿ ಕಡಿಮೆಯಾಗಿದೆ. ಆದರೆ ಮನೆಯ ಇತರ ಹುಡುಗಿಯರು ಈಗ ನಾವು ಮಾಡುವ ಕೆಲಸಗಳನ್ನು ಮಾಡುತ್ತಾರೆ. ಅವರೊಂದಿಗೆ ಬೇರೆ ಧರ್ಮೀಯ ಹುಡುಗಿಯರೂ ಬರುವರು. ಗಿರಾಕಿಗಳು ನಮ್ಮಲ್ಲಿ ಬಂದರೆ ಅವರಿಗೆ ಕುಡಿಯಲು, ತಿನ್ನಲು, ಇಸ್ಪೇಟಾಡಲು, ಹೆಂಗಸರೊಂದಿಗೆ ಮಲಗಲು, ಗಾನ ಕೇಳಲು, ನಾಚ್ ನೋಡಲು ಎಲ್ಲದಕ್ಕೂ ಅವಕಾಶ ಮಾಡಿಕೊಡುತ್ತೇವೆ. ದೊಡ್ಡ ದೊಡ್ಡ ಅಧಿಕಾರಿಗಳಿಂದ ರಾಜಕಾರಣಿ, ಶ್ರೀಮಂತರೆಲ್ಲಾ ಈ ಮನೆಗೆ ಭೇಟಿಕೊಡುತ್ತಾರೆ. ಪೋಲಿಸರಿಗೆ ನಮ್ಮ ಮನೆಯಿಂದ ಮಾಮೂಲು ಹೋಗುವುದರಿಂದ ನಮ್ಮ ತಂಟೆಗೆ ಪೋಲಿಸರು ಬರುವುದಿಲ್ಲ. ಬಂದರೂ ರಾಜಕಾರಣಿಗಳ, ಅಧಿಕಾರಿಗಳ ರಕ್ಷಣೆ ನಮಗಿದೆ. ಇಲ್ಲಿಗೆ ಕಾಲೇಜಿನ ಮೇಷ್ಟ್ರುಗಳೂ ಬರುವರು. ಏನಿದ್ದರೂ ಹಣದ ವಹಿವಾಟು ನನ್ನದೆ. ಗಿರಾಕಿಗಳೊಂದಿಗೆ ವ್ಯವಹರಿಸುವ ಹುಡುಗಿಯರಿಗೆ ಸಲ್ಲಬೇಕಾದಷ್ಟು ಹಣ ನಾನು ಗಿರಾಕಿಗಳಿಂದ ಪಡೆದು ಹುಡುಗಿಯರಿಗೆ ಕೊಡುತ್ತೇನೆ. ನಮ್ಮ ವಠಾವರ (ಮನೆ)ಯಲ್ಲಿ ಎಲ್ಲಾ ಸೇವೆಗಳಿಗೂ ಪ್ರತ್ಯೇಕವಾದ ಹಣ ಚಾರ್ಜ್ ಮಾಡುತ್ತೇವೆ. ಆದರೆ ಗಿರಾಕಿಗಳಿಗೆ ಯಾವುದಕ್ಕೆ ಎಷ್ಟು ಚಾರ್ಜ್ ಮಾಡುತ್ತೇವೆಂದು ತಿಳಿಯುವುದಿಲ್ಲ. ಬೇರೆ ಅಡ್ಡೆಗಳಿಗೆ ಹೋಲಿಸಿದರೆ ನಮ್ಮದು ತುಂಬಾ ದುಬಾರಿ ಅನಿಸಬಹುದು. ಆದರೆ ನಾವು ಗಿರಾಕಿಗಳನ್ನೂ ಅಷ್ಟೇ ಸಂತೃಪ್ತಿಗೊಳ್ಳುವಂತೆ ನೋಡಿಕೊಳ್ಳುತ್ತೇವೆ. ಹೋಟೆಲಿನಲ್ಲಿ ಬೀದಿ ಬದಿಯ ಹೋಟೇಲು ಇರುತ್ತದೆ, ಫೈವ್ ಸ್ಟಾರ್ ಹೋಟೇಲು ಇರುತ್ತವೆ. ಅದರ ರೇಟು ಅದಕ್ಕೆ, ಇದರ ರೇಟು ಇದಕ್ಕೆ. ನಮ್ಮದೂ ಹೀಗೆ. ನಮ್ಮದು ಸ್ವಲ್ಪ ಫೈವ್ ಸ್ಟಾರ್ ಹೋಟೆಲ್ ಇದ್ದಂತೆ. ನಮ್ಮಲ್ಲಿಯ ಹುಡುಗಿಯರು ಗಿರಾಕಿಗಳಿಗೆ ಇಷ್ಟವಾಗದಿದ್ದಲ್ಲಿ ಅವರಿಗೆ ಬೇಕಾದಂತಹ ಗಿರಾಕಿಗಳನ್ನು ಹೊಂದಿಸಿಕೊಡುತ್ತೇವೆ. ಕಾಲೇಜು ಹುಡುಗಿಯರು ಬೇಕೆಂದರೆ ಅವರನ್ನೂ ಕರೆಸುತ್ತೇವೆ. ಒಟ್ಟಿನಲ್ಲಿ ಗಿರಾಕಿಗಳ ತೃಪ್ತಿ ಮುಖ್ಯ ಎಂದು ಹೇಳುತ್ತಾರೆ.

ಈ ಅಧ್ಯಯನದಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರಲ್ಲಿ ಬಳ್ಳಾರಿ ಜಿಲ್ಲೆಯಿಂದ ಒಂದು ನೂರು ಹಾಗೂ ಕೊಪ್ಪಳ ಜಿಲ್ಲೆಯಿಂದ ಒಂದುನೂರು ಮಹಿಳೆಯರನ್ನು ಸಮೀಕ್ಷಿಸಲಾಗಿದೆ. ಈ ಎರಡು ನೂರು ಮಹಿಳೆಯರಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಹೀಗೆ ವಿವಿಧ ಧರ್ಮೀಯರಿರುವರು. ಆದರೆ ಬಹುತೇಕ ಅವರು ಬಡತನದ ಹಿನ್ನೆಲೆಯನ್ನು ಹೊಂದಿದವರು. ಹಾಗೆಯೇ ತಳ ಸಮುದಾಯಗಳಿಗೆ ಸೇರಿದವರೇ ಹೆಚ್ಚು. ಸಾಮಾಜಿಕವಾಗಿ ಬಹಿಷ್ಕೃತರಾದ ಇವರೆಲ್ಲರ ಬದುಕು ಒಂದೇ ರೀತಿಯಾಗಿಲ್ಲ. ಒಬ್ಬೊಬ್ಬರದೂ ಒಂದೊಂದು ಬವಣೆ. ಆ ಎರಡು ನೂರು ಮಹಿಳೆಯರ ಬದುಕಿನ ಬವಣೆಯನ್ನು ತೆರೆದಿಟ್ಟರೆ ಅದೇ ಒಂದು ಬೃಹತ್ ಗ್ರಂಥವಾಗುತ್ತದೆ. ಅದನ್ನು ಈ ಅಧ್ಯಯನದಲ್ಲಿ ಸೇರಿಸುವುದಕ್ಕಿಂತ ಪ್ರತ್ಯೇಕವಾಗಿಯೇ ಕೃತಿ ರೂಪದಲ್ಲಿ ತರುವ ಪ್ರಯತ್ನ ಮಾಡಲಾಗುವುದು. ಪ್ರಸ್ತುತ ಇಲ್ಲಿ ತುಂಬಾ ವಿಶಿಷ್ಟವೆನಿಸುವ ಏಳು ಜನ ಮಹಿಳೆಯರ ಬದುಕಿನ ಬವಣೆಗಳನ್ನಷ್ಟೇ ತಿಳಿಸಲಾಗಿದೆ.

ಇವರ ಬದುಕು ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಇನ್ನುಳಿದ ಮಹಿಳೆಯರ ಪೂರ್ಣ ಚಿತ್ರಣ ಕೊಡಲಾರದಾದರೂ ಅವರ ಬದುಕಿನ ಹಿನ್ನೆಲೆ, ವೇಶ್ಯಾವಾಟಿಕೆಗೆ ಇಳಿದ, ಇಳಿಯಬೇಕಾದ ಸಂದರ್ಭಗಳನ್ನು ತಿಳಿಸುವವೆಂಬ ನಂಬಿಕೆಯಿಂದ ಇಲ್ಲಿ ಏಳು ಜನರ ಬದುಕಿನ ಬವಣೆಗಳನ್ನು ಮಾತ್ರ ನೀಡಲಾಗಿದೆ.

# ಸಮಾರೋಪ

ವೇಶ್ಯಾವಾಟಿಕೆಯು ಪ್ರಾಚೀನ ಕಾಲದಲ್ಲಿ ಒಂದು ಗೌರವದ ವೃತ್ತಿಯಾಗಿ ಗುರುತಿಸಲ್ಪಡುತ್ತಿದ್ದಿತೆಂದು ಚರಿತ್ರೆಯ ಮೂಲಕ ತಿಳಿದುಬರುವುದು. ಆದರೆ ಪ್ರಸ್ತುತ ವೇಶ್ಯಾವಾಟಿಕೆಯು ಸಾಮಾಜಿಕವಾಗಿ ಕಳಂಕಿತ ವೃತ್ತಿಯೆಂದೇ ಗುರುತಿಸಲ್ಪಡುತ್ತಿದೆ. ವೇಶ್ಯಾವಾಟಿಕೆಯು ಯಾವುದೇ ಒಂದು ರಾಷ್ಟ್ರ ಅಥವಾ ರಾಜ್ಯಕ್ಕೆ ಸೀಮಿತವಾದುದಲ್ಲ. ಅದು ಎಲ್ಲಾ ಜಾತಿ, ಧರ್ಮ, ವರ್ಗಗಳಿಗೂ ಅರ್ಬುದದಂತೆ ಆವರಿಸಿದೆ. ಪ್ರಾಚೀನ ಕಾಲದಲ್ಲಿ ವೇಶ್ಯಾವಾಟಿಕೆಯು ಒಂದು ಧಾರ್ಮಿಕ ಆಚರಣೆಯ ಭಾಗವಾಗಿಯೇ ಗುರುತಿಸಲ್ಪಡಲಾಗುತ್ತಿತ್ತು. ಜಗತ್ತಿನಾದ್ಯಂತ ಪುರುಷಶಾಹಿ ವ್ಯವಸ್ಥೆಯು ಹೆಣ್ಣನ್ನು ದ್ವಿತೀಯ ಸ್ಥಾನದಲ್ಲಿಯೇ ಇರಿಸಿದೆ. ಹೆಣ್ಣು ತನ್ನ ಬಳಕೆಗಾಗಿಯೇ ಇರುವ ವಸ್ತು ಎಂದು ಪುರುಷಶಾಹಿ ವ್ಯವಸ್ಥೆ ಕಲ್ಪಿಸಿಕೊಂಡಿದೆ. ಆ ಕಾರಣಕ್ಕಾಗಿಯೇ ಹೆಣ್ಣನ್ನು ಕೀಳಿರಿಮೆಯಿಂದ ನೋಡುವ ದೋರಣೆಯನ್ನು ಪುರುಷಶಾಹಿ ವ್ಯವಸ್ಥೆ ಹೊಂದಿದೆ. ಒಂದಿಲ್ಲಾ ಒಂದು ಕಾರಣಕ್ಕೆ ಹೆಣ್ಣು ತನ್ನ ಅಧೀನದಲ್ಲಿಯೇ ಇರಬೇಕಾದ ಅಸಹಾಯಕ ಸ್ಥಿತಿಯನ್ನು ಈ ವ್ಯವಸ್ಥೆ ಹುಟ್ಟುಹಾಕಿದೆ.

ಬಾಲ್ಯವಿವಾಹ, ಸತಿಸಹಗಮನ, ಬಹುಪತ್ನಿತ್ವ, ಪರದಾಪದ್ಧತಿ ಹಾಗೂ ದೇವದಾಸಿ ಪದ್ಧತಿಯಂತಹ ಆಚರಣೆಗಳು ಮಹಿಳೆಯನ್ನು ನಿರಂತರವಾಗಿ ಕಾಡುತ್ತಲೇ ಇವೆ. ಪ್ರಸ್ತುತ ದಿನಗಳಲ್ಲಿ ಮಹಿಳೆ ಸಾಮಾಜಿಕ ಬದಲಾವಣೆಗೆ ಒಳಗಾಗಿದ್ದಾಳೆ ಎಂದು ಮೇಲ್ನೋಟಕ್ಕೆ ಕಾಣುವುದಾದರೂ ಅದು ಸತ್ಯವೆಂದು ಭಾವಿಸುವಂತಿಲ್ಲ. ಮಹಿಳೆಯು ಇನ್ನೂ ಪುರುಷಶಾಹಿ ಹಿಡಿತದಲ್ಲಿ ಸಿಲುಕಿ ಶೋಷಣೆಗೆ ಒಳಗಾಗುತ್ತಲೇ ಬಂದಿರುವಳು.

ಧಾರ್ಮಿಕ ಪದ್ಧತಿಯ ಹೆಸರಿನಲ್ಲಿ ದೇವದಾಸಿಯಂತಹ ಪದ್ಧತಿ ಇನ್ನೂ ಜೀವಂತವಾಗಿಯೇ ಉಳಿದಿವೆ. ದೇವದಾಸಿ ಪದ್ಧತಿ ಎಂಬುದು ಮೇಲ್ನೋಟಕ್ಕೆ ಧಾರ್ಮಿಕ ಆಚರಣೆಯಾಗಿ ಕಂಡರೂ ಅದರ ಒಳಸುಳಿಯಲ್ಲಿ ವೇಶ್ಯಾವಾಟಿಕೆಯಂತಹ ಅನಿಷ್ಠ ಪರಂಪರೆಯೊಂದು ಅಡಗಿ ಕುಳಿತಿದೆ.

ಎಲ್ಲಾ ಪ್ರಾಣಿಗಳಂತೆ ಮಾನವನು ಸಹ ಪ್ರಾಕೃತಿಕವಾಗಿ ತನ್ನ ವಂಶದ ಮುಂದುವರೆಕೆಗಾಗಿಯೇ ನಿರಂತರ ತೊಡಗಿರುವನು. ಆದರೆ ಮನುಷ್ಯನು ನಾಗರಿಕನಾದಂತೆಲ್ಲಾ ತನ್ನ ಸುತ್ತಲೂ ವಿವಿಧ ವಿಧಿ

ನಿಷೇಧಗಳನ್ನು ಸೃಷ್ಟಿಸಿಕೊಂಡನು. ಕುಟುಂಬದ ಪರಿಕಲ್ಪನೆ ಹುಟ್ಟಿತು. ಕುಟುಂಬದ ಘಟಕವಾಗಿ ವಿವಾಹ ಪದ್ಧತಿ ಸೃಷ್ಟಿಗೊಂಡಿತು. ಲೈಂಗಿಕ ಕ್ರಿಯೆಗೆ ಸಂಬಂಧಿಸಿದಂತೆ ಸಮಾಜದಲ್ಲಿ ಹಲವು ಕಟ್ಟುಪಾಡುಗಳನ್ನು ಹಾಕಿಕೊಳ್ಳಲಾಯಿತು. ಸೃಷ್ಟಿಕ್ರಿಯೆಗೆ ಸಂಬಂಧಿಸಿದಂತೆ ಅಣ್ಣ ತಂಗಿಯರ ನಡುವಿನ ಅಥವಾ ತಂದೆ ಮಗಳ ಮಧ್ಯದ ಲೈಂಗಿಕ ಕ್ರಿಯೆಯಿಂದ ಈ ಜಗತ್ತು ಸೃಷ್ಟಿಗೊಂಡಿತು ಎಂಬ ಸೃಷ್ಟಿ ಕಥೆಯನ್ನು ಜನಪದರು ಹೇಳುವುದನ್ನು ಕೇಳುತ್ತೇವೆ. ಬಹುಶಃ ಮನುಷ್ಯ ನಾಗರೀಕನೆಂದು ಕರೆದುಕೊಳ್ಳುವ ಪೂರ್ವದ ಕಥೆ ಇವಾಗಿರಬೇಕು. ಈ ರೀತಿಯ ಸೃಷ್ಟಿಪುರಾಣಗಳು ಭಾರತೀಯರಲ್ಲಿ ಮಾತ್ರ ಪ್ರಚಲಿತ ಇವೆ ಎಂದು ತಿಳಿಯಬೇಕಾಗಿಲ್ಲ. ಜಗತ್ತಿನ ಬಹುತೇಕ ಎಲ್ಲಾ ಪ್ರದೇಶದೊಳಗಿರುವ ಜನರ ನಂಬಿಕೆಯೂ ಇದೆ ಆಗಿದೆ. ಆಡಂ ಈವ್ ಅವರ ಕಥೆಯನ್ನೇ ಉದಾಹರಣೆಗೆ ನೋಡಬಹುದು. ಭಾರತೀಯ ಎಲ್ಲಾ ತಳಸಮುದಾಯಗಳ ಸೃಷ್ಟಿ ಪುರಾಣಗಳು ಇದನ್ನೇ ಪ್ರತಿಪಾದಿಸುವುದು. ಆದರೆ ನಾಗರೀಕತೆ ಬೆಳೆದಂತೆಲ್ಲ ಈ ರೀತಿಯ ಸಂಬಂಧಗಳು ನಿಷೇಧಿಸಲ್ಪಟ್ಟವು. ಅದಕ್ಕೆ ಮದುವೆ ಎನ್ನುವ ಒಂದು ಸಾಮಾಜಿಕ ವ್ಯವಸ್ಥೆ ರೂಪಿಸಲಾಯಿತು. ಆ ಮೂಲಕ ಮುಕ್ತ ಲೈಂಗಿಕತೆ ಎಂಬುದು ಪಾಪಕರವಾದದ್ದು, ಅನೀತಿಕರವಾದದ್ದು ಎನ್ನುವ ಮನೋಭಾವನೆ ಸೃಷ್ಟಿಗೊಂಡಿತು. ಮನುಷ್ಯನ ಲೈಂಗಿಕ ಚಾಪಲ್ಯವನ್ನು ಕೇವಲ ಮದುವೆಯಂತಹ ಸಾಮಾಜಿಕ ವ್ಯವಸ್ಥೆಯು ಪೂರ್ಣವಾಗಿ ತೀರಿಸಲು ಸಾಧ್ಯವಾಗದೇ ಹೋಯಿತೇನೊ. ಮನುಷ್ಯನ ಅತಿಯಾದ ಲೈಂಗಿಕ ಚಾಪಲ್ಯದ ಫಲವಾಗಿಯೇ ವೇಶ್ಯಾವಾಟಿಕೆಯಂತಹ ವೃತ್ತಿಗಳು ಹುಟ್ಟಿಕೊಂಡವು. ಮನುಷ್ಯನ ಲೈಂಗಿಕತೆಯ ಕುರಿತಾದ ಮಾನಸಿಕ ಆಕಾಂಕ್ಷೆಯನ್ನು ಯಾವ ನೀತಿಗಳಾಗಲಿ, ಧಾರ್ಮಿಕ ವ್ಯವಸ್ಥೆಗಳಾಗಲಿ ತಡೆಯಲು ಅಸಮರ್ಥವಾಗಿವೆಯೆಂದೇ ಹೇಳಬಹುದು.

ವೇಶ್ಯಾವಾಟಿಕೆಯಂಬುದು ತುಂಬಾ ಪ್ರಾಚೀನ ಪದ್ಧತಿಗಳಲ್ಲಿ ಒಂದು. ಭಾರತ, ಪಶ್ಚಿಮಏಷ್ಯಾ, ಬ್ಯಾಬಿಲೋನಿಯ, ಪೂರ್ವಪ್ರಾಂತ್ಯ, ಮಧ್ಯಅಮೇರಿಕಾ, ಪಶ್ಚಿಮಆಫ್ರಿಕಾ, ಸಿರಿಯಾ, ಅರೇಬಿಯಾ, ಈಜಿಪ್ಟ್, ಗ್ರೀಸ್ ಮತ್ತು ರೋಮ್ ಮೊದಲಾದ ದೇಶಗಳಲ್ಲಿ ವೇಶ್ಯಾ ಪದ್ಧತಿ ಆಸ್ತಿತ್ವದಲ್ಲಿದ್ದುದನ್ನು ಗ್ರೀಸ್ ಮತ್ತು ರೋಮ್‌ನ ಪ್ರಮುಖ ಇತಿಹಾಸಕಾರರು, ಸಾಹಿತಿಗಳು, ಪ್ರವಾಸಿ ಬರಹಗಾರರು ಗುರುತಿಸಿದ್ದಾರೆ. ಅವರು ನೀಡಿರುವ ವಿವರಗಳನ್ನು ಪ್ರಾಕ್ತನ ಸಾಕ್ಷ್ಯಧಾರಗಳೊಂದಿಗೆ ತುಲನೆ ಮಾಡಿ ಅಧ್ಯಯನ ಮಾಡಿದರೆ ಪ್ರಾಯಶಃ ಈ ಪದ್ಧತಿ ಬಹು ಹಿಂದಿನಿಂದಲೂ ಆಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಆರಂಭಿಕವಾಗಿ ಧರ್ಮ-ದೇವರುಗಳ ಹೆಸರಿನಲ್ಲಿ ಆಸ್ತಿತ್ವಕ್ಕೆ ಬಂದ ಈ ಪದ್ಧತಿ ಕ್ರಮೇಣಾ ಸಾ ನನ ಮಾಜಿಕ ಸ್ವರೂಪವನ್ನು ತಾಳಿ ಇಂದಿಗೂ ಆಸ್ತಿತ್ವದಲ್ಲಿದೆ.

ಭಾರತದಂತಹ ರಾಷ್ಟ್ರಗಳಲ್ಲಿ ಬಡತನ, ವೈಧವ್ಯ, ಧಾರ್ಮಿಕ ಕಟ್ಟಳೆಗಳು ಹೀಗೆ ನಾನಾ ಕಾರಣಗಳಿಗಾಗಿ ವೇಶ್ಯಾವಾಟಿಕೆಯು ಹುಟ್ಟಿದೆ. ಕ್ರಿ.ಶ.ಏಳನೇಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ರಾಜರುಗಳ ಆಸಕ್ತಿಯಿಂದಾಗಿ ದೇವಾಲಯಗಳ ನಿರ್ಮಾಣದ ಕಾರ್ಯಗಳು ಹೆಚ್ಚಾಗತೊಡಗಿದವು. ಇದರಿಂದಾಗಿ ಈ ದೇವದಾಸಿ ಪದ್ಧತಿಯು ಭಾರತೀಯ ಸಂಸ್ಕೃತಿಯಲ್ಲಿ ಅಷ್ಟೊಂದು ಆಳವಾಗಿ ಬೇರು ಬಿಡಲು ಕಾರಣವಾಯಿತು. ಸೂರ್ಯ ದೇವಾಲಯವು ಶೃಂಗಾರಕ್ಕೆ ಪ್ರಸಿದ್ಧವಾಗಿದ್ದು ಆ ದೇವಾಲಯದಲ್ಲಿ

ದೇವದಾಸಿಯರ ಸಂಖ್ಯೆ ಹೆಚ್ಚಾಗಿದ್ದಿತು ಎಂದು ಇತಿಹಾಸಕಾರರು ಉಲ್ಲೇಖಿಸಿರುವರು. ಉತ್ತರ ಭಾರತದಲ್ಲಿ ಮುಸ್ಲಿಮರ ಆಕ್ರಮಣದ ಕಾಲದಿಂದಲೇ ದೇವದಾಸಿ ಪದ್ಧತಿ ಕ್ಷೀಣಿಸುತ್ತ ಸಾಗಿತು. ಆದರೆ ಮುಸ್ಲೀಂ ಆಡಳಿತಕ್ಕೆ ಒಳಗಾಗದ ದಕ್ಷಿಣ ಭಾರತದಲ್ಲಿ ಹಿಂದೂ ರಾಜರುಗಳ ಆಳ್ವಿಕೆಯೆ ಇತ್ತು. ಹಿಂದೂ ರಾಜರ ಅಭಿರುಚಿಯ ಅಂಗವಾಗಿ ವೇಶ್ಯಾವಾಟಿಕೆ ದಕ್ಷಿಣ ಭಾರತದಲ್ಲಿ ಉತ್ತರ ಭಾರತಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿದ್ದಿತು ಎಂದು ಇತಿಹಾಸಕಾರರು ತಿಳಿಸುತ್ತಾರೆ. ರಾಜರ ಆಳ್ವಿಕೆ ಕೊನೆಗೊಂಡ ತರುವಾಯ ಭಾರತವು ಅನೇಕ ಸ್ಥಿತ್ಯಂತರಗಳನ್ನು ಕಂಡಿತು. ಭಾರತ ಸ್ಥಳೀಯ ಅರಸರ ಆಳ್ವಿಕೆಯಿಂದ ಪಾರಾಗಿ ವಿದೇಶಿಯರ ಹಿಡಿತಕ್ಕೆ ಒಳಗಾಯಿತು. ಆ ಮೂಲಕ ರಾಜಕೀಯವಾಗಿ ದೇಶವು ಅಸ್ತಿರಗೊಳ್ಳುತ್ತಾ ಸಾಗಿತು. ಭಾರತ ಸ್ವಾತಂತ್ರ್ಯಗೊಂಡ ತರುವಾಯ ಈ ವ್ಯವಸ್ಥೆ ಇನ್ನೂ ಹದಗೆಡುತ್ತಾ ಸಾಗಿತು. ಬಡತನ, ಅನಕ್ಷರತೆಯಿಂದ ವ್ಯವಸ್ಥೆ ಬಳಲುವಂತಾಯಿತು. ಇದರ ಪರಿಣಾಮ ಭಾರತೀಯ ಸಮಾಜದ ಮೇಲೆ, ಮುಖ್ಯವಾಗಿ ಮಹಿಳೆಯರ ಮೇಲೆ ಹೆಚ್ಚು ಪರಿಣಾಮಗಳನ್ನು ಉಂಟುಮಾಡಿತು. ಪವಿತ್ರ ಸ್ಥಾನದಲ್ಲಿದ್ದ ದೇವದಾಸಿ ಪದ್ಧತಿ ಅವನತಿಗೊಂಡಿತು. ಆದರೆ ವೇಶ್ಯಾವೃತ್ತಿಯು ಹೆಚ್ಚು ವ್ಯಾಪಕವಾಗಿ ಬೆಳೆಯಿತು.

ದೇವದಾಸಿ ಎಂದರೆ ದೇವರಿಗೆ ದಾಸಿಯಾದವಳು ಎಂದು ಅರ್ಥವಾಗುತ್ತದೆ. ದೇವರದಾಸಿ, ಸೇವಕಿ, ಪವಿತ್ರದಾಸಿ, ದೇವಾಲಯದ ಕನ್ಯೆ, ದೇವಾಲಯದ ನರ್ತಕಿ, ದೇವರ ಗುಡಿಸೆಟ್ಟಿ ಮತ್ತು ದೇವರ ನಾಯಕಸಾನಿ ಎಂಬ ಅರ್ಥಗಳಲ್ಲಿ ಇದನ್ನು ಬಳಸಲಾಗುತ್ತದೆ. ಈ ಪದ್ಧತಿಯಲ್ಲಿ ಚಿಕ್ಕ ಹುಡುಗಿಯರನ್ನು ದೇವ-ದೇವತೆಗಳ ಅಥವಾ ಪೂಜೆಗೊಂಡ ಯಾವುದೊ ಒಂದು ವಸ್ತುವಿನ ಎದುರಿಗೆ ಸಾರ್ವಜನಿಕ ಸಮಾರಂಭದಲ್ಲಿ ಆ ಕನ್ಯೆಯು ಕಲಿತ ಸಂಗೀತ ಹಾಗೂ ನರ್ತನೆಯನ್ನು ಪ್ರದರ್ಶಿಸಿ ಆ ದೈವಕ್ಕೆ ಅವಳನ್ನು ವಿವಾಹ ಮಾಡಿ ಅರ್ಪಿಸಲಾಗುತ್ತಿತ್ತು. ಹೀಗೆ ಅರ್ಪಣೆಗೊಂಡ ದೇವದಾಸಿಯರ ಬಗೆಗಳೆಂದರೆ ಪಾತರದವರು, ಬಸವಿಯರು, ಜೋಗತಿಯರು. ಧಾರ್ಮಿಕ ಕಟ್ಟುಪಾಡುಗಳು, ಮೂಢನಂಬಿಕೆ, ದೈವಭಕ್ತಿ ಮತ್ತು ಪರಂಪರೆ ಹೀಗೆ ವಿವಿಧ ಹೆಸರುಗಳಲ್ಲಿ ಪುರುಷ ಪ್ರಧಾನ್ಯ ಮೌಲ್ಯಗಳು ತಮ್ಮ ಆಸೆಯನ್ನು ತೀರಿಸಿಕೊಳ್ಳಲು ಸಂಚು ಹೂಡಿದವು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ಮೇಲೆ ಹೇಳಿದ ಎಲ್ಲಾ ನಂಬಿಕೆಗಳನ್ನು ಮೌಲ್ಯವಾಗಿಸಿ ಬಡತನ ಮತ್ತು ಹಸಿವಿನಿಂದ ಗುಲಾಮರಾಗಿದ್ದ ಕೆಳ ಜಾತಿಯ ಹೆಣ್ಣು ಮಕ್ಕಳ ಮೇಲೆ ಹೇರಿರುವುದು. ಇವರನ್ನು ಪಾತರದವರು, ದೇವದಾಸಿಯರು, ಬಸವಿಯರು, ನಾಯಕಸಾನಿಯರು, ಸೂಳೆಯರು, ಜೋಗತಿಯರು, ವೇಶ್ಯೆಯರು ಎಂದು ಕರೆಯತೊಡಗಿದರು. ಇವು ಒಂದಕ್ಕೊಂದು ಸೂಕ್ಷ್ಮವಾದ ಭಿನ್ನತೆ ಮತ್ತು ಗುಣಲಕ್ಷಣಗಳನ್ನು ಹೊಂದಿವೆ. ಆದರೆ ಇವರೆಲ್ಲರು ಬಡವರು ಮತ್ತು ಕೆಳಜಾತಿಗೆ ಸೇರಿದ ಹೆಣ್ಣುಗಳಾಗಿದ್ದಾರೆ.

ಹೆಣ್ಣನ್ನು ನರಕಕ್ಕೆ ದಾರಿ, ಸೈತಾನಿನ ಬಾಗಿಲು, ಹೆಣ್ಣು ಕತ್ತಿಯ ಅಲುಗಿನಂತೆ, ಅವಳು ಭೋಗದ ವಸ್ತು, ಹೆಣ್ಣು ಸ್ವಾತಂತ್ರ್ಯಹೊಂದಲು ಅರ್ಹಳಲ್ಲ. ಅವಳು ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಪತಿ, ವೃದ್ಧ್ಯಾಪ್ಯದಲ್ಲಿ ಮಗನ ಆಸರೆಯಲ್ಲಿಯೇ ಬದುಕಬೇಕು ಎಂದು ಶಂಕರಾಚಾರ್ಯರಿಂದ ಹಲವು

ಜನ ಹೇಳಿರುವರು. ಇಂದಿಗೂ ಹೆಣ್ಣನ್ನು ಪುರುಷನ ಗುಲಾಮಳು ಎನ್ನುವಂತೆಯೇ ಈ ಪುರುಷಶಾಹಿ ಸಮಾಜ ನಡೆಸಿಕೊಳ್ಳುತ್ತಾ ಬಂದಿದೆ. ಅಂದರೆ ಹಿಂದಿನಿಂದ ಇಂದಿನವರೆಗೂ ಸಾಮಾಜವು ಮಹಿಳೆಯನ್ನು ಎರಡನೇ ದರ್ಜೆಯಲ್ಲಿಯೇ ಇರಿಸುತ್ತಾ ಬಂದಿದೆ. ಅವಳಿಗೆ ಮೊದಲಿನ ಸ್ಥಾನ ಈ ವ್ಯವಸ್ಥೆ ದೊರಕಿಸಿಯೇ ಕೊಟ್ಟಿಲ್ಲ.

ಪುರುಷಶಾಹಿ ವ್ಯವಸ್ಥೆಯಲ್ಲಿ ಗಂಡು ಸ್ವೇಚ್ಛಕಾಮದಲ್ಲಿ ತೊಡಗಬಹುದಂತೆ. ಅಂತಹ ಪುರುಷನಿಗೆ ಈ ವ್ಯವಸ್ಥೆಯಲ್ಲಿ ಯಾವ ಕಳಂಕವೂ ತಾಗಲಾರದು. ಆದರೆ ಮಹಿಳೆ ಸ್ವೇಚ್ಛಕಾಮದಲ್ಲಿ ತೊಡಗುವಂತಿಲ್ಲ. ಹಾಗೆ ಅವಳು ಸ್ವೇಚ್ಛಕಾಮದಲ್ಲಿ ತೊಡಗಿದಲ್ಲಿ ಅವಳು ಸಾಮಾಜಿಕವಾಗಿ ಬಹಿಷ್ಕಾರಕ್ಕೆ ಒಳಗಾಗುವಳು. ಅವಳನ್ನು ಅಧರ್ಮೀಯಳೆಂದೂ, ಕಳಂಕದಿಂದ ಕೂಡಿದವಳೆಂದೂ ಭಾವಿಸಲಾಗುವುದು. ಇಂತಹ ಪುರುಷಶಾಹಿ ನೀತಿ ನಿಯಮಗಳಿಂದ ಸಾಮಾಜಿಕವಾಗಿ ಮಹಿಳೆ ಹೆಚ್ಚು ಕುಬ್ಜಳಾಗುತ್ತಿರುವಳು. ಮಹಿಳೆಯನ್ನು ತನ್ನ ಕಾಮತೃಷೆಗೆ ಬಳಸಿಕೊಳ್ಳುವ ಪುರುಷನು ನಿರಾಪರಾಧಿಯೆಂದು ಬಿಂಬಿತವಾದರೆ, ಅವನ ಬಳಕೆಗೆ ಒಳಗಾಗುವ ಮಹಿಳೆ ಅಪರಾಧಿಯೆಂದು ಪರಿಗಣಿತಳಾಗುತ್ತಾಳೆಂಬುದೇ ದುರಂತ.

ವೇಶ್ಯಾವಾಟಿಕೆಯು ಸಾಮಾಜಿಕವಾಗಿ ಅನಿಷ್ಟ ಹಾಗೂ ಕಳಂಕಿತ ವೃತ್ತಿಯೆಂದು ಪರಿಗಣಿತವಾಗಿದೆ. ೧೯೮೨ ರಲ್ಲಿ ದೇವದಾಸಿ ನಿಷೇಧ ಕಾಯ್ದೆಯನ್ನು ಸರ್ಕಾರ ಜಾರಿಗೊಳಿಸಿತು. ಪ್ರಾಯಶಃ ದೇವದಾಸಿ ಹೆಸರಿನಲ್ಲಿ ನಡೆಯುವ ಅನಾಚಾರಗಳನ್ನು ತಡೆಯುವ ಉದ್ದೇಶಕ್ಕಾಗಿ ಸರ್ಕಾರವು ದೇವದಾಸಿ ನಿಷೇಧ ಕಾಯ್ದೆ ಜಾರಿಗೆ ತಂದಿತು. ಹಾಗೆಯೇ ವೇಶ್ಯಾವೃತ್ತಿಯನ್ನು ನಿಯಂತ್ರಿಸುವ ದೃಷ್ಟಿಯಿಂದ ಕಾಯ್ದೆಗಳನ್ನು ಜಾರಿಗೊಳಿಸಲಾಯಿತು. ಕಾಯ್ದೆಯನ್ನು ಜಾರಿಗೊಳಿಸುವ ಮಟ್ಟಕ್ಕೆ ಇವು ಸೀಮಿತವಾದವಾಗಲಿ ನಿಜವಾದ ರೀತಿಯಲ್ಲಿ ವೇಶ್ಯಾವಾಟಿಕೆ ನಿಯಂತ್ರಣಗೊಳ್ಳದೆ ವರ್ಷದಿಂದ ವರ್ಷಕ್ಕೆ ಅದರ ಪ್ರಮಾಣ ಹೆಚ್ಚುತ್ತಲೇ ಇದೆ ಎಂದು ಹೇಳಲಾಗುತ್ತಿದೆ. ಕರ್ನಾಟಕದಲ್ಲಿ ಪ್ರತಿದಿನ ಸುಮಾರು ಎರಡು ನೂರರಷ್ಟು ಯುವತಿಯರು ವೇಶ್ಯಾವಾಟಿಕೆ ದಂಧೆಗೆ ಪ್ರವೇಶಿಸುತ್ತಿರುವರಂತೆ. ವೇಶ್ಯಾವಾಟಿಕೆಯು ಸಮಾಜದೊಳಗೆ ನಿರಂತರವಾಗಿ ಉಳಿಯಲು ಅದನ್ನು ಪೋಷಿಸಿ ಆ ವ್ಯವಹಾರದಿಂದ ಲಾಭಗಳಿಸುವ ದುಷ್ಟ ವ್ಯವಸ್ಥೆಯೂ ಕಾರಣವಾಗಿದೆ.

ಪ್ರಸ್ತುತ ಅಧ್ಯಯನವು ವೇಶ್ಯಾವಾಟಿಕೆ ಸಾಮಾಜಿಕ ಸಂದರ್ಭಗಳು ಎಂದಿದ್ದು ಈ ಅಧ್ಯಯನದಲ್ಲಿ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ವೇಶ್ಯಾವಾಟಿಕೆಯನ್ನೇ ವೃತ್ತಿಯಾಗಿಸಿಕೊಂಡವರ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ, ಆರ್ಥಿಕ, ಆರೋಗ್ಯ ಇತ್ಯಾದಿಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಯನದ ಫಲಿತಗಳು**

ಈ ಅಧ್ಯಯನವು ವೇಶ್ಯಾವಾಟಿಕೆಗೆ ಒಳಗಾಗಿರುವ ಸಾಮಾಜಿಕ ಸಂದರ್ಭಗಳ ಹಿನ್ನೆಲೆಯನ್ನು ಅರಿಯುವ ಪ್ರಯತ್ನ ಮಾಡಿದೆ.

- ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಯ ವೇಶ್ಯಾವಾಟಿಕೆಯ ಮೂಲಗಳ ಹಿನ್ನೆಲೆ ಹಾಗೂ ಸಮಕಾಲೀನ ಸಂದರ್ಭದಲ್ಲಿ ಅದರ ಸಾಮಾಜಿಕ ಪರಿಣಾಮಗಳನ್ನು ಅಧ್ಯಯನದಲ್ಲಿ ಗುರುತಿಸಿದೆ.

- ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರ ಪ್ರಮಾಣ ಕೊಪ್ಪಳ ಜಿಲ್ಲೆಗಿಂತ ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿದೆ. ಪ್ರಾಯಶಃ ಇದಕ್ಕೆ ಕಾರಣ ಪ್ರವಾಸೋದ್ಯಮ, ಗಣಿಗಾರಿಕೆ, ಬೃಹತ್ ಕೈಗಾರಿಕಾ ವಲಯಗಳು ಎಂದು ಗುರುತಿಸಲಾಗಿದೆ.
- ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಇಳಿಯುವ ಮಹಿಳೆಯರ ಪೋಷಕರು, ಗಂಡ, ಮಧ್ಯವರ್ತಿಗಳು, ವೇಶ್ಯಾಗೃಹಗಳು, ಕಾನೂನುಗಳನ್ನು ಜಾರಿಗೊಳಿಸುವ ಸಂಸ್ಥೆಗಳು, ಸಾಮಾಜಿಕ ಕಾರ್ಯಕರ್ತರು, ಸಮಾಜ ಸುಧಾರಕರು, ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು ಹೇಗೆ ವರ್ತಿಸುತ್ತವೆ ಎಂಬುದನ್ನು ಕಂಡುಕೊಳ್ಳಲು ಸಾಧ್ಯವಾಗಿದೆ.
- ವೇಶ್ಯಾವಾಟಿಕೆ ನಿಯಂತ್ರಿಸಲು ಮತ್ತು ಆ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರಿಗೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಕಲ್ಪಿಸಿರುವ ಯೋಜನೆಗಳನ್ನು ಅವುಗಳ ಕಾರ್ಯಗಳನ್ನು ಈ ಅಧ್ಯಯನದ ಮೂಲಕ ಕಂಡಕೊಳ್ಳಲಾಗಿದೆ.
- ವೇಶ್ಯಾವಾಟಿಕೆಯನ್ನು ನಿಯಂತ್ರಿಸುವ ಕಾರ್ಯ ಅಷ್ಟು ಸುಲಭವಲ್ಲ. ವೇಶ್ಯಾವಾಟಿಕೆಯು ಪ್ರಪಂಚದಾದ್ಯಂತ ಹರಡಿದೆ. ಒಂದಾಗಿದೆ. ಪ್ರಾಚೀನ ಕಾಲದಿಂದ ರೂಢಿಯಲ್ಲಿರುವ ಈ ವ್ಯವಸ್ಥೆಯನ್ನು ಅಷ್ಟು ಸುಲಭವಾಗಿ ನಿಯಂತ್ರಿಸುವುದು ಕಷ್ಟ ಎಂಬುದು ಈ ಅಧ್ಯಯನದಿಂದ ತಿಳಿದುಬಂದಿದೆ.
- ಬಡತನದಿಂದ ಬಳಲುತ್ತಿರುವ ಮಹಿಳೆಯರು ಹಾಗೂ ಮೇಲ್ವರ್ಗಗಳ ಹಿಡಿತದಿಂದ ಪಾರಾಗಲಾಗದ ಅಸಹಾಯಕ ಮಹಿಳೆಯರು ವೇಶ್ಯಾವಾಟಿಕೆಗೆ ತಳ್ಳಲ್ಪಟ್ಟಿರುವುದು ಈ ಅಧ್ಯಯನದಿಂದ ಕಂಡುಬರುತ್ತಿದೆ.
- ಪಾಲಕ/ಪೋಷಕರ ನಿರ್ಲಕ್ಷ್ಯ, ಗಂಡನಾದವನ ಬೇಜವಾಬ್ದಾರಿ ವರ್ತನೆ, ವಿಧವಾತನ, ಇತರೆ ಕೆಲಸಗಳಲ್ಲಿ ಕೌಶಲ್ಯತೆ ಹೊಂದದೆ ಇರುವುದು, ವಂಚಕರ ಜಾಲಕ್ಕೆ ಸಿಲುಕುವ ಮುಗ್ಧತೆ, ಅಪಹರಣ, ಕುಟುಂಬದ ಪೂರ್ಣ ಜವಾಬ್ದಾರಿ ಮಹಿಳೆಯ ಮೇಲೆ ಹೇರಲ್ಪಡುವುದರಿಂದಲೂ ಮಹಿಳೆಯರು ಅನಿವಾರ್ಯವಾಗಿ ವೇಶ್ಯಾವಾಟಿಕೆಗೆ ಇಳಿಯಲ್ಪಟ್ಟಿರುವುದು ಕಂಡುಬಂದಿದೆ.
- ಹುಲಿಗೆಮ್ಮ, ಎಲ್ಲಮ್ಮ, ಹಿರೇಸಿಂಧೋಗಿಯ ಮರುಳಸಿದ್ದೇಶ್ವರ ಮಠ, ಮೈಲಾರ, ಆಂಜನೇಯ ಮುಂತಾದ ದೇವರಿಗೆ ದೇವದಾಸಿಯರನ್ನಾಗಿಸುವ ಪದ್ಧತಿ ಹೆಚ್ಚಾಗಿ ಕಂಡುಬರುತ್ತದೆ. ಈ ದೇವದಾಸಿಯರು ಕ್ರಮೇಣ ವೇಶ್ಯೆಯರಾಗಿ ಪರಿವರ್ತಿತರಾಗಿರುವುದನ್ನು ಕಾಣುತ್ತೇವೆ. ಇಂತಹ ಧಾರ್ಮಿಕ ಮೌಢ್ಯತೆಯೂ ಮಹಿಳೆಯರು ವೇಶ್ಯಾವಾಟಿಕೆಗೆ ಇಳಿಯಲು ಕಾರಣವಾಗಿವೆಯೆಂಬುದನ್ನು ಅಧ್ಯಯನದ ಮೂಲಕ ಕಾಣಲಾಯಿತು.
- ವೇಶ್ಯಾವಾಟಿಕೆಯಲ್ಲಿ ತೊಡಗಿರುವವರು ಒಂದೇ ಧರ್ಮ, ಜಾತಿಯವರಾಗಿರದೆ ವಿಭಿನ್ನ ಧರ್ಮ ಜಾತಿಯವರೂ ಕಂಡುಬರುತ್ತಾರೆ. ಅವರಲ್ಲಿ ಕುರುಬ, ಕಮ್ಮಾರ, ಲಿಂಗಾಯತ, ಕಾಪು ಆದರೆ ತಳಸಮುದಾಯದ ಮಹಿಳೆಯರೇ ಹೆಚ್ಚಿನ ಸಂಖ್ಯೆಯಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ.

- ವೇಶ್ಯಾವಾಟಿಕೆಯನ್ನು ನಿಯಂತ್ರಿಸಲು ಸರ್ಕಾರ ಸರ್ಕಾರೇತರ ಸಂಸ್ಥೆಗಳು ಪ್ರಯತ್ನಿಸುತ್ತಿವೆಯೆಂಬುದು ಮೇಲ್ನೋಟಕ್ಕೆ ಕಂಡುಬರುತ್ತದೆ. ವೇಶ್ಯಾವಾಟಿಕೆಯ ನಿಯಂತ್ರಣಕ್ಕಾಗಿ ಕಾನೂನಾತ್ಮಕವಾದ ಚೌಕಟ್ಟುಗಳನ್ನು ರೂಪಿಸಲಾಗಿದೆಯೆಂಬುದೂ ಸತ್ಯ. ಆದರೆ ನಿಯಂತ್ರಣವನ್ನು ಮೀರಿ ವೇಶ್ಯಾವಾಟಿಕೆ ದಂಧೆಯ ಪ್ರಮಾಣ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇದೆ.

- ವೇಶ್ಯಾವಾಟಿಕೆಯಿಂದ ಸುಲಭವಾಗಿ ಹಣ ದೊರೆಯುತ್ತದೆಂಬ ಭ್ರಮೆಗೆ ಒಳಗಾಗಿ ವೃತ್ತಿಗೆ ಇಳಿಯುವವರೇ ಹೆಚ್ಚು. ಆದರೆ ಆ ಆದಾಯದ ಹಣವು ಮಧ್ಯವರ್ತಿಗಳಿಗೆ, ವೇಶ್ಯಾಗೃಹದ ಯಜಮಾನರಿಗೆ, ಪೋಲಿಸರಿಗೆ, ಸ್ಥಳೀಯ ಗೂಂಡಾಗಳಿಗೂ ಹಂಚಬೇಕಾದ ಅನಿವಾರ್ಯತೆ ಇವರಲ್ಲಿರುವುದು ಕಂಡುಬರುತ್ತದೆ.

- ವೇಶ್ಯಾವಾಟಿಕೆಯಿಂದ ದೊರೆಯುವ ಪರಿಣಾಮಗಳು ಮಾತ್ರ ಋಣಾತ್ಮಕವಾಗಿರುತ್ತವೆ. ವೇಶ್ಯೆಯರು, ಅವರ ಕುಟುಂಬ, ಮಕ್ಕಳನ್ನು ಸಮಾಜವು ನೋಡುವ ದೃಷ್ಟಿಕೋನವು ವಿಭಿನ್ನವಾಗಿರುತ್ತದೆ. ಪ್ರಾಯಶಃ ತಮ್ಮ ಮಕ್ಕಳ ಮೇಲೆ ಸಮಾಜದ ಕೆಟ್ಟ ಕಣ್ಣು ಬೀಳಬಾರದೆಂಬ ಕಾರಣಕ್ಕೆ ಬಹಳಷ್ಟು ವೃತ್ತಿನಿರತ ವೇಶ್ಯೆಯರು ಮಕ್ಕಳನ್ನು ಪಡೆಯಲು ಹಿಂಜರಿಯುತ್ತಾರೆ. ಅಕಸ್ಮಾತ್ ಗರ್ಭಿಣಿಯಾದರೂ ಭ್ರೂಣವನ್ನು ತೆಗೆಸಲು ಮುಂದಾಗುವ, ಮತ್ತು ಭ್ರೂಣವನ್ನು ತೆಗೆಸಿದ ವೃತ್ತಿನಿರತ ಮಹಿಳೆಯರೂ ಈ ಅಧ್ಯಯನದಲ್ಲಿ ಸಂದರ್ಭದಲ್ಲಿ ಕಂಡುಬಂದಿದ್ದಾರೆ.

- ಮಕ್ಕಳನ್ನು ಹೊಂದಿರುವ ವೇಶ್ಯೆಯರಲ್ಲಿ ಅನೇಕರು ಬಹುತೇಕ ತಮ್ಮ ಮಕ್ಕಳು ತಮ್ಮಂತಾಗಬಾರದು, ಎಂಬ ಕಾರಣದಿಂದ ಅವರಿಗೆ ಉತ್ತಮ ಶಿಕ್ಷಣ, ಸಮಾಜದಲ್ಲಿ ಗೌರವ ದೊರೆಯುವ ವೃತ್ತಿಯಲ್ಲಿ ಅವರು ತೊಡಗಬೇಕು, ಮದುವೆ ಮಾಡಿಕೊಂಡು ಗೌರವಯುತವಾಗಿ ಸಮಾಜದಲ್ಲಿ ಬದುಕಬೇಕು ಎಂಬ ಉದ್ದೇಶವನ್ನು ಹೊಂದಿದ್ದಾರೆ.

- ಬಳ್ಳಾರಿ ಕೊಪ್ಪಳ ಜಿಲ್ಲೆಗಳಲ್ಲಿ ವೇಶ್ಯಾವಾಟಿಕೆಯಲ್ಲಿ ತೊಡಗಿರುವವರು ಕೇವಲ ಈ ಜಿಲ್ಲೆಗೆ ಸೀಮಿತವಾಗಿಲ್ಲ. ಅವರು ಸಾಂಧರ್ಭಿಕವಾಗಿ ವೃತ್ತಿಯನ್ನಾಧರಿಸಿ ಬೇರೆ ಬೇರೆ ಕಡೆ ವಲಸೆ ಹೋಗುವರು. ಉದಾಹರಣೆಗೆ ಬೆಂಗಳೂರು, ಮೈಸೂರು, ಗೋವಾ, ಆಂಧ್ರಪ್ರದೇಶ, ತೆಲಂಗಾಣ ಇತ್ಯಾದಿ ಕಡೆ ವಲಸೆ ಹೋಗುವರು. ಅದೇ ರೀತಿಯಾಗಿ ವೇಶ್ಯಾವೃತ್ತಿಯಲ್ಲಿ ತೊಡಗಿರುವ ಮಹಿಳೆಯರು ಬೆಂಗಳೂರು, ಆಂಧ್ರಪ್ರದೇಶ, ತೆಲಂಗಾಣ, ಗೋವಾ ಮುಂತಾದ ರಾಜ್ಯಗಳ ಮಹಿಳೆಯರು ಹಂಪೆಯಂತಹ ಪ್ರವಾಸಿ ತಾಣಗಳಲ್ಲಿ ವಿದೇಶಿ ವೇಶ್ಯೆಯರೂ ವೃತ್ತಿನಿರತರಾಗಿದ್ದಾರೆಂದು ಹೇಳಿದ್ದಾರೆ. ಆದರೆ ಅಧ್ಯಯನ ಸಂದರ್ಭದಲ್ಲಿ ವಿದೇಶಿ ಲೈಂಗಿಕ ಕಾರ್ಯಕರ್ತೆಯರು ನನಗೆ ದರೆಯಲಿಲ್ಲ.

- ಹಂಪಿ ಪರಿಸರದಲ್ಲಿ ವಿದೇಶಿಯರನ್ನೇ ಗುರಿಯಾಗಿಸಿಕೊಂಡು ವೇಶ್ಯಾವಾಟಿಕೆ ಮಾಡುವ ಅಪ್ರಾಪ್ತ ವಯಸ್ಸಿನ ಹುಡುಗಿಯರು ವೇಶ್ಯಾವಾಟಿಕೆಯಲ್ಲಿ ತೊಡಗಿರುವುದು ಕಂಡುಬಂದಿದೆ.

- ಬಹತೇಕ ವೇಶ್ಯಾವಾಟಿಕೆಯಲ್ಲಿ ತೊಡಗಿರುವವರು ಅನಕ್ಷರರು ಹಾಗೂ ಅರ್ಧಕ್ಕೆ ಶಾಲೆಗಳನ್ನು ತೊರೆದವರೇ ಹೆಚ್ಚು ಎಂಬುದು ತಿಳಿದುಬರುತ್ತದೆ.

- ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರು ಕನ್ನಡದೊಂದಿಗೆ ತೆಲುಗು, ಹಿಂದಿ, ತಮಿಳು, ಮರಾಠಿ ಭಾಷೆಗಳಲ್ಲದೆ ಇಂಗ್ಲಿಷ್ ಭಾಷೆ ಮಾತನಾಡುವವರೂ ಕಂಡುಬಂದಿದ್ದಾರೆ. ನೂರಕ್ಕೆ ೮೫ರಷ್ಟು ವೇಶ್ಯೆಯರು ಒಂದಕ್ಕಿಂತ ಹೆಚ್ಚು ಭಾಷೆಯಲ್ಲಿ ವ್ಯವಹರಿಸಬಲ್ಲವರಾಗಿದ್ದಾರೆ.
- ಶೇಕಡ ೬೦ರಷ್ಟು ಮಹಿಳೆಯರು ವೇಶ್ಯಾವಾಟಿಕೆಯನ್ನು ಪೂರ್ಣಾವಧಿ ವೃತ್ತಿಯಾಗಿ, ಸ್ವೀಕರಿಸಿರುವರು. ಇನ್ನುಳಿದ ಶೇಕಡ ೪೦ರಷ್ಟು ಮಹಿಳೆಯರು ಅರೆಕಾಲಿಕ ವೃತ್ತಿಯಾಗಿಸಿಕೊಂಡಿರುವುದು ಅಧ್ಯಯನದ ಮೂಲಕ ತಿಳಿದು ಬಂದಿದೆ.
- ಬಹುಪಾಲು ಲೈಂಗಿಕ ವೃತ್ತಿನಿರತರು ಸಾಲದ ಜಾಲದೊಳಗೆ ಸಿಲುಕಿ ಅದನ್ನು ತೀರಿಸಲು ಒದ್ದಾಡುತ್ತಿರುವವರೇ ಹೆಚ್ಚಾಗಿ ಕಂಡುಬಂದಿದ್ದಾರೆ.
- ಬಹುತೇಕ ಲೈಂಗಿಕ ವೃತ್ತಿನಿರತರು ಆರೋಗ್ಯದಿಂದ ಬಳಲುತ್ತಿರುವುದು ಕಂಡುಬರುತ್ತದೆ. ಸುರಕ್ಷಿತ ಲೈಂಗಿಕ ಕ್ರಿಯೆಯಲ್ಲಿ ತೊಡಗುತ್ತೇವೆ ಹೇಳುತ್ತಾರೆ ಆದರೆ ತಿಳಿದೋ ತಿಳಿಯದೆಯೋ ಅಸುರಕ್ಷಿತ ಲೈಂಗಿಕ ಕ್ರಿಯೆಯಲ್ಲಿ ತೊಡಗಿ ಎಚ್.ಐ.ವಿ/ಏಡ್ಸ್‌ನಂತಹ ಮಾರಿಗಳಿಗೆ, ಇತರೆ ಲೈಂಗಿಕ ರೋಗಗಳಿಗೆ ಬಲಿಯಾಗುತ್ತಿದ್ದಾರೆ.
- ಬಹುತೇಕ ವೇಶ್ಯೆಯರು ಪೋಲಿಸ್ ದೌರ್ಜನ್ಯ ಎದುರಿಸಿದ್ದಾರೆ ಮತ್ತು ನಿರಂತರ ಕಿರುಕುಳಕ್ಕೆ ಒಳಗಾಗುತ್ತಿರುವುದು ಕಂಡುಬರುತ್ತದೆ.
- ಸರ್ಕಾರೇತರ ಸಂಸ್ಥೆಗಳು ಲೈಂಗಿಕ ಕಾರ್ಯಕರ್ತರ ಪುನರ್ವಸತಿ, ಅಭ್ಯುದಯ ಕಾರ್ಯಕ್ರಮಗಳನ್ನು ಮಾಡುತ್ತಿದ್ದೇವೆ. ಎಂದು ಹೇಳಿಕೊಳ್ಳುತ್ತಾರೆ. ಅದರ ಪ್ರತಿಫಲ ಮಾತ್ರ ಅವರಿಗೆ ತಲುಪಿಲ್ಲ.

**ಸಲಹೆ ಸೂಚನೆಗಳು**

- ಲೈಂಗಿಕ ವೃತ್ತಿಯಲ್ಲಿ ತೊಡಗಿದವರು ಕಾನೂನಾತ್ಮಕ ತೊಡಕುಗಳನ್ನು ಹೆಚ್ಚು ಅನುಭವಿಸುತ್ತಿದ್ದಾರೆ. ಪೋಲಿಸರಿಗೆ ಮಾಮೂಲು ಕೊಡದೇ ಇದ್ದಾಗ, ಅಥವಾ ಕೇಸ್ ದೊರೆಯದಿದ್ದ ಲೈಂಗಿಕ ಕಾರ್ಯಕರ್ತರನ್ನು ರಕ್ಷಣೆಯ ಹೆಸರಿನಲ್ಲಿ ಬಂಧಿಸುವರು. ಇದರಿಂದ ಸಮಾಜದಲ್ಲಿ ಸಾರ್ವತ್ರಿಕವಾಗಿ ಬಹಿರಂಗಗೊಂಡು ಅವಮಾನಕ್ಕೆ ಒಳಗಾಗುತ್ತಿದ್ದಾರೆ. ವೃತ್ತಿಯನ್ನು ಏಶಕಾನೂನುಬದ್ಧವಾಗಿಸಿದರೆ ಪೋಲಿಸ್ ದೌರ್ಜನ್ಯ, ಸುಳ್ಳು ಕೇಸುಗಳಿಂದ ತಾವು ಪಾರಾಗಬಹುದು ಅನೇಕರು ಅಭಿಪ್ರಾಯ ಪಟ್ಟಿದ್ದಾರೆ. ಈ ನಿಟ್ಟಿನಲ್ಲಿ ಸರ್ಕಾರ ದಿಟ್ಟ ಹೆಜ್ಜೆಯನ್ನಿರಿಸಿ ವೇಶ್ಯಾವಾಟಿಕೆಯ ಕಾನೂನುಬದ್ಧಗೊಳಿಸಿದರೆ ಆ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರಿಗೆ ಜೀವನದಲ್ಲಿ ಸ್ವಲ್ಪ ನೆಮ್ಮದಿಯಾದರೂ ಸಿಗಬಹುದು.
- ಲೈಂಗಿಕ ಕಾರ್ಯಕರ್ತರ ಮಕ್ಕಳು ಲೈಂಗಿಕ ವೃತ್ತಿಗೆ ಇಳಿಯುವ ಸಾಧ್ಯತೆಗಳು ಹೆಚ್ಚು. ಹೀಗಾಗಿ ಆ ಮಕ್ಕಳು ಚಿಕ್ಕವರಿದ್ದಾಗಲೇ ಅವರನ್ನು ಕುಟುಂಬದಿಂದ ದೂರವಿರಿಸಿ ಮಕ್ಕಳಿಗೆ ಶಿಕ್ಷಣ, ಉತ್ತಮ ಆರೋಗ್ಯ ದೊರೆಯುವಂತೆ ಸರ್ಕಾರ ನೋಡಿಕೊಳ್ಳಬೇಕಾಗಿದೆ.
- ಬಲವಂತದಿಂದ ಹುಡುಗಿಯರನ್ನು ಅಪಹರಣ, ಮಾಡುವ ಮತ್ತು ಹುಡುಗಿಯರನ್ನು ಖರೀದಿ ಮಾಡಿ, ಒತ್ತಾಯಪೂರ್ವಕವಾಗಿ ವೇಶ್ಯಾವಾಟಿಗೆ ಇಳಿಸುವ ವೇಶ್ಯಾಗೃಹಗಳು, ತಲೆಹಿಡುಕರ

ಮೇಲೆ ಮಹಿಳಾ ರಕ್ಷಣಾ ಕಾಯ್ದೆ ೧೯೫೬ರ ಪ್ರಕಾರ ಕ್ರಮ ಕೈಗೊಂಡು ಕಾನೂನು ಕ್ರಮ ಜರುಗಿಸಿದರೆ ಅಪ್ರಾಪ್ತ, ಮುಗ್ಧ ಹುಡುಗಿಯರನ್ನು ಈ ವೃತ್ತಿಯಿಂದ ರಕ್ಷಿಸುಬಹುದು ಮತ್ತು ವೇಶ್ಯಾವಾಟಿಕೆಯನ್ನು ನಿಯಂತ್ರಿಸಬಹುಸುದು.

- ಹೊಟ್ಟೆಪಾಡಿಗಾಗಿ ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಯುವತಿಯರನ್ನು ಅಡ್ಡೆ, ಲಾಡ್ಜ್ ಇತ್ಯಾದಿ ಪ್ರದೇಶಗಳಿಗೆ ಮುತ್ತಿಗೆ ಹಾಕಿ ಪೋಲಿಸರು ಬಂದಿಸಿ ಅವರಿಗೆ ಚಿತ್ರ ಹಿಂಸೆ ನೀಡುತ್ತಿರುವುದು ತಿಳಿದುಬರುತ್ತದೆ. ಈ ಪರಂಪರೆ ಕಡಿಮೆಯಾಗಬೇಕಾಗಿದೆ.
- ಲೈಂಗಿಕ ಕಾರ್ಯಕರ್ತರಿಗೆ ಜೀವನೋಪಾಯಕ್ಕೆ ಬೇರೊಂದು ವೃತ್ತಿಯಲ್ಲಿ ತರಬೇತಿ ನೀಡಿ ಅವರು ಇತರರಂತೆ ಸಹಜ ಜೀವನ ನಡೆಸಲು ಸಹಕರಿಸಬೇಕು.
- ಲೈಂಗಿಕ ಕಾರ್ಯಕರ್ತರ ಪುನರ್ವಸತಿ ಕೇಂದ್ರಗಳನ್ನು ನವೀಕರಿಸಬೇಕಾದ ಅಗತ್ಯವಿದೆ. ಪುನರ್ವಸತಿ ಪಡೆದ ಮಹಿಳೆ ಸಮಾಜದಲ್ಲಿ ಗೌರವದಿಂದ ಬದುಕಲು ಕುಶಲಕರ್ಮಿ ತರಬೇತಿ ನೀಡುವ ಮೂಲಕ ಅವರೂ ಗೌರವಯುತ ಬದುಕು ಕಟ್ಟಿಕೊಳ್ಳಲು ಸಾಧ್ಯವಾಗಬಹುದು.
- ವೇಶ್ಯೆಯರ ಹೆಣ್ಣುಮಕ್ಕಳು ವೇಶ್ಯೆಯರಾಗುವುದನ್ನು ತಪ್ಪಿಸಬೇಕಾಗಿದೆ. ಅವರ ಬಡತನಕ್ಕೆ ಇರಬಹುದಾದ ಅಡ್ಡಿಗಳನ್ನು ಅರಿತು ಅವುಗಳನ್ನು ಪರಿಹರಿಸಿ ಅವರ ಮಕ್ಕಳಿಗೂ ಸಮಾಜದಲ್ಲಿ ಗೌರವ ಸ್ಥಾನ ಕಲ್ಪಿಸಬೇಕಾದ ಅಗತ್ಯವಿದೆ.
- ಅನೈತಿಕ ಚಟುವಟಿಕೆಗಳಿಂದ ಮಹಿಳೆಯರನ್ನು ಪಾರುಮಾಡಲು ಮಹಿಳಾ ಕಾಯ್ದೆಗಳು ಮತ್ತು ಪುನರ್ವಸತಿ ಯೋಜನೆಗಳು ಸರಿಯಾದ ಕ್ರಮದಲ್ಲಿ ಜಾರಿಗೊಳಿಸಲು ಪ್ರಾಮಾಣಿಕವಾದ ವಿಶೇಷ ಅಧಿಕಾರಿ ಹಾಗೂ ಸಿಬ್ಬಂದಿಯನ್ನು ನೇಮಿಸಬೇಕು
- ಇಂದು ಏಡ್ಸ್‌ನಂತಹ ಮಾರಕ ರೋಗಗಳು ಶೀಘ್ರವಾಗಿ ವ್ಯಾಪಿಸುತ್ತಿವೆ. ಹೀಗಾಗಿ ಪ್ರತಿಯೊಬ್ಬ ಲೈಂಗಿಕ ಕಾರ್ಯಕರ್ತೆಯರನ್ನೂ ಕಾಲ ಕಾಲಕ್ಕೆ ವೈದ್ಯಕೀಯ ತಪಾಸಣೆಗೆ ಒಳಪಡಿಸಿ ರೋಗ ಬಾರದಂತೆ ಹಾಗೂ ಹರಡದಂತೆ ಏನು ಕ್ರಮ ಕೈಗೊಳ್ಳಬೇಕು ಎಂಬುದನ್ನು ತಿಳಿಸಿ ಮಾರಣಾಂತಿಕ ರೋಗಗಳಿಂದ ಲೈಂಗಿಕ ಕಾರ್ಯಕರ್ತೆಯರನ್ನು ರಕ್ಷಣೆ ಮಾಡಲಾಗಿದೆ.
- ವೇಶ್ಯಾವಾಟಿಕೆಯಲ್ಲಿ ತೊಡಗಿರುವ ಮಹಿಳೆಯರು ಯಾವ ಕಾರಣಕ್ಕಾಗಿ ಆ ವ್ಯವಸ್ಥೆಯಲ್ಲಿ ಸಿಲುಕಿರುವರು ಎಂಬುದನ್ನು ಅರಿಯಲು ಅಧ್ಯಯನಗಳನ್ನು ಮಾಡುವ ಅವಶ್ಯಕತೆ ಇದೆ.
- ವೇಶ್ಯಾವಾಟಿಕೆಯಂತಹ ಜಾಲದೊಳಗೆ ಸಿಲುಕಿರುವ ಮಹಿಳೆಯರನ್ನು ಆ ವ್ಯವಸ್ಥೆಯಿಂದ ಹೊರತರಲು ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಬೇಕು. ಅವರ ಬದುಕಿಗೆ ಅವಶ್ಯವಾದ ಉದ್ಯೋಗ, ಶಿಕ್ಷಣ, ವಸತಿ ಇತ್ಯಾದಿಗಳನ್ನು ಸಮರ್ಪಕವಾಗಿ ಕಲ್ಪಿಸುವಂತಾಗಬೇಕು.
- ಲೈಂಗಿಕ ಕಾರ್ಯಕರ್ತರಲ್ಲಿ ಆರೋಗ್ಯದ ಕುರಿತು ತಿಳುವಳಿಕೆ ಮೂಡಲು ಅವರಲ್ಲಿ ಸಾಕ್ಷರತೆ ಪ್ರಮಾಣ ಹೆಚ್ಚುವಂತೆ ತರಬೇತಿಗಳನ್ನು ನೀಡಬೇಕು. ಹಾಗೆಯೇ ಅವರು ಆ ವ್ಯವಸ್ಥೆಯಿಂದ

ದೂರವಿರಲು ಏನು ಮಾಡಿದರೆ ಸೂಕ್ತ ಎಂಬುದರ ಕುರಿತು ಸಂಬಂಧಿಸಿದ ಅಧಿಕಾರಿಗಳು, ಸರ್ಕಾರೇತರ ಸಂಸ್ಥೆಗಳು ಪ್ರಾಮಾಣಿಕವಾಗಿ ತಿಳುವಳಿಕೆಯನ್ನು ನೀಡಬೇಕು.

- ಲೈಂಗಿಕ ಕಾರ್ಯಕರ್ತರು ಲೈಂಗಿಕ ವೃತ್ತಿಯಿಂದ ಹೊರಬರಲು ಅವರಿಗೆ ಪರ್ಯಾಯ ಮಾರ್ಗಗಳನ್ನು ಸೂಚಿಸುವ ಮೂಲಕ ತಮಗೂ ಒಂದು ಹೊಸ ಬದುಕಿದೆ ಎಂಬ ಆತ್ಮವಿಶ್ವಾಸವನ್ನು ತುಂಬಬೇಕಾದ ಅಗತ್ಯವಿದೆ. ಹಾಗೆಯೇ ಅವರ ಬದುಕಿಗೆ ಅಗತ್ಯವಾದ ರಕ್ಷಣೆಯನ್ನು ಒದಗಿಸಬೇಕಾದ ಅವಶ್ಯಕತೆ ಇದೆ.

- ವೇಶ್ಯೆಯರನ್ನು ಸಾಮಾಜಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದಂತೆ ಮಾನವಶಾಸ್ತ್ರೀಯ, ಅರ್ಥಶಾಸ್ತ್ರ, ವೈದ್ಯಶಾಸ್ತ್ರ ಇತ್ಯಾದಿ ಅಧ್ಯಯನ ಶಿಸ್ತುಗಳಲ್ಲಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ.

ಈ ಸಮಾಜದಲ್ಲಿ ವೇಶ್ಯಾವಾಟಿಕೆಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡುತ್ತೇವೆ ಎಂದು ಹೇಳುವುದು ಸ್ವಲ್ಪ ಕಷ್ಟದ ಕೆಲಸ. ಆದರೆ ಸರಿಯಾದ ಕ್ರಮಗಳನ್ನು ಕೈಗೊಂಡರೆ ವೇಶ್ಯಾವಾಟಿಕೆಯ ಪ್ರಮಾಣ ಕಡಿಮೆ ಮಾಡಲು ಸಾಧ್ಯವಿದೆ. ವೇಶ್ಯಾವಾಟಿಕೆ ಮಾಡುವ ಮಹಿಳೆಯರು ಇಷ್ಟಪಟ್ಟೇನೂ ಆ ವೃತ್ತಿಯಲ್ಲಿ ತೊಡಗಿಲ್ಲ ಎಂಬುದನ್ನು ಮೊದಲು ಮನಗಾಣಬೇಕು. ಅವರಿಗೆ ಸಮಾಜದಲ್ಲಿ ಗೌರವದಿಂದ ಬಾಳಲು ಅವಶ್ಯವಾದ ಪರ್ಯಾಯ ವ್ಯವಸ್ಥೆ ಹಾಗೂ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿದರೆ ಯಾವೊಬ್ಬ ಮಹಿಳೆಯೂ ಕಳಂಕಿತವಾದ ವೇಶ್ಯಾವೃತ್ತಿಯಲ್ಲಿ ಮುಂದುವರೆಯಲಾರರು.

ಒಟ್ಟಾರೆಯಾಗಿ ಹೇಳುವುದಾದರೆ ವೇಶ್ಯಾವಾಟಿಕೆಯ ಕುರಿತು ಈ ಅಧ್ಯಯನವು ಪೂರ್ಣವಾಗಿ ಒಳಹೊಕ್ಕು ನೋಡಿದೆಯೆಂದೇನೂ ತಿಳಿಯಬಾರದು. ವೇಶ್ಯಾವಾಟಿಕೆಯ ಜಾಲ ಸಮುದ್ರದಷ್ಟು ವಿಸ್ತಾರವಾದುದು ಮತ್ತು ಅಪಾಯಕಾರಿಯಾದುದು.

# ಪರಾಮಾರ್ಶನ ಗ್ರಂಥಗಳು


೧ ಅಬ್ದುಲ್ ಅಜೀಜ್ (ಸಂ), ೨೦೦೫, ಮಾನವಾಭಿವೃದ್ಧಿ ವರದಿ, ಕರ್ನಾಟಕ ಸರ್ಕಾರ, ಬೆಂಗಳೂರು,

೨ ಅನುಸೂಯ ಎಂ ಕದಂ, ೨೦೧೧, ಮಹಿಳಾ ಶೋಷಣೆಯ ನೆಲೆಗಳು, ಸಖಿ ಪ್ರಕಾಶನ, ಹೊಸಪೇಟೆ,

೩ ಅರವಿಂದ ಮಾಲಗತ್ತಿ, ೨೦೦೬, ಕನ್ನಡ ವಿಷಯ ವಿಶ್ವಕೋಶ 'ಜಾನಪದ', ಮೈಸೂರು ವಿಶ್ವವಿದ್ಯಾಲಯ, ಮೈಸೂರು

೪ ಅಲ್ಲಗಿರಿರಾಜ್ (ಸಂ), ೨೦೧೪, ಮುತ್ತು ಒಡೆವ ಬನ್ನಿ, ದೇವದಾಸಿ ಸಮೂಹ ಸಂಪನ್ಮೂಲ ಕೇಂದ್ರ, ಕನಕಗಿರಿ

೫ ಇಂದಿರಾ ಆರ್, ೨೦೦೨, ಮಹಿಳೆ- ಸಮಾಜ, ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬ ಇರ್‌ಫಾನ್ ಹಬೀಬ್, ೨೦೧೩, ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ, ನವಕರ್ನಾಟಕ ಪ್ರಕಾಶನ, ಬೆಂಗಳೂರು

೭ ಉಮೇಶ್ ಬಸಪ್ಪ ಕಾತರಕಿ, ೨೦೦೬, ಬಿಸರಳ್ಳಿಯ ದೇವದಾಸಿ ಪದ್ಧತಿ: ಒಂದು ಅಧ್ಯಯನ, (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ,

೮ ಉಷಾ ಎಂ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ ಕ.ವಿ.ವಿ. ಹಂಪಿ

೯ ಉಷಾ ಎಂ, ೨೦೦೪, ಸುರಭಿ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು

೧೦ ಕಕ್ಕಿಲ್ಲಾಯ, ೧೯೯೮, ಏಂಗೆಲ್ಸ್ ವಿಚಾರಗಳು, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು

೧೧ ಕಮಲಾ ಹಂಪನಾ, ೨೦೦೩, ಬೊಗಸೆ, ಸಿವಿಜಿ ಪಬ್ಲಿಕೇಶನ್ಸ್, ಬೆಂಗಳೂರು

೧೨ ಕಲಬುರ್ಗಿ ಎಂ ಎಂ (ಸಂ), ೨೦೦೧, ಕುಮಾರರಾಮ ಚರಿತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩ ಕಲವೀರ ಮನ್ವಾಚಾರ, ೨೦೦೮, ಮಾತೃದೇವತಾ ಆರಾಧನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪ ಕುಸುಮಾ ಶಾನಭಾಗ, ೨೦೦೭, ಕಾಯದ ಕಾರ್ಪಣ್ಯ, , ಹೇಮಾಂಶು ಪ್ರಕಾಶನ,ಮಂಗಳೂರು

೧೫ ಕೂಡಲಿ ಸಚ್ಚಿದಾನಂದ ಶಂಕರ ಭಾರತಿ, ೧೯೯೪, ಕೌಟಲೀಯ ಅರ್ಥಶಾಸ್ತ್ರ; ಕೂಡಲಿ ಮಠ ಶೃಂಗೇರಿ

೧೬ ಕೃಷ್ಣರಾಯರು ಅ ನ, ೨೦೦೪, ಸಾಹಿತ್ಯ ಮತ್ತು ಕಾಮ ಪ್ರಚೋದನೆ, ಸಾಗರ ಪ್ರಕಾಶನ, ಬೆಂಗಳೂರು

೧೭ ಕೊಟ್ರೇಶ್, ೨೦೧೪, ವೇಶ್ಯಾವಾಟಿಕೆಯ ವಿವಿಧ ಮುಖಗಳು, ಚಿರಂತನ ಪಬ್ಲಿಕೇಶನ್ಸ್, ಬೆಂಗಳೂರು

೧೮ ಕೊಟ್ಲಮ್ಮ, ೨೦೦೮, ಬಳ್ಳಾರಿ ಜಿಲ್ಲೆಯ ಬೇಡ ಬುಡಕಟ್ಟಿನ ದೇವದಾಸಿಯರು' (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ

೧೯ ಕೋಸಂಬಿ ಡಿ ಡಿ, ೧೯೭೭, ಭಾರತದ ಪ್ರಾಚೀನ ಚರಿತ್ರೆ, (ಅನು: ಸಿದ್ಧಾರ್ಥ) ನವಕರ್ನಾಟಕ ಬೆಂಗಳೂರು

೨೦ ಗೀತಾ ಕೃಷ್ಣಮೂರ್ತಿ, ೨೦೦೯, ಮಹಿಳಾ ಹಕ್ಕುಗಳು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೨೧ ಚಂದ್ರಮೊಹನ್, ೧೯೭೩, ಬೆತ್ತಲೆ ಸೇವೆ ಮತ್ತು ಪುರುಷ ದೌರ್ಜನ್ಯ, ಸುಚಿತ್ರ ಪ್ರಕಾಶನ, ಮೈಸೂರು

೨೨ ಚಂದ್ರಶೇಖರ್ ಟಿ ಆರ್, ೧೯೯೮, ಬಡತನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೩ ಚಂದ್ರಶೇಖರ್ ಟಿ ಆರ್ , ೨೦೦೧, ಮಹಿಳೆ: ಆರ್ಥಿಕತೆ ಮತ್ತು ಅಭಿವೃದ್ಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪ ಚಿನ್ನಸ್ವಾಮಿ ಸೋಸಲೆ ಎನ್, ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೫ ಚಿನ್ನಸ್ವಾಮಿ ಸೋಸಲೆ ಎನ್ , ೨೦೧೩, ದಲಿತರ ಮೇಲಿನ ದೌರ್ಜನ್ಯ ಮತ್ತು ಸಾಮಾಜಿಕ ನ್ಯಾಯ ಪ್ರಶ್ನೆಗಳು, ಯಾಜಿ ಪ್ರಕಾಶನ, ಹೊಸಪೇಟೆ

೨೬ ಚಿನ್ಮಯಿ ಆರ್, ೧೯೯೮, ಏಂಗೆಲ್ಸ್ ವಿಚಾರಗಳು, ರಾದುಗಾ ಪ್ರಕಾಶನ, ಮಾಸ್ಕೊ

೨೭ ಚನ್ನಕ್ಕ ಎಲಿಗಾರ, ೧೯೯೦, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೮ ಚನ್ನಕ್ಕ ಪಾವಟೆ, ೨೦೦೮, ಕರ್ನಾಟಕ ಶಾಸನೋಕ್ತ ಮಹಿಳೆ– ಸಮೀಕ್ಷೆ, ಸಂಸ್ಕೃತಿ' ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೯ ಚಿದಾನಂದಮೂರ್ತಿ ಎಂ, ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೩೦ ಚೆನ್ನಣ್ಣ ವಾಲೀಕಾರ, ೧೯೯೯, 'ಮಹಾರಾಷ್ಟ್ರ ರಾಜ್ಯದ ತುಂಬ ಹರಿಯುತ್ತಿರುವ ವೇಶ್ಯಾ ಸೋದರಿಯರ ಕಣ್ಣೀರು ಕಡಲಿನ ಕೋಗಿಲೆ ಗಾನ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗ,

೩೧ ಚೆನ್ನಣ್ಣ ವಾಲೀಕಾರ, ೨೦೦೦, ಕರ್ನಾಟಕ ದೇವಾದಾಸಿಯರ ಸಮಾಜೋ ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ, ಗುಲಬರ್ಗಾ,

೩೨ ಜೋಗನ್ ಶಂಕರ್, ೧೯೯೩, ದೇವದಾಸಿ ಸಂಪ್ರದಾಯ, ದೇವದಾಸಿ ವಿಮೋಚನಾ ಸಂಸ್ಥೆ, ಅಥಣಿ,

೩೩ ತಿಪ್ಪೇಸ್ವಾಮಿ ಎಚ್, ೨೦೧೬, ಕನ್ನಡ ಶಾಸನಗಳಲ್ಲಿ ವೇಶ್ಯೆಯರು, ಗೌತಮ ಬುಕ್‌ಹೌಸ್, ಕಮಲಾಪುರ

೩೪ ದಿವಾಕರ್ ಆರ್ ಬಿ,೨೦೧೪, ಬಳ್ಳಾರಿ ಜಿಲ್ಲೆಯ ಜನಪದ ಕಾವ್ಯ ಪ್ರಕಾರಗಳು, ಗಂಗೋತ್ರಿ ಪ್ರಕಾಶನ, ರಾಮಸಾಗರ

೩೫ ದುರುಗಪ್ಪ ಎಂ ಕೆ, ೨೦೧೦, ವಿಜಯನಗರೋತ್ತರ ಕಾಲೀನ ಬೇಡ ಜನಾಂಗ: ಚಾರಿತ್ರಿಕ ಅಧ್ಯಯನ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

೩೬ ದೇವರಕೊಂಡಾರೆಡ್ಡಿ (ಸಂ)೨೦೦೪, ಬಾದಾಮಿ ಶಾಸನಗಳು (ಸಂಪು-೯), ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭ ದೇವಿಪ್ರಸಾದ ಚಟ್ಟೋಪಧ್ಯಾಯ, ೧೯೯೭, ಮಾತೆಯರು ಮಾನ್ಯರಾಗಿದ್ದಾಗ, (ಅನು: ಕುಮಾರಪ್ಪ ಜಿ), ನವಕರ್ನಾಟಕ ಪಬ್ಲಿಕೇಶನ್ಸ್

೩೮ ನಳಿನಿ ಜಮೀಲಾ, ೨೦೦೯, ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ, ಸೃಷ್ಟಿ ಪ್ರಕಾಶನ ಬೆಂಗಳೂರು

೩೯ ನಾರಾಯಣ ಎಂ, ೨೦೦೩, ಸಾಮಾಜಿಕ ಸಮಸ್ಯೆಗಳು, ಚೇತನ್ ಬುಕ್ ಹೌಸ್, ಮೈಸುರು

೪೦ ನಾಗಯ್ಯ ಜೆ ಎಂ, ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ

೪೧ ನೇಗಿನಹಾಳ ಎಂ ಬಿ, ೧೯೯೨, ಮೈಲಾರಲಿಂಗ-ಖಂಡೋಬಾ, ಕರ್ನಾಟಕ ಕನ್ನಡ ವಿಶ್ವವಿದ್ಯಾಲಯ, ಧಾರವಾಡ

೪೨ ನೇತ್ರಾವತಿ ಕೆ ವಿ, ೨೦೧೨, ದಲಿತ ಮಹಿಳಾ ಸಂಕಥನ, ಸಖಿ ಪ್ರಕಾಶನ, ಹೊಸಪೇಟೆ

೪೩ ಪುರುಷೋತ್ತಮ ಬಿಳಿಮಲೆ, ೧೯೯೯, ಹುಲಿಗೆಮ್ಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೪ ಪೂರ್ವಾಚಾರ್ ಎಂ (ಸಂ), ೨೦೧೪, ಸ್ತ್ರೀ ಸಂವೇದನೆ, ಅನ್ನಪೂರ್ಣ ಪಬ್ಲಿಷಿಂಗ್ ಹೌಸ್, ತುಮಕೂರು

೪೫ ಪ್ರಕಾಶ್ ಜಿ, ೨೦೧೩, ಲೈಂಗಿಕ ಕಾರ್ಯಕರ್ತೆಯರು ಮತ್ತು ಬಡತನ: ದೊಡ್ಮನೆ ಪ್ರಕಾಶನ, ಮೈಸೂರು

೪೬ ಪೋತೆ ಎಚ್ ಟಿ, ೨೦೧೨, ದಲಿತ ಲೋಕ, ಕುಟುಂಬ ಪ್ರಕಾಶನ, ಗುಲಬರ್ಗಾ

೪೭ ಭಾರತಿ ಜೀವಿ, ೨೦೧೧, ದೇವದಾಸಿ, ವಚನ್ ಗ್ರಾಫಿಕ್ಸ್, ಧಾರವಾಡ

೪೮ ಬೈರಪ್ಪ ಕೆ, ೨೦೦೬, ಸಮಗ್ರ ಸಮಾಜಿಕ ಸಮಸ್ಯೆಗಳು, ಸಪ್ನ ಬುಕ್‌ಹೌಸ್, ಬೆಂಗಳೂರು

೪೯ ಮರುಳಸಿದ್ದಯ್ಯ ಎಚ್. ಎಂ (ಸಂ), ೧೯೯೮, ಭಾರತ ಸಮಾಜ ಕಾರ್ಯ ವಿಶ್ವಕೋಶ (ಸಂಪು–೧), ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೦ ಮೀರಾಸಾಬಿಹಳ್ಳಿ ಶಿವಣ್ಣ (ಸಂ), ೨೦೦೩, ಮ್ಯಾಸ ಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ ,ಬೆಂಗಳೂರು ೫೧ ಮೂಡ್ನಾಕೂಡು ಚಿನ್ನಸ್ವಾಮಿ, ೨೦೦೩, ಒಂದು ಕೊಡ ಹಾಲಿನ ಸಮರ: ಸಾಮಾಜಿಕ ಚಳುವಳಿಗಳು, ಬುದ್ಧ, ಬಸವ, ಬಾಬಾ ಸಾಹೇಬ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,

೫೨ ಯರ್ರಿಸ್ವಾಮಿ ಈ, ೨೦೧೦, ಮಹಿಳೆ ಜಾತಿ ಶ್ರೇಣೀಕರಣ: ಅಂಬೇಡ್ಕರ್ ದೃಷ್ಟಿಕೋನ, ಗೀತಾಂಜಲಿ ಪುಸ್ತಕ ಪ್ರಕಾಶನ, ಬೆಂಗಳೂರು

೫೩ ರಾಮಚಂದ್ರನ್ ಬಿ, ೨೦೦೭, ಸ್ತ್ರೀ ಮತ್ತು ರಾಜಕಾರಣ, ಪ್ರಕೃತಿ ಪಬ್ಲಕೇಶನ್ಸ್, ಬೆಂಗಳೂರು

೫೪ ಲೀಲಾ ಸಂಪಿಗೆ, ೨೦೦೪, ಬುಡಕಟ್ಟು ಮತ್ತು ಜನಪದ ಸಮುದಾಯಗಳಲ್ಲಿ ವೇಶ್ಯಾವಾಟಿಕೆಗಳು: ಪರಂಪರೆ ಮತ್ತು ಸಮಸ್ಯೆಗಳು, (ಅಪ್ರಕಟಿತ ಪಿಎಚ್ ಡಿ ಪ್ರಬಂಧ, ಕವಿವಿ, ಹಂಪಿ

೫೫ ಲೆನಿನ್ ವಿ ಐ ,(ಅನು: ರಾಮಕೃಷ್ಣ), ೧೯೯೪, ಲೆನಿನ್‌ರ ಕೆಲವು ಲೇಖನಗಳು ನವಕರ್ನಾಟಕ, ಬೆಂಗಳೂರು,

೫೬ ವಸಂತಕುಮಾರ್ ಪುತ್ತಿ, ೨೦೦೨, 'ಬಸ್ರೂರಿನ ದೇವದಾಸಿ ಪದ್ಧತಿ' (ಅಪ್ರಕಟಿತ ಎಂ ಫಿಲ್ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ,

೫೭ ವಾಣಿಶ್ರೀ ಟಿ ಕೆ, ೨೦೦೩, 'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು' (ಅಪ್ರಕಟಿತ ಪಿಎಚ್.ಡಿ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ,

೫೮ ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೮, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೯ ವಿರೂಪಾಕ್ಷಿ ಪೂಜಾರಿಹಳ್ಳಿ, ೨೦೧೨, ಬಳ್ಳಾರಿ ಜಿಲ್ಲೆಯಲ್ಲಿನ ಕಲೆಕ್ಟರ್‌ಗಳ ಆಳ್ವಿಕೆ, ಕ.ವಿ.ವಿ, ಹಂಪಿ

೬೦ ವೆಂಕಟಸ್ವಾಮಿ ಎಂ, ೨೦೦೩, ಅಸ್ಪೃಶ್ಯರು, ನವಕರ್ನಾಟಕ ಪ್ರಕಾಶನ, ಬೆಂಗಳೂರು

೬೧ ಶಿವರಾಮ ಕಾರಂತ, ೧೯೭೪, ಹುಚ್ಚುಮನಸ್ಸಿನ ಹತ್ತು ಮುಖಗಳು, ಹರ್ಷ ಪ್ರಕಾಶನ, ಪುತ್ತೂರು

೬೨ ಶ್ರೀಪತಿ ಹಳಗುಂದ ಕೆ, ೨೦೦೮, ಕನ್ನಡ ಕಾದಂಬರಿಗಳಲ್ಲಿ ವೇಶ್ಯಾಜೀವನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೬೩ ಶೈಲಜ ಹಿರೇಮಠ, ೧೯೯೯, ಪಾತರದವರು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬೪ ಶೈಲಜ ಹಿರೇಮಠ, ೨೦೦೩, ಸ್ತ್ರೀಕಥನ, ಭುವನ ಪ್ರಕಾಶನ, ಹೊಸಪೇಟೆ

೬೫ ಸಂಗಳದ ಎನ್.ಬಿ, ೨೦೧೪, ಭೋವಿ ಸಮುದಾಯದ ಸಾಮಾಜಿಕ ಅಧ್ಯಯನ, ಶಶಿ ಪ್ರಕಾಶನ, ಗದಗ

೬೬ ಸಿದ್ಧಲಿಂಗಯ್ಯ, ೨೦೦೯, ಗ್ರಾಮ ದೇವತೆಗಳು, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು

೬೭ ಸಿದ್ರಾಮಕಾರಣಿಕ, ೨೦೧೩, ದೇವದಾಸಿ ಮತ್ತು ಬೆತ್ತಲೆ ಸೇವೆ, ಲಡಾಯಿ ಪ್ರಕಾಶನ, ಗದಗ

೬೮ ಸೀತಮ್ಮ ಕೆ, ೨೦೦೩, ಮಹಿಳಾ ಅಧ್ಯಯನದ ಮಜುಲುಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೬೯ ಹಾಲಿಗೇರಿ ಹನುಮಂತ, ೨೦೧೨, ಕೆಂಗುಲಾಬಿ, ಸಹಜ ಪುಸ್ತಕ ಪ್ರಕಾಶನ, ಬೆಂಗಳೂರು

೭೦ ಹೆಬ್ಬಾಳೆ ಕೆ ನಾಗೇಶ್, ೨೦೧೨, ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೧ ಹೇಮಲತಾ ಎಚ್ ಎಮ್, ೨೦೧೬. ಮಹಿಳಾ ಸಶಕ್ತೀಕರಣ: ಒಂದು ಪರಿಕಲ್ಪನೆ, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು

**ಇಂಗ್ಲಿಷ್ ಗ್ರಂಥಗಳು**

೭೨ Agnes Flavia, 1995, (Ed) Meera Kosambi, State, Gender and the Rhetoric of Law Reform, Research Centre for Women's Studies, SNDT Women's University Pub., Bombay

೭೩ Bajpai Asha, 2003, Child Rights in India: Law, Policy and Practice, Oxford University Press, New Delhi

೭೪ Barse Sheela, 1996, Indian Laws on Prostitution and Sexual Offences, NeCrgaurav Research & Development Foundation Pub, Mumbai

೭೫ Beotra B.R, 1988, The Immoral Traffic (Prevention) Act, 1956 :(With State. Rules), The Law Book Co. Pub, Allahabad

೭೬ Carol Smart, 1977, Women, Crime & Criminology - A Feminist Critique, Routlege &Kegan Paul, London, Boston

೭೭ Carol Smart, 1995 Law, Crime and Sexuality: Essays in Feminism, Sage Publications India Ltd, New Delhi

೭೮ Chakravarthi Uma, 1990, Whatever Happened to .the Vedic Dasi? Orientalism, Nationalism and a Script of the past, Recasting Women: Essays in colonial History, Rutgers University Press, New Jersey

೭೯ Chandra Mowli V, 1992, Girl Child - Labour Studies, Sterling Pub, New Delhi

೮೦ Das Ram Mohan, 1993, Women in Manu's Philosophy, Janlandhar

೮೧ Devasia Leelamma, 1991, Girl Child in India, Ashish Publishing House, New Delhi

೮೨ Dewan V.K., 1996, Law Relating to Offences against Women, Orient Law House, New Delhi

೮೩ Ghosh S.K , 1996, The World of Prostitutes, APH Pub, 5, New Delhi

೮೪ Gupta, Ram Lal, 1979, The Medico Legal Aspects of Sexual Offences, Eastern Book Co, Lucknow

೮೫ Gurunath C.A., 2006, Woman, Child, Law and Society, Vidyavardhaka Law College, Mysore

೮೬ Gurumurthy K.G., Desia, Mutalik A.A, 2005, "Religion and Politics-A cultural study of the Sacred Complex of Renuka –Yallamma, Vimochana Prakashsna, Athani,.

೮೭ Harris Margaret and Billis David, 1985, Organizing Voluntary Agencies, Bedford Square Press, London

೮೮ Harris Margaret and Rochester Colin, 2001, Voluntary Organisations and Social Policy in Britain", Palgrave, New York

೮೯ Margret M, 1995, Human Rights Watch, Rape for Profit, Trafficking of Nepali Girls and Women to India's Brothels", Human Rights Watch, New York,.

೯೦ Joardar, Biswanath, 1984, Prostitutes in Historical and Modern Perspective, Inter-India Publications, New Delhi

୯୧ Kanth, Amod, 1988, Immoral Traffic: Police Perspective: Sin, Crime or a Social Evil, Social Audit of Immoral Traffic Prevention Act, University of Delhi , Delhi,.

୯୨ Karmakar, Sumati, 2001, Red Light Area: Social Environment of Sex workers", Dominant Publishers and Distributors, New Delhi

୯୩ Hoigard Cecilie &Lin Finstad, 1986, Backstreets - Prostitution, Money and Love, Polity Press, Cambridge

୯୪ HusSain Mazhar, 1987 The Immoral Traffic (Prevention) Act, 1956 with a critical commentary, case law and State Rules, Eastern Book Co. Pub. Lucknow

୯୫ Jean D'Cunha, 1991, The Legislation of Prostitution: A Sociological inquiry into the laws relating to prostitution in India and the West, Christian Institute for the Study of Religion and Society, Bangalore

୯୬ Jean D'Cunha, 1997, Embodiment Essays on Gender and Identity, Oxford University Press,Mumbai

୯୭ Joardar B, 1985, Prostitution in Nineteenth and Early Twentieth Century: Calcutta, Inter-India Pub, New Delhi

୯୮ Kelkar, Govind, 1992, Violence Against Women, Indian Institute of Advance Study, Shimla and Manohar Pub., New Delhi

୯୯ Kuba S K, 1986, Status of Women in International Law, Delhi Law Book Co, New Delhi

୧୦୦ Kumar K & Rani Punam, 1996, Offences against Women - Sociological Perspectives, Regency Pub., New Delhi

୧୦୧ Lata Mani, 1990, Contentious Traditions: The Debate on Saii in Colonial India, Rutgers University Press, New Jersey

୧୦୨ Lina Gonsalves, 1993, Women and the Law, Lancer Paperbacks, New Delhi

୧୦୩ Loraine Gelsthorpe & Allison Morris, 1990, Feminist perspectives in Criminology, Open University Press, Philadelphia

୧୦୪ Mukheijee K K, 1997, Girl Child Prostitution in India (Policies and Programmes), The National Commission for Women, New Delhi

୧୦୫ Nagla B K, 1991, Women, Crime and Law, Rawat Pub, Jaipur

୧୦୬ Neera Desai &Maitreyi Krishnaraj, 1990, Women and Society in India, Ajanta Pub, New Delhi

୧୦୭ Punekar S. D. & Kamala Rao, 1967, A Study of Prostitutes in Bombay, Lalvani Publishing House, Bombay

୧୦୮ Rajeshwari& Sundar Rajan, 1996, Prostitution Question(s) (Female) Agency,Sexuality and Work", Feminist Terrains in Legal Domains: Interdisciplinary, Essays on Women and Law in India, Kali for Women Pub, Mumbai

୧୦୯ Ronald Hyam, 1991, Empire and Sexuality- The British Experience, Manchester University Press, Manchester

୧୧୦ Ratna Kapur, 1996, Feminist Terrains in Legal Domains: Interdisciplinary Essays on Women and Law in India, Kali for Women Pub, Mumbai

୧୧୧ Brinda Cossman, 1993, On Women, Equality & the Constitution: Through the Looking Glass of Feminism, NLSJ Publication, Bangalore

୧୧୨ Roma Debabrata, 1997, Lost Childhood, A field study of child prostitution in Delhi, National Commission for Women, New Delhi

୧୧୩ Satyanshu K Mukheqe & Jocelynne A. Scutt 1981, Women and Crime, Australian Institute of Criminology, Sydney

୧୧୪ Seema Midha, 1992, Immoral Traffic Prevention Act 1986 (Amended SIT Act), Indian Social Institute, New Delhi

୧୧୫ Shobha Saxena, 1995, Crimes Against Women and Protective Laws, Deep & Deep Pub, New Delhi

೧೧೬ Sinha S N & Basu N K, 1992, The History of Marriage and Prostitution (Vedas to Vatsyayana), Khama Pub, New Delhi

೧೧೭ Slovenko Ralph, 1965, Sexual Behaviour arid the Law, Charles C Thomas Pub, Illinios, US

೧೧೮ Sundar Raj M, 1993, Prostitution in Madras - A Study in Historical Perspective, Konark Puib, New Delhi.

೧೧೬ Rozario Rita, 1988, Trafficking in Women and Children in India, A Joint Women's Programme Publication, New Delhi

೧೧೬ Weeks Jeffrey, 1989, Sex, Politics and Society - The regulation of sexuality since 1800, Longman Group, UK Ltd, Longman House, London

**ಪತ್ರಿಕೆಗಳು**

ಅಗ್ನಿ ಪತ್ರಿಕೆ, ಅಗ್ನಿ ಶ್ರೀಧರ (ಸಂ) ಸಂಪುಟ: ೧೬, ಸಂಚಿಕೆ–೫೦, ದಿನಾಂಕ:೨೫/೯/೨೦೧೫

## ಮಾಹಿತಿದಾರರ ವಿವರ

(ಸೂಚನೆ : ಮಾಹಿತಿದಾರರ ವಿಳಾಸವನ್ನು ಗೌಪ್ಯವಾಗಿ ಕಾಪಡುವ ಸಲುವಾಗಿ ಅವರ ಹೆಸರುಗಳನ್ನು ಬದಲಿಸಲಾಗಿದೆ)

### ಬಳ್ಳಾರಿ ಜಿಲ್ಲೆ –೧೦೦

| ಕ್ರಸಂ | ಹೆಸರು | ಊರು |
|---|---|---|
| ೧ | ದುರುಗಮ್ಮ | ಬಳ್ಳಾರಿ |
| ೨ | ಮಾರಕ್ಕ | ಬಳ್ಳಾರಿ |
| ೩ | ಬಂಜಮ್ಮ | ಬಳ್ಳಾರಿ |
| ೪ | ನಾಗವ್ವ | ಬಳ್ಳಾರಿ |
| ೫ | ಬಾಲಮ್ಮ | ಬಳ್ಳಾರಿ |
| ೬ | ಲಕ್ಷ್ಮಕ್ಕ | ಬಳ್ಳಾರಿ |
| ೭ | ಜಯಮ್ಮ | ಬಳ್ಳಾರಿ |
| ೮ | ಗಿರಿಜವ್ವ | ಬಳ್ಳಾರಿ |
| ೯ | ಅಂಕುಲಮ್ಮ | ಬಳ್ಳಾರಿ |
| ೧೦ | ಜೋತ್ಯಮ್ಮ | ಬಳ್ಳಾರಿ |
| ೧೧ | ಕಾಳವ್ವ | ಬಳ್ಳಾರಿ |
| ೧೨ | ಹುಲುಗಮ್ಮ | ಬಳ್ಳಾರಿ |
| ೧೩ | ಸುವರ್ಣ | ಬಳ್ಳಾರಿ |

| | | |
|---|---|---|
| ೧೪ | ಮಲ್ಲಮ್ಮ | ಬಳ್ಳಾರಿ |
| ೧೫ | ಉಮಕ್ಕ | ಬಳ್ಳಾರಿ |
| ೧೬ | ದೊಡ್ಡ ಬಸಕ್ಕ | ಬಳ್ಳಾರಿ |
| ೧೭ | ನಿಂಗಮ್ಮ | ಬಳ್ಳಾರಿ |
| ೧೮ | ಮೀನಾಕ್ಷಿ | ಬಳ್ಳಾರಿ |
| ೧೯ | ಗಂಗಮ್ಮ | ಬಳ್ಳಾರಿ |
| ೨೦ | ಸುಮಿತ್ರ | ಬಳ್ಳಾರಿ |
| ೨೧ | ಸುಲೋಚನಾ | ಬಳ್ಳಾರಿ |
| ೨೨ | ಚೈತ್ರ | ಬಳ್ಳಾರಿ |
| ೨೩ | ಸುಮಂಗಲ | ಬಳ್ಳಾರಿ |
| ೨೪ | ಫರೀನಾ | ಬಳ್ಳಾರಿ |
| ೨೫ | ಲೇಖಪ್ರಿಯ | ಬಳ್ಳಾರಿ |
| ೨೬ | ಪಾರಮ್ಮ | ಹೊಸಪೇಟೆ |
| ೨೭ | ಗೌರಮ್ಮ | ಹೊಸಪೇಟೆ |
| ೨೮ | ಶಶಿಕಲಾ | ಹೊಸಪೇಟೆ |
| ೨೯ | ಉಮಕ್ಕ | ಹೊಸಪೇಟೆ |
| ೩೦ | ದುರುಗಮ್ಮ | ಹೊಸಪೇಟೆ |
| ೩೧ | ರಾಧಾ | ಹೊಸಪೇಟೆ |
| ೩೨ | ಗಂಗಮ್ಮ | ಹೊಸಪೇಟೆ |
| ೩೩ | ಉಷಾ | ಹೊಸಪೇಟೆ |
| ೩೪ | ಭಾಗ್ಯಮ್ಮ | ಹೊಸಪೇಟೆ |
| ೩೫ | ಆಶಾ | ಹೊಸಪೇಟೆ |
| ೩೬ | ಅನುಸೂಯ | ಹೊಸಪೇಟೆ |
| ೩೭ | ರತ್ನಕ್ಕ | ಹೊಸಪೇಟೆ |
| ೩೮ | ಕರಿಯಮ್ಮ | ಹೊಸಪೇಟೆ |

| | | |
|---|---|---|
| ೩೯ | ಬೀರಮ್ಮ | ಹೊಸಪೇಟೆ |
| ೪೦ | ವರ್ಷಿಣಿ | ಹೊಸಪೇಟೆ |
| ೪೧ | ವಂದನಾ | ಹೊಸಪೇಟೆ |
| ೪೨ | ಪೂಜಾ | ಹೊಸಪೇಟೆ |
| ೪೩ | ನಾಗಿಬಾಯಿ | ಹೊಸಪೇಟೆ |
| ೪೪ | ನಮಿತ | ಹೊಸಪೇಟೆ |
| ೪೫ | ಕವನ | ಹೊಸಪೇಟೆ |
| ೪೬ | ಸಹನ | ಹೊಸೂರು |
| ೪೭ | ವಂಧನಾ | ಹೊಸೂರು |
| ೪೮ | ಬಸಮ್ಮ | ಹೊಸೂರು |
| ೪೯ | ರಾಜಮ್ಮ | ಹೊಸೂರು |
| ೫೦ | ಸ್ಪಂದನ | ಟಿ ಬಿ ಡ್ಯಾಂ |
| ೫೧ | ಸುಶ್ಮಿತ | ಟಿ ಬಿ ಡ್ಯಾಂ |
| ೫೨ | ರೇಖಾ | ಟಿ ಬಿ ಡ್ಯಾಂ |
| ೫೩ | ಸುಮಯ ಬಾನು | ಟಿ ಬಿ ಡ್ಯಾಂ |
| ೫೪ | ಕುಸುಮ | ಟಿ ಬಿ ಡ್ಯಾಂ |
| ೫೫ | ಹರ್ಷಿತ | ಟಿ ಬಿ ಡ್ಯಾಂ |
| ೫೬ | ಅನಿತಾ | ಟಿ ಬಿ ಡ್ಯಾಂ |
| ೫೭ | ಪೂರ್ವಿಕ | ಟಿ ಬಿ ಡ್ಯಾಂ |
| ೫೮ | ಮೀನಾಕ್ಷಿ | ಚಿಲಕನಹಟ್ಟಿ |
| ೫೯ | ಗಂಗಾಭಿಕ | ಚಿಲಕನಹಟ್ಟಿ |
| ೬೦ | ಮಂಜಕ್ಕ | ಚಿಲಕನಹಟ್ಟಿ |
| ೬೧ | ಪಂಕಜ | ಮರಿಯಮ್ಮನಹಳ್ಳಿ |
| ೬೨ | ಜಲಾಜಮ್ಮ | ಮರಿಯಮ್ಮನಹಳ್ಳಿ |
| ೬೩ | ನಾಗವೇಣಿ | ಮರಿಯಮ್ಮನಹಳ್ಳಿ |

| | | |
|---|---|---|
| ೬೪ | ಗೀತಮ್ಮ | ಮರಿಯಮ್ಮನಹಳ್ಳಿ |
| ೬೫ | ಬುಳ್ಳಭಾಯಿ | ಮರಿಯಮ್ಮನಹಳ್ಳಿ |
| ೬೬ | ಮಾರಕ್ಕ | ಕೂಡ್ಲಿಗಿ |
| ೬೭ | ಸವಿತ | ಕೂಡ್ಲಿಗಿ |
| ೬೮ | ಸೀನಕ್ಕ | ಕೂಡ್ಲಿಗಿ |
| ೬೯ | ರಾಜಮ್ಮ | ಕೂಡ್ಲಿಗಿ |
| ೭೦ | ಸೌಮ್ಯ | ಕೂಡ್ಲಿಗಿ |
| ೭೧ | ಜಯಲಕ್ಷ್ಮಿ | ಕೂಡ್ಲಿಗಿ |
| ೭೨ | ಕಮಲಮ್ಮ | ಕೂಡ್ಲಿಗಿ |
| ೭೩ | ಪಾರಮ್ಮ | ಕೂಡ್ಲಿಗಿ |
| ೭೪ | ಮಹಿಮಾ | ಕೂಡ್ಲಿಗಿ |
| ೭೫ | ನೇತ್ರಮ್ಮ | ಕೂಡ್ಲಿಗಿ |
| ೭೬ | ಹಾಲಮ್ಮ | ಕೂಡ್ಲಿಗಿ |
| ೭೭ | ವಂಧನಾ | ಕೂಡ್ಲಿಗಿ |
| ೭೮ | ಸ್ವಪ್ನ | ಕೂಡ್ಲಿಗಿ |
| ೭೯ | ಸುಮಂಗಲ | ಕೂಡ್ಲಿಗಿ |
| ೮೦ | ಜರಿನಾ | ಕೂಡ್ಲಿಗಿ |
| ೮೧ | ಫರೀಧರ್ | ಕೂಡ್ಲಿಗಿ |
| ೮೨ | ಊರ್ಮಿಳ | ಕೂಡ್ಲಿಗಿ |
| ೮೩ | ಅಂಜನಾ | ಕೂಡ್ಲಿಗಿ |
| ೮೪ | ಸುಭದ್ರ | ಕೂಡ್ಲಿಗಿ |
| ೮೫ | ಶೃತಿ | ಕೂಡ್ಲಿಗಿ |
| ೮೬ | ಪ್ರಿಯಾಂಕ | ಕೂಡ್ಲಿಗಿ |
| ೮೭ | ನಿಂಗಮ್ಮ | ಕೂಡ್ಲಿಗಿ |
| ೮೮ | ಶಿವಮ್ಮ | ಕೂಡ್ಲಿಗಿ |

| | | |
|---|---|---|
| ೮೯ | ಪದ್ಮಮ್ಮ | ಕೂಡ್ಲಿಗಿ |
| ೯೦ | ಮಂಜುಳಾ | ಕೂಡ್ಲಿಗಿ |
| ೯೧ | ಶಶಿಕಲಾ | ಕೂಡ್ಲಿಗಿ |
| ೯೨ | ರಾಧಮ್ಮ | ಕೂಡ್ಲಿಗಿ |
| ೯೩ | ಉಷಾರಾಣಿ | ಕೂಡ್ಲಿಗಿ |
| ೯೪ | ದ್ಯಾಮವ್ವ | ಕೂಡ್ಲಿಗಿ |
| ೯೫ | ಕುಸುಮ | ಕೂಡ್ಲಿಗಿ |
| ೯೬ | ಈರಕ್ಕ | ಕೂಡ್ಲಿಗಿ |
| ೯೭ | ಚೌಡಮ್ಮ | ಕೂಡ್ಲಿಗಿ |
| ೯೮ | ಚಂದನ | ಕೂಡ್ಲಿಗಿ |
| ೯೯ | ವಾಣಿ | ಕೂಡ್ಲಿಗಿ |
| ೧೦೦ | ಸವಿತಾ | ಕೂಡ್ಲಿಗಿ |

**ಕೊಪ್ಪಳ ಜಿಲ್ಲೆ-೧೦೦**

| ಕ್ರಸಂ. | ಹೆಸರು | ಊರು |
|---|---|---|
| ೧ | ಅಂಜಿನಮ್ಮ | ಕೊಪ್ಪಳ |
| ೨ | ಹನುಮಕ್ಕ | ಕೊಪ್ಪಳ |
| ೩ | ಕೆಂಚಕ್ಕ | ಕೊಪ್ಪಳ |
| ೪ | ಬಸಮ್ಮ | ಕೊಪ್ಪಳ |
| ೫ | ಬಾಲಮ್ಮ | ಕೊಪ್ಪಳ |
| ೬ | ನಾಗಮಣಿ | ಕೊಪ್ಪಳ |
| ೭ | ಯಶೋಧ | ಕೊಪ್ಪಳ |
| ೮ | ರಾಧಭಾಯಿ | ಕೊಪ್ಪಳ |
| ೯ | ಐಶ್ವರ್ಯ | ಕೊಪ್ಪಳ |
| ೧೦ | ಪ್ರಿಯಾ | ಕೊಪ್ಪಳ |
| ೧೧ | ಸುಪ್ರಿತ | ಕೊಪ್ಪಳ |

| | | |
|---|---|---|
| ೧೨ | ಸರೋಜಾಬಾಯಿ | ಕೊಪ್ಪಳ |
| ೧೩ | ಶಕೀಲ | ಕೊಪ್ಪಳ |
| ೧೪ | ಸ್ಮೀತ | ಕೊಪ್ಪಳ |
| ೧೫ | ಶ್ವೇತ | ಕೊಪ್ಪಳ |
| ೧೬ | ಪಾರ್ವತಿ | ಕೊಪ್ಪಳ |
| ೧೭ | ನೀಲಮ್ಮ | ಕೊಪ್ಪಳ |
| ೧೮ | ವಂದಿತಾ | ಕೊಪ್ಪಳ |
| ೧೯ | ಪ್ರತಿಭಾ | ಕೊಪ್ಪಳ |
| ೨೦ | ಚಿನ್ಮಯ | ಕೊಪ್ಪಳ |
| ೨೧ | ಹುಲುಗಮ್ಮ | ಹುಲಿಗಿ |
| ೨೨ | ದೇವಮ್ಮ | ಹುಲಿಗಿ |
| ೨೩ | ಜಗದಾಂಬ | ಹುಲಿಗಿ |
| ೨೪ | ದೇವಲಾಂಬಿಕೆ | ಹುಲಿಗಿ |
| ೨೫ | ಸತ್ಯಕ್ಕ | ಹುಲಿಗಿ |
| ೨೬ | ಶಿಲ್ಪ | ಹುಲಿಗಿ |
| ೨೭ | ಪ್ರತಿಮಾ | ಹುಲಿಗಿ |
| ೨೮ | ನಯನ | ಹುಲಿಗಿ |
| ೨೯ | ಮಂದಾರ | ಹುಲಿಗಿ |
| ೩೦ | ರತ್ನಮ್ಮ | ಹುಲಿಗಿ |
| ೩೧ | ಕೋಮಲ | ಹುಲಿಗಿ |
| ೩೨ | ಮಂದಾಕಿನಿ | ಹುಲಿಗಿ |
| ೩೩ | ಲಲಿತ | ಹುಲಿಗಿ |
| ೩೪ | ಸಬಿಹಾ | ಹುಲಿಗಿ |
| ೩೫ | ವೀಣಾ | ಹುಲಿಗಿ |
| ೩೬ | ಮೇನಕ | ಹುಲಿಗಿ |

| | | |
|---|---|---|
| ೩೭ | ರಂಭಾಮಣಿ | ಹುಲಿಗಿ |
| ೩೮ | ಖುಷಿ | ಹುಲಿಗಿ |
| ೩೯ | ಭೂಮಿಕ | ಹುಲಿಗಿ |
| ೪೦ | ಶಾಲಿನಿ | ಹುಲಿಗಿ |
| ೪೧ | ಮಾಲೀನಿ | ಹುಲಿಗಿ |
| ೪೨ | ಅನುರಾಧ | ಹುಲಿಗಿ |
| ೪೩ | ರಚನಾ | ಹುಲಿಗಿ |
| ೪೪ | ಬಸಂತಿ | ಗಂಗಾವತಿ |
| ೪೫ | ವಸಂತ | ಗಂಗಾವತಿ |
| ೪೬ | ಚಾಂದಿನಿ | ಗಂಗಾವತಿ |
| ೪೭ | ಕಳಾಮ್ಮ | ಗಂಗಾವತಿ |
| ೪೮ | ಗಿರಿಜಾಭಾಯಿ | ಗಂಗಾವತಿ |
| ೪೯ | ಅರುಣಾ | ಗಂಗಾವತಿ |
| ೫೦ | ಸೀತಮ್ಮ | ಗಂಗಾವತಿ |
| ೫೧ | ಮಾಲಾ | ಗಂಗಾವತಿ |
| ೫೨ | ಸಹನಾ | ಗಂಗಾವತಿ |
| ೫೩ | ಅಂಜನಮ್ಮ | ಗಂಗಾವತಿ |
| ೫೪ | ಛಾಯ | ಗಂಗಾವತಿ |
| ೫೫ | ಕೀರ್ತನ | ಗಂಗಾವತಿ |
| ೫೬ | ಭೈರವಿ | ಗಂಗಾವತಿ |
| ೫೭ | ಕ್ಯಾತಮ್ಮ | ಗಂಗಾವತಿ |
| ೫೮ | ಗಂಗಮ್ಮ | ಗಂಗಾವತಿ |
| ೫೯ | ಹುಲುಗಮ್ಮ | ಗಂಗಾವತಿ |
| ೬೦ | ಶಾಹಿನಿ | ಗಂಗಾವತಿ |
| ೬೧ | ನಿವೇದಿತ | ಗಂಗಾವತಿ |

| | | |
|---|---|---|
| ೬೨ | ಮಂಜಮ್ಮ | ಗಂಗಾವತಿ |
| ೬೩ | ಸುಮಿತ್ರ | ಗಂಗಾವತಿ |
| ೬೪ | ಶಾರದ | ಗಂಗಾವತಿ |
| ೬೫ | ಪರ್ವಿಜ್ | ಗಂಗಾವತಿ |
| ೬೬ | ಮಂಗಳ | ಗಂಗಾವತಿ |
| ೬೭ | ದಾಕ್ಷಾಯಿಣಿ | ಗಂಗಾವತಿ |
| ೬೮ | ಚೈತ್ರ | ಗಂಗಾವತಿ |
| ೬೯ | ತುಳಾಜಾಭಾಯಿ | ವಿರುಪಾಪುರ |
| ೭೦ | ಭವಾನಿ | ವಿರುಪಾಪುರ |
| ೭೧ | ಅಂಬಾದೇವಿ | ವಿರುಪಾಪುರ |
| ೭೨ | ಇಂದ್ರ | ವಿರುಪಾಪುರ |
| ೭೩ | ನೀಲಮ್ಮ | ವಿರುಪಾಪುರ |
| ೭೪ | ಅಶ್ವಿನಿ | ವಿರುಪಾಪುರ |
| ೭೫ | ಭಾವನ | ವಿರುಪಾಪುರ |
| ೭೬ | ಜೋತಿಕಾ | ವಿರುಪಾಪುರ |
| ೭೭ | ಚಿನ್ನಮ್ಮ | ಸಣಾಪುರ |
| ೭೮ | ಗಿರಿಜಾ | ಸಣಾಪುರ |
| ೭೯ | ಚಾಂದಿನಿ | ಸಣಾಪುರ |
| ೮೦ | ರಮಿಕ | ಸಣಾಪುರ |
| ೮೧ | ರಾಧ | ಸಣಾಪುರ |
| ೮೨ | ಆಶಾ | ವಡ್ಡರಹಟ್ಟಿ |
| ೮೩ | ನಂದನ | ವಡ್ಡರಹಟ್ಟಿ |
| ೮೪ | ಅಮೃತ | ವಡ್ಡರಹಟ್ಟಿ |
| ೮೫ | ಅಂಜನಕ್ಕ | ವಡ್ಡರಹಟ್ಟಿ |
| ೮೬ | ಮಂಜಮ್ಮ | ವಡ್ಡರಹಟ್ಟಿ |

| | | |
|---|---|---|
| ೮೭ | ಹರ್ಷಿತ | ಶ್ರೀರಾಮನಗರ |
| ೮೮ | ಕೋಕಿಲ | ಶ್ರೀರಾಮನಗರ |
| ೮೯ | ಗೀತಾ | ಶ್ರೀರಾಮನಗರ |
| ೯೦ | ಮೋಹಿನಿ | ಶ್ರೀರಾಮನಗರ |
| ೯೧ | ಚಂದನ | ಕುಷ್ಟಗಿ |
| ೯೨ | ಪಾರ್ವತಿ | ಕುಷ್ಟಗಿ |
| ೯೩ | ಅಂಕಲಮ್ಮ | ಕುಷ್ಟಗಿ |
| ೯೪ | ಕೆಂಚಮ್ಮ | ಕುಷ್ಟಗಿ |
| ೯೫ | ಗಂಗಾ | ಕುಷ್ಟಗಿ |
| ೯೬ | ಬೃಂದಾ | ಕುಷ್ಟಗಿ |
| ೯೭ | ನಂದಿನಿ | ಕುಷ್ಟಗಿ |
| ೯೮ | ಮಲ್ಲವ್ವ | ಕುಷ್ಟಗಿ |
| ೯೯ | ಪ್ರೇಮ | ಕುಷ್ಟಗಿ |
| ೧೦೦ | ಸಂಧಾ | ಕುಷ್ಟಗಿ |

# ಬುಡಕಟ್ಟು ಅಧ್ಯಯನ ವಿಭಾಗ

# ಕನ್ನಡ ವಿಶ್ವವಿದ್ಯಾಲಯ

## ವೇಶ್ಯಾವಾಟಿಕೆ: ಸಾಮಾಜಿಕ ಸಂದರ್ಭ

## ಪ್ರಶ್ನಾವಳಿ ಮಾದರಿ

ಮಾಹಿತಿದಾರರ ಹೆಸರು:

ವಿಳಾಸ:

ಧರ್ಮ:

ಜಾತಿ:

ವಯಸ್ಸು:

ಮಾತೃಭಾಷೆ: ತಿಳಿದಿರುವ ಭಾಷೆಗಳು:

೧ ಶಿಕ್ಷಣ : ಅನಕ್ಷರಸ್ಥೆ, ಅಕ್ಷರಸ್ಥೆ( ಓದಿದ ತರಗತಿ ________),

೨ ಯಾವ ವಯಸ್ಸಿಗೆ ಶಾಲೆ ಬಿಡಲಾಯಿತು______

೩ ಶಾಲೆ ಬಿಡಲು ಇರುವ ಕಾರಣಗಳು

೪ ವೈವಾಹಿಕ ಸ್ಥಿತಿ: (ಅವಿವಾಹಿತೆ/ ವಿವಾಹಿತೆ/ದೇವದಾಸಿ/ಬಂಜೆ/ವಿಚ್ಛೇಧಿತೆ/ ವಿಧವೆ)

೪.೧ ವಿವಾಹಿತರಾಗಿದ್ದರೆ ಗಂಡನೊಂದಿಗಿರುವಿರೆ (ಹೌದು/ಇಲ್ಲ)

೫ ಯಾವ ವಯಸ್ಸಿನಲ್ಲಿ ವಿವಾಹವಾಗಿದ್ದಿರಿ

೫ ಕೌಟಂಬಿಕ ಹಿನ್ನೆಲೆ

೫.೧ ನಿಮ್ಮ ಮೂಲ ಸ್ಥಳ ಯಾವುದು: ರಾಜ್ಯ------ಜಿಲ್ಲೆ---------ಊರು-------

೫.೨ ಕೌಟಂಬಿಕ ವಿವರ

ಕ್ರಸಂ ನಿಮ್ಮೊಂದಿಗಿರುವ ಸಂಬಂಧ ವಯಸ್ಸುಪಡೆದ ಶಿಕ್ಷಣ ವೃತ್ತಿ ಮಾಸಿಕ ಆದಾಯ ಷರಾ

೫.೩ ಕುಟುಂಬದೊಂದಿಗೆ ಇರುವ ಸಂಬಂಧಗಳು

ಕ್ರಸಂ ನಿಮ್ಮೊಂದಿಗಿರುವ ಸಂಬಂಧ ವಯಸ್ಸು ಪಡೆದ ಶಿಕ್ಷಣ ವೃತ್ತಿ ಮಾಸಿಕ ಆದಾಯ ಷರಾ

೬ ಕುಟುಂಬದ ಆಸ್ತಿಹಕ್ಕು

| ಕುಟುಂಬ | ಕೃಷಿ ಭೂಮಿ | ಸಾಕು ಪ್ರಾಣಿಗಳು | ಮನೆ | ಇತರೆ | ಇರಬಹುದಾದ ಮೌಲ್ಯ |
|---|---|---|---|---|---|
| ಸ್ವಂತ ಕುಟುಂಬ | | | | | |
| ಪೋಷಕ ಕುಟುಂಬ | | | | | |

೭ ವೃತ್ತಿ ಸಂಬಂಧಿ ಮಾಹಿತಿ

೭.೧ ಹಿಂದೆ ನಿರ್ವಹಿಸುತ್ತಿದ್ದ ವೃತ್ತಿ ಯಾವುದಿತ್ತು

೭.೨ ವೃತ್ತಿಯಿಂದ ದೊರೆಯುತ್ತಿದ್ದ ಸಂಭಾವನೆ ಎಷ್ಟು

೭.೩ ಹುದ್ದೆಯ ಕಾಲ (ಪೂರ್ಣಕಾಲಿಕ/ಅರೆಕಾಲಿಕ)

೭.೪ ವೃತ್ತಿಯಿಂದ ದೂರವಾಗಲು ಇರುವ ಕಾರಣಗಳು

೮ ಲೈಂಗಿಕ ವೃತ್ತಿಯಲ್ಲಿ ತೊಡಗಿದ ಕಾಲ ಯಾವುದು

೯ ಲೈಂಗಿಕ ವೃತ್ತಿಗೆ ಪ್ರವೇಶಿಸಲು ಇರುವ ಕಾರಣಗಳು

(ಪಾಲಕರ ಅನಾರೋಗ್ಯಕರ ನಡವಳಿಕೆ/ಕುಟುಂಬದ ಆರ್ಥಿಕ ತೊಂದರೆ/ಕುಟುಂಬದೊಳಗಿನ ಧಾರ್ಮಿಕ ಕಾರಣಗಳು)

೧೦ ನೀವು ಈ ವೃತ್ತಿಯಲ್ಲಿ ತೊಡಗಲು ಇರುವ ಸಾಮಾಜಿಕ ಕಾರಣಗಳು ಏನು

(ಸಂಗಾತಿಯು ದೂರವಾಗಿರುವುದು/ಪ್ರೇಮದಿಂದ ಖಿನ್ನತೆಗೆ ಒಳಗಾಗಿದ್ದು/ಪ್ರೀತಿಸಿದವನ ಮೋಸಗಾರಿಕೆ/ವಂಚನೆ/ಅಪಹರಣಕ್ಕೆ ಒಳಗಾದೆ/ಸ್ಥಳಾಂತರ/ಇತರೆ ಕಾರಣಗಳು ಇದ್ದಲ್ಲಿ ವಿವರಿಸಿ)

೧೧ ಯಾರ ಸಹಾಯದಿಂದ ವೇಶ್ಯಾವೃತ್ತಿಗೆ ಇಳಿದಿರಿ

(ವೇಶ್ಯಾವೃತ್ತಿಯಲ್ಲಿರುವ ಮಹಿಳೆಯರ ಸಹಕಾರ/ ತಲೆಹಿಡುಕರು/ಮಧ್ಯವರ್ತಿಗಳಿಂದ/ ವೇಶ್ಯಾಗೃಹಗಳಿಗೆ ಮಾರಟ ಮಾಡಿದ್ದರಿಂದ/ ಅಪಹರಣಕ್ಕೊಳಗಾಗಿದ್ದರಿಂದ/ತಲೆಹಿಡುಕನನ್ನು ಮದುವೆಯಾದ ಪರಿಣಾಮ/ ಪ್ರೇಮಿಸಿದವನ ವಂಚನೆಯಿಂದ/ನಪುಂಷಕ ಗಂಡನಿಂದಾಗಿ ವೃತ್ತಿಗಿಳಿದೆ/ವಿಧವೆಯಾಗಿರುವುದರಿಂದ/ ಯಾರ ಸಹಾಯ ದೊರೆಯದೇ ಇದ್ದುದರಿಂದ/ಧಾರ್ಮಿಕ ಆಚರಣೆಯ ಅಂಗವಾಗಿ/ಸ್ವಂತಕ್ಕೆ ವೃತ್ತಿಗೆ ಜಾರಿಬಿದ್ದೆನು/ಇತರೆ ಕಾರಣಗಳಿದ್ದರೆ ವಿವರಿಸಿ

೧೨ ಮೊದಲಬಾರಿಗೆ ಲೈಂಗಿಕ ವೃತ್ತಿಗೆ ಇಳಿದಾಗ ನಿಮಗಾದ ನಿಜವಾದ ಅನುಭವವೇನು ತಿಳಿಸಿ

೧೩ ನೀವು ಮನೆ ತೊರೆದಾಗ ನಿಮಗಿದ್ದ ವಯಸ್ಸು ಎಷ್ಟು

೧೪ ಪ್ರಸ್ತುತ ನೀವು ಎಲ್ಲಿ ನೆಲೆಸಿರುವಿರಿ

(ಸ್ವತಂತ್ರವಾಗಿ ಒಬ್ಬಳೇ ನೆಲೆಸಿರುವೆ/ಇತರೆ ವೇಶ್ಯೆಯರೊಂದಿಗೆ ಮನೆ ಮಾಡಿಕೊಂಡಿರುವೆ/ ವೇಶ್ಯಾಗೃಹದಲ್ಲಿರುವೆ)

೧೫ ಇತರೆ ಯಾವುದಾದರೂ ಸಂಸ್ಥೆಯಲ್ಲಿರುವಿರಾ

೧೬ ಇತರೆ ವಿವರಗಳಿದ್ದರೆ ತಿಳಿಸಿ

೧೭ ಲೈಂಗಿಕ ವೃತ್ತಿಯೊಂದಿಗೆ ಬೇರೆ ಯಾವ ವೃತ್ತಿಯಲ್ಲಿ ತೊಡಗಿರುವಿರಿ

(ಸಾಮಾನ್ಯ ಲೈಂಗಿಕ ಕಾರ್ಯಕರ್ತೆ/ಧಾರ್ಮಿಕ ಕಂದಾಚಾರಗಳ ಹಿಡಿತದಿಂದ ವೃತ್ತಿಯಲ್ಲಿ ತೊಡಗಿರುವುದು/ಬಾರ್, ಹೋಟೆಲ್‌ಗಳಲ್ಲಿ ನೃತ್ಯ, ಹಾಡುಗಾರಿಕೆಯಲ್ಲಿ ತೊಡಗಿರುವುದು/ಸೇಲ್ಸ್ ಗರ್ಲ್/ ಕಾಲ್ ಗರ್ಲ್, ಲೈವ್ ಬ್ಯಾಂಡ್ ನಟಿ/ ಲಾಡ್ಜ್ ಕೆಲಸ/ ವೇಶ್ಯಾಗೃಹಗಳಲ್ಲಿ ವೇಶ್ಯಾವೃತ್ತಿಯಲ್ಲಿ ತೊಡಗಿರುವುದು/ಇತರೆ ವಿವರಗಳು)

೧೮ ವೃತ್ತಿಯಲ್ಲಿ ಹೇಗೆ ತೊಡಗುವಿರಿ

(ಗಿರಾಕಿಗಳು ಕರೆದುಕೊಂಡು ಹೋಗುವರು/ ದಲ್ಲಾಳಿಗಳು ಕರೆದುಕೊಂಡುಹೋಗುವರು)

೧೯ ಗಿರಾಕಿ ಮತ್ತು ಮಧ್ಯವರ್ತಿಗಳೊಂದಿಗೆ ನಿಮ್ಮ ಸಂಬಂಧ ಹೇಗಿರುವುದು

೨೦ ನೀವು ವಿವಿಧ ಬಗೆಯ ಸ್ಥಳಗಳಲ್ಲಿ, ಎಷ್ಟು ಸಮಯ ವೃತ್ತಿಯಲ್ಲಿ ತೊಡಗುವುದಾಗಿ ಹೇಳಿದಿರಿ, ಹಾಗಾದರೆ ಯಾವ ಯಾವ ಸ್ಥಳಗಳಲ್ಲಿ ವೃತ್ತಿನಿರತರಾಗುವಿರೆಂದು ದಯವಿಟ್ಟು ತಿಳಿಸಿರಿ

೨೧ ಒಂದು ದಿನದಲ್ಲಿ ಎಷ್ಟು ತಾಸು ವೃತ್ತಿಯಲ್ಲಿ ನಿರತರಾಗುವಿರಿ

ದಿನದಲ್ಲಿ ವೃತ್ತಿಯಲ್ಲಿ ತೊಡಗುವ ಸಮಯ        ತಿಂಗಳಲ್ಲಿ ಎಷ್ಟು ದಿನ ವೃತ್ತಿಯಲ್ಲಿ ತೊಡಗುವಿರಿ

೨೨ ಒಂದು ದಿನದಲ್ಲಿ ನಿಮ್ಮೊಂದಿಗೆ ಸುಖಿಸುವ ಗಿರಾಕಿಗಳು ಅಂದಾಜು ಎಷ್ಟು ಜನ

೨೩ ಮಾಸಿಕವಾಗಿ ಎಷ್ಟು ದುಡುಮೆ ಮಾಡುವಿರಿ

೨೪ ಗಿರಾಕಿಗಳಿಂದ ದೊರೆಯುವ ಆದಾಯವೆಷ್ಟು

೨೫ ಇತರೆ ಮೂಲಗಳಿಂದ ದೊರೆಯುವ ಆದಾಯವೆಷ್ಟು

೨೬ ಉಳಿತಾಯ ಮಾಡುವ ಹಣವೆಷ್ಟು

೨೭ ದುಡುಮೆಯಿಂದ ದೊರೆಯುವ ಹಣವನ್ನು ಯಾವು ಯಾವುದಕ್ಕಾಗಿ ವ್ಯಯಿಸುವಿರಿ

**ಆಹಾರ/ಊಟ** **ರೂ**

ಮಧ್ಯ ಸೇವನೆಗಾಗಿ

ಮನೆ ಬಾಡಿಗೆ/ವೇಶ್ಯಾಗೃಹದ ಬಾಡಿಗೆ

ಉರವಲು/ ವಿದ್ಯುತ್ ಇತ್ಯಾದಿ

ಬಟ್ಟೆಗಳಿಗಾಗಿ

ಔಷಧಿ ಖರ್ಚು

ಮಧ್ಯವರ್ತಿಗಳಿಗೆ

ಪೋಲಿಸ್

ಗೂಂಡಾ

ತಲೆಹಿಡುಕ ಮಧ್ಯವರ್ತಿಗಳಿಗೆ

ಅಲಂಕಾರಿಕ ಸಾಮಾಗ್ರಿ

ಸಿನೆಮಾ ಇತ್ಯಾದಿಗಳಿಗಳಿಗಾಗಿ

ಇತರೆ

೨೮ ಸಾಲ ಪಡೆಯುವಿರೆ

೨೯ ಪಡೆಯುವ ಸಾಲದ ಮೊತ್ತ ಎಷ್ಟು

೩೦ ಸಾಲ ಯಾರಿಂದ ಪಡೆಯುವುದು (ಬ್ಯಾಂಕ್/ಬ್ಯಾಂಕರ್ಸ್/ತಲೆಹಿಡುಕರು/ವೇಶ್ಯಾಗೃಹದ/ಮಾಲೀಕರು/ ಇತ್ಯಾದಿ)

೩೧ ಸಾಲ ಮಾಡಲು ಇರುವ ಕಾರಣ

೩೨ ಸಾಲ ಮರುಪಾವತಿಯ ಕ್ರಮ ಮತ್ತು ಬಡ್ಡಿಯ ದರ ಹೇಗಿರುವುದು

೩೩ ನಿಮಗೆ ದೀರ್ಘಕಾಲದ ಬೇನೆಗಳು ಕಾಡುತ್ತಿವೆಯಾ

೩೪ ಯಾವಾಗಿನಿಂದ ಈ ಬೇನೆ ಕಾಡುತ್ತಿದೆ

೩೫ ಡಾಕ್ಟರಿಗೆ ತೋರಿಸಿ ಔಷಧೋಪಚಾರ ಮಾಡುತ್ತಿರುವಿರಾ

೩೬ ಔಷಧೋಪಚಾರ ಮಾಡಲಾಗಿದೆಯೆ

೩೭ ಔಷಧೋಪಚಾದ ತರುವಾಯ ಆರೋಗ್ಯದಲ್ಲಿ ಸುಧಾರಣೆ ಕಂಡಿದೆಯೆ

೩೮ ಯಾವ ಬೇನೆಯಿಂದ ಬಳಲುತ್ತಿರುವಿರಿ

೩೯ ಯಾವುದಾದರೂ ದುಶ್ಚಟಗಳು ಇವೆಯೆ

೪೦ ದೀರ್ಘಕಾಲದ ಬೇನೆಗೆ ಅಥವಾ ಗರ್ಭಿಣಿಯಾದ ಸಂದರ್ಭದಲ್ಲಿ ಆರೋಗ್ಯ ಸೇವೆಗಳು ಸರಿಯಾದ ಕ್ರಮದಲ್ಲಿ ದೊರೆತವೆ

(ನಿರಂತರವಾಗಿ ಆರೋಗ್ಯ ಸೇವೆ ದೊರೆಯಿತು/ಕೆಲವು ಸಂದರ್ಭಗಳಲ್ಲಿ ಮಾತ್ರ ಆರೋಗ್ಯ ಸೇವೆ ದೊರೆಯುತ್ತಿತ್ತು)

೪೧ ಆರೋಗ್ಯ ಸೇವೆಗಳು ಅರ್ಹ ವೈದ್ಯರಿಂದ ದೊರೆಯಿತೆ ಹೌದು/ಇಲ್ಲ.

೪೧.೧ ಇಲ್ಲವಾದರೆ ಅರ್ಹ ವೈದ್ಯರಿಂದ ಏಕೆ ನಿಮಗೆ ಆರೋಗ್ಯ ಸೇವೆಗಳು ದೊರೆಯಲಿಲ್ಲ.

೪೨ ನೀವು ಯಾವುದಾದರೂ ಗುಣಪಡಿಸಲು ಸಾಧ್ಯವಾಗದ ಖಾಯಿಲೆಯಿಂದ ಬಳಲುತ್ತಿರುವಿರ ಹೌದು/ಇಲ್ಲ

೪೩ ಪೋಲಿಸ್ ವ್ಯವಸ್ಥೆಯಿಂದ ಕಿರುಕುಳ ಉಂಟಾಗುತ್ತಿದೆಯೆ: ಹೌದು/ಇಲ್ಲ

೪೪ ಹೌದಾದರೆ ಎಷ್ಟು ದಿನಕ್ಕೊಮ್ಮೆ ಕಿರುಕುಳ ನೀಡುವರು

೪೫ ನಿಮಗೆ ಪೋಲಿಸರು ದಂಧೆಯಲ್ಲಿ ಮುಂದುವರೆಯದಂತೆ ಎಚ್ಚರಿಕೆ ನೀಡಿದ್ದರಾ ಹೌದು/ಇಲ್ಲ

೪೬ ದಂಧೆಯ ಸಂಬಂಧ ನಿಮಗೆ ಯವಾಗಲಾದರೂ ಪೋೀಲಿಸರು ಬಂಧಿಸಿರುವರೆ ಹೌದು/ಇಲ್ಲ

೪೭ ಗಿರಾಕಿ ಮತ್ತು ನಿಮ್ಮ ಮಧ್ಯದ ಸಂಬಂಧ ಹೇಗಿದೆ

(ವಯಸ್ಸು/ಧರ್ಮ/ಸಾಮಾಜಿಕ ಸಂಬಂಧ/ವೃತ್ತಿ ಸಂಬಂಧ)

೪೮ ನಿಮ್ಮ ಸೇವೆಗೆ ಗಿರಾಕಿಗಳಿಂದ ಪಡೆಯುವ ಹಣ ಎಷ್ಟು

೪೯ ಇತರೆ ಲೈಂಗಿಕ ಕಾರ್ಯಕರ್ತರೊಂದಿಗಿನ ಸಂಬಂಧ ಹೇಗಿದೆ

೫೦ ತಲೆಹಿಡುಕರೊಂದಿಗಿನ ಸಂಬಂಧ ಹೇಗಿದೆ

೫೧ ಯಾವುದಾದರೂ ಸರ್ಕಾರ/ಸರ್ಕಾರೇತರ ಸಂಸ್ಥೆಗಳಿಂದ ಸೇವೆ ಪಡೆದಿರುವಿರೆ ಹೌದು/ಇಲ್ಲ

೫೨ ಬಿಡುವಿನ ಸಮಯ ಹೇಗೆ ಕಳೆಯುವಿರಿ, ನಿಮಗೆ ಯಾವುದರಲ್ಲಿ ಹೆಚ್ಚು ಆಸಕ್ತಿ ಇದೆ

(ಪುಸ್ತಕ ಓದುವುದು, ಬರೆಯುವುದು, ಸಿನೆಮಾ ಇತ್ಯಾದಿ ಮನೋರಂಜನೆ, ಇತ್ಯಾದಿ)

೫೩ ಕುಟುಂಬದ ಸ್ಥಿತಿಗತಿ ಹೇಗಿದೆ

(ಕುಟುಂಬವು ತುಂಬಾ ಬಡತನದಿಂದ ಕೂಡಿದೆ/ತಾಯಿಯೂ ವೇಶ್ಯೆಯಾಗಿದ್ದರು/ಪಾಲಕರು ತುಂಬಾ ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರು/ಗಂಡನು ತುಂಬಾ ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದನು/ಇತರೆ)

೫೫ ವಾಸದ ನೆಲೆಯು ಎಲ್ಲಿದೆ

(ಉತ್ತಮ ಕಾಲೋನಿಯಲ್ಲಿದೆ/ಕೊಳಚೆ ಪ್ರದೇಶದಲ್ಲಿದೆ/ಮನೆಯ ಮಾದರಿ ಪಕ್ಕಾಮನೆ/ಕಚ್ಚಾ/ಹೆಂಚಿನಿಂದ ಕೂಡಿದೆ/ ಗುಡಿಸಲು)

೫೬ ಮನೆಯೊಳಗಿನ ಸೌಲಭ್ಯಗಳು ಹೇಗಿದೆ ಉತ್ತಮ/ಕಳಪೆ

೫೭ ಮನೆಗೆ ಸ್ನಾನದ ಕೋಣೆ ಇದೆಯೆ ಇದೆ/ಇಲ್ಲ

೫೮ ಶೌಚಾಲಯ ಇದೆಯೆ ಇದೆ/ಇಲ್ಲ

೫೯ ಅಡುಗೆ ಮನೆ ಇದೆಯೆ ಇದೆ/ಇಲ್ಲ

೬೦ ಮಲಗಲು ಪ್ರತ್ಯೇಕ ಕೊಠಡಿಗಳಿವೆಯೆ ಇದೆ/ಇಲ್ಲ

೬೧ ಎಷ್ಟು ಕೊಠಡಿಗಳಿಂದ ಮನೆ ಕೂಡಿದೆ ____________

೬೨ ಮನೆಯಲ್ಲಿ ಯಾರು ಯಾರು ವಾಸವಾಗಿರುವಿರಿ (ತಂದೆ (ತಾಯಿ/ಸಹೋದರರು/ದರಿ/ಮಕ್ಕಳು/ ಲೈಂಗಿಕ ಕಾರ್ಯಕರ್ತೆಯರು)

೬೩ ಮನೆಯಲ್ಲಿರುವವರಿಂದ ನಿಮ್ಮ ದಂಧೆಗೆ ತೊಂದರೆಯಾಗುವುದಿಲ್ಲವೆ? ಆಗುವುದು/ಇಲ್ಲ

೬೪ ಮನೆಯ ಪರಿಸರ ಹೇಗಿದೆ

(ಶುಚಿತ್ವ: ಉತ್ತಮವಾಗಿದೆ/ಪರವಾಗಿಲ್ಲ/ಕಳಪೆಯಾಗಿದೆ)

೬೫ ಗಾಳಿ, ಬೆಳಕು: ಉತ್ತಮವಾಗಿದೆ/ಪರವಾಗಿಲ್ಲ/ಕಳಪೆಯಾಗಿದೆ

೬೬ ನೀರು: ಉತ್ತಮವಾಗಿದೆ/ಪರವಾಗಿಲ್ಲ/ಕಳಪೆಯಾಗಿದೆ

೬೭ ನೀವು ಲೈಂಗಿಕ ವೃತ್ತಿಗೆ ಹೇಗೆ ಕಾಲಿರಿಸಿದಿರಿ

(ಸ್ವ-ಇಚ್ಛೆಯಿಂದ/ಪರಿಸ್ಥಿತಿಗೆ ಒಳಗಾಗಿ/ಒತ್ತಾಯಪೂರ್ವಕವಾಗಿ)

೬೮ ನೀವು ಈ ವೃತ್ತಿಯಿಂದ ದೂರ ಸರಿಯಬೇಕೆಂದಿರುವಿರಾ: ಹೌದು/ಇಲ್ಲ

೬೯ ಹೌದಾದರೆ ಯಾವಾಗ ದೂರ ಸರಿಯುವಿರಿ, ಏಕೆ ದೂರಸರಿಯಲು ಬಯಸುವಿರಿ

೭೦ ಇಲ್ಲವಾದರೆ ಏಕೆ ದೂರಸರಿಯಲು ಇಷ್ಟವಿಲ್ಲ

೭೧ ನೀವು ಈ ವೃತ್ತಿಯಿಂದ ದೂರ ಸರಿಯಬೇಕೆನಿಸಿದೆಯೆ; ಹೌದು/ಇಲ್ಲ

೭೨ ಹೌದಾಗಿದ್ದರೆ ಎಷ್ಟು ಬಾರಿ ಹೀಗೆನಿಸಿದೆ, ಅದಕ್ಕಿರುವ ಕಾರಣಗಳೇನು

೭೩ ಅಕಸ್ಮಾತ್ ಈ ವೃತ್ತಿಯಿಂದ ಬಿಡುಗಡೆಗೊಳ್ಳಲು ಅವಕಾಶ ದೊರೆತರೆ ಮತ್ತಾವ ವೃತ್ತಿಯಿಂದ ನೀವು

ಜೀವನ ನಿರ್ವಹಣೆ ಮಾಡಬಹುದು

೭೪ ನಿಮ್ಮ ದೃಷ್ಟಿಯಲ್ಲಿ ವೇಶ್ಯಾವೃತ್ತಿಗೆ ಭವಿಷ್ಯದಲ್ಲಿ ಒಳ್ಳೆಯ ಸ್ಥಿತಿ ಲಭಿಸಬಹುದೆ

(ಉತ್ತಮ ಸ್ಥಿತಿ ಬರಬಹುದು/ಈಗಿರುವುದಕ್ಕಿಂತ ಕೆಟ್ಟ ಸ್ಥಿತಿ ದೊರಕಬಹುದು/ಏನೂ ಹೇಳಲಾರೆ)

೭೫ ನಿಮ್ಮನ್ನು ಅವಲಂಭಿಸಿದ ಮಕ್ಕಳು ನಿಮಗಿವೆಯೆ, ಅವುಗಳ ಭವಿಷ್ಯದ ಬಗ್ಗೆ ಏನು ಯೋಚಿಸಿರುವಿರಿ

೭೬ ನಿಮ್ಮ ಮಕ್ಕಳ ಕುರಿತು ಇತರರ ದೃಷ್ಟಿಕೋನ ಹೇಗಿರಬಹುದು

(ಉತ್ತಮವಾಗಿದೆ/ ತುಂಬಾ ಕೆಟ್ಟದಾಗಿ (ಅವಮಾನದಿಂದ) ನೋಡುವರು/ಮಕ್ಕಳ ಕುರಿತು ಉದಾಸೀನತೆ ತೋರಬಹುದು)

೭೭ ಭವಿಷ್ಯದ ಕುರಿತು ಏನನ್ನು ಯೋಚಿಸಿರುವಿರಿ

೭೭.೧ ನಿಮ್ಮ ಜೀವನ ನಿರ್ವಹಣೆ ಕುರಿತು

೭೭.೨ ಅವಲಂಬಿತರ ಕುರಿತು

೭೭.೩ ಮಕ್ಕಳ ಭವಿಷ್ಯದ ಕುರಿತು

೭೭.೪ ಮುಂದಿನ ಜೀವನದ ಕುರಿತು

೭೮ ಲೈಂಗಿಕ ವೃತ್ತಿಯ ಕುರಿತು ನಿಮ್ಮ ಅನಿಸಿಕೆ ಏನು

(ಈ ವೃತ್ತಿಯನ್ನು ಸಮಾಜದಿಂದ ಕಿತ್ತೊಗೆಯಬೇಕು/ವೃತ್ತಿಗೆ ಕಾನೂನಾತ್ಮಕ ಬೆಂಬಲ ಸಿಗುವಂತಾಗಬೇಕು)

೭೯ ವೃತ್ತಿಯನ್ನು ಹೇಗೆ ತಡೆಗಟ್ಟಬಹುದು

೮೦ ವೃತ್ತಿನಿರತರಿಗೆ ಹೇಗೆ ಪುನರ್ವಸತಿ ಕಲ್ಪಿಸಬಹುದು

೮೧ ವೃತ್ತಿನಿರತರು ಮತ್ತು ಅವರ ಮಕ್ಕಳಿಗೆ ಉಂಟಾಗುವ ಸಮಸ್ಯೆಗಳಿಗೆ ನಿಮ್ಮ ದೃಷ್ಟಿಯಲ್ಲಿ ಹೇಗೆ ಪರಿಹಾರ ಕಂಡುಕೊಳ್ಳಬಹುದು

೮೧ ವೃತ್ತಿಯಲ್ಲಿರುವವರಿಗೆ ನಿಮ್ಮ ಕಿವಿಮಾತೇನು

೮೨ ನಿಮ್ಮ ಅಭಿಪ್ರಾಯದಲ್ಲಿ ಪಾಲಕರಿಗೆ ಯಾವ ಸ್ಥಾನವಿದೆ

೮೩ ತಲೆಹಿಡುಕರಿಗೆ ಯಾವ ಸ್ಥಾನವಿದೆ

೮೪ ಪೋಲಿಸರ ಕುರಿತು ನಿಮ್ಮ ಅಭಿಪ್ರಾಯವೇನು

೮೫ ಮಹಿಳಾ ಪೋಲಿಸ್ ಹಾಗೂ ಪುರುಷ ಪೋಲಿಸರಿಗೆ ಇರುವ ವ್ಯತ್ಯಾಸವೇನು

೮೬ ಕೋರ್ಟ್ ಇತ್ಯಾದಿ ನ್ಯಾಯ ವ್ಯವಸ್ಥೆಯ ಕುರಿತು ನಿಮ್ಮ ಅಭಿಪ್ರಾಯವೇನು

೮೭ ಅವರಿಂದ ನಿಮಗೆ ಅನ್ಯಾಯವಾಗಿದ್ದರೆ ಅಂಥವರಿಗೆ ಯಾವ ರೀತಿಯ ಶಿಕ್ಷೆ ವಿಧಿಸಬೇಕು

೮೮ ನಿಮ್ಮಂಥವರನ್ನು ಸರಿದಾರಿಗೆ ತಂದು ಗೌರವಯುತವಾಗಿ ಬಾಳಲು ಅವಕಾಶ ಮಾಡಿಕೊಡುವಂತಹ ಸಂಸ್ಥೆಗಳು ನಿಮ್ಮ ಪರಿಸರದಲ್ಲಿವೆಯೆ

೮೯ ಇದ್ದಲ್ಲಿ ಅವು ಯಾವ ಸಂಸ್ಥೆ, ಅವುಗಳ ಹೆಸರನ್ನು ಹೇಳಿ

೯೦ ಅಂತಹ ಸಂಸ್ಥೆಗಳ ಕುರಿತು ನಿಮ್ಮ ಅಭಿಪ್ರಾಯವೇನು

೯೧ ನಿಮ್ಮ ಬದುಕಿನಲ್ಲಿ ಸುಧಾರಣೆಯುಂಟುಮಾಡುವ ಯೋಜನೆಗಳನ್ನು ಸರ್ಕಾರ ಅನುಷ್ಠಾನಗೊಳಿಸಿದೆಯೆ

೯೨ ಸರ್ಕಾರೇತರ ಸಂಸ್ಥೆಗಳು ಈ ನಿಟ್ಟಿನಲ್ಲಿ ಕಾರ್ಯವೆಸಗಿವೆಯೆ

೯೩ ವೃತ್ತಿನಿರತರ ಮಕ್ಕಳ ಏಳ್ಗೆಗಾಗಿ ಸರ್ಕಾರ ಸರ್ಕಾರೇತರ ಸಂಸ್ಥೆಗಳು ಕಾರ್ಯನಿರತವಾಗಿವೆಯೆ

೯೪ ನಿಮ್ಮ ಮಗಳು ನಿಮ್ಮಂತೆ ವೃತ್ತಿಯಲ್ಲಿ ತೊಡಗದಂತಿರಲು ಸರ್ಕಾರ ಯಾವ ರೀತಿಯಲ್ಲಿ ಕಾರ್ಯಪ್ರವೃತ್ತರಾಗಬೇಕೆಂದು ಬಯಸುವಿರಿ

೯೫ ನಿಮ್ಮ ಮಗಳು ಉತ್ತಮ ಸ್ಥಿತಿಯವಳಾಗಲು ಸರ್ಕಾರೇತರ ಸಂಸ್ಥೆಗಳು ಯಾವ ರೀತಿಯಲ್ಲಿ ಕಾರ್ಯಪ್ರವೃತ್ತಗೊಳ್ಳಬೇಕು ಎಂದು ಆಶಿಸುವಿರಿ

೯೬ ವೃತ್ತಿನಿರತರ ಹೆಣ್ಣುಮಕ್ಕಳು ಉತ್ತಮ ಸ್ಥಿತಿಯಲ್ಲಿರಲು ಮಾಡಬಹುದಾದ ಕಾರ್ಯಗಳು ಯಾವುವೆಂದು ತಳಿದಿರುವಿರಿ

(ಸಮಾಜದ ಮುಖ್ಯವಾಹಿನಿಯಲ್ಲಿ ಸೇರುವುದು/ತಲೆಹಿಡುಕರಾಗಿ/ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುವುದು

೯೭ ಪ್ರತಿದಿನ ನಿಮ್ಮ ಮಕ್ಕಳು ನಿಮ್ಮೊಂದಿಗೇ ವಾಸಿಸುತ್ತವೆಯೆ ಹೌದು/ಇಲ್ಲ

೯೮ ನಿಮ್ಮ ಮಕ್ಕಳು ಗುಣಸ್ವಭಾವದಲ್ಲಿ ಹೇಗಿರಬೇಕೆಂದು ಆಪೇಕ್ಷಿಸುವಿರಿ

